# ಗುಣಮಟ್ಟದ ಶಿಕ್ಷಣ ಮೂಲ ಉದ್ದೇಶವಾಗಲಿ

## ರಾಜ್ಯ ಉನ್ನತ ಶಿಕ್ಷಣ ಪರಿಷತ್ ಉಪಾಧ್ಯಕ್ಷ ಡಾ.ಎಸ್.ಆರ್.ನಿರಂಜನ

**ಬೆಂಗಳೂರು:** ಗುಣಮಟ್ಟದ ಶಿಕ್ಷಣವು ಶೈಕ್ಷಣಿಕ ಸಂಸ್ಥೆಗಳ ಮೂಲ ಉದ್ದೇಶವಾಗಬೇಕು. ಆ ಮೂಲಕ ವಿದ್ಯಾರ್ಥಿಗಳನ್ನು ಬೆಳೆಸುವುದರ ಜತೆಗೆ ಶಿಕ್ಷಣ ಸಂಸ್ಥೆಗಳೂ ಬೆಳೆಯಬೇಕು ಎಂದು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ ಉಪಾಧ್ಯಕ್ಷ ಡಾ. ಎಸ್.ಆರ್.ನಿರಂಜನ ಹೇಳಿದ್ದಾರೆ.

ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆ ವತಿಯಿಂದ ನಡೆದ 25ನೇ ವಾರ್ಷಿಕ ಸ್ನೇಹ ಸಮ್ಮಿಲನ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಯು ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ನೀಡುವ ಕಾಯಕವನ್ನು ಬದ್ಧತೆಯಿಂದ ಕೈಗೊಳ್ಳುವ ಮೂಲಕ ರಾಜ್ಯದಲ್ಲಿ ಹೆಗ್ಗಳಿಕೆಯ ಶಿಕ್ಷಣ ಸಂಸ್ಥೆಯಾಗಿ ಹೊರ ಹೊಮ್ಮಿದೆ ಎಂದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ ವತಿಯಿಂದ ಕಳೆದ 25 ವರ್ಷಗಳಿಂದ ಸ್ನೇಹ ಸಮ್ಮಿಲನ ಕಾರ್ಯಕ್ರಮ ನಡೆಸುತ್ತಿದ್ದು, ಸಂಸ್ಥೆಯ ವಿವಿಧ ಶಾಖೆಗಳು ಮತ್ತು ಅಂಗಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಸುಮಾರು ಒಂದೂವರೆ ಸಾವಿರಕ್ಕೂ ಹೆಚ್ಚು ಸಿಬ್ಬಂದಿ ವರ್ಗ ಹಾಗೂ ಆಡಳಿತ ಮಂಡಳಿ ಒಗ್ಗಟ್ಟಾಗಿ ಒಂದು ದಿನ ಕಲೆತು, ಆ ವರ್ಷದಲ್ಲಿ ನಿವೃತ್ತರಾದ ಸಿಬ್ಬಂದಿಗಳಿಗೆ ಸನ್ಮಾನ ಮಾಡುವುದು. ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಸಹಭೋಜನ ಮಾಡುವ ಸತ್ಸಂಪ್ರದಾಯವನ್ನು ರೂಢಿಸಿಕೊಂಡು ಬಂದಿದೆ. ಆಡಳಿತ ಮಂಡಳಿ ಮತ್ತು ಸಿಬ್ಬಂದಿ ವರ್ಗದವರಲ್ಲಿ ಉತ್ತಮ ಬಾಂಧವ್ಯ ಬೆಳೆಸುವ ಮೂಲಕ ಸಿಬ್ಬಂದಿಯನ್ನು ಪ್ರೋತ್ಸಾಹಿಸುವುದು ಇದರ ಉದ್ದೇಶ ಎಂದು ಹೇಳಿದರು.



**ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಯ ವತಿಯಿಂದ ನಡೆದ 25ನೇ ವಾರ್ಷಿಕ ಸ್ನೇಹ ಸಮ್ಮಿಲನಕ್ಕೆ ಡಾ.ಎಸ್.ಆರ್. ನಿರಂಜನ ಚಾಲನೆ ನೀಡಿದರು. ನಾಡೋಜ ಡಾ:ವೂಡೆ ಪಿ. ಕೃಷ್ಣ, ಶೇಷಾದ್ರಿಪುರ ಸಮೂಹ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ ಇದ್ದರು.**

ಕನ್ನಡಪ್ರಭ ಮಂಗಳವಾರ 26.12.2023

# ಓದುವ ಹವ್ಯಾಸ ಬೆಳೆಸಿಕೊಳ್ಳಿ: ಬೋರಲಿಂಗಯ್ಯ

## ಕರ್ನಾಟಕ ಬರಹಗಾರರ ಮತ್ತು ಪ್ರಕಾಶಕರ ಸಂಘದಿಂದ ವಿವಿಧ ಲೇಖಕರ ಕೃತಿಗಳ ಲೋಕಾರ್ಪಣೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಉತ್ತಮ ಪುಸ್ತಕಗಳು ಸಮಾಜದ ಸ್ವಾಸ್ಥ್ಯ ಕಾಪಾಡುತ್ತವೆ. ವಿದ್ಯಾರ್ಥಿಗಳು ಪುಸ್ತಕ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕು ಎಂದು ಹಂಪಿ ಕನ್ನಡ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಪ್ರೊ.ಹಿ.ಚಿ.ಬೋರಲಿಂಗಯ್ಯ ಅಭಿಪ್ರಾಯಪಟ್ಟರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘವು ಶೇಷಾದ್ರಿಪುರಂ ಕಾಲೇಜಿನ ಸಹಯೋಗದಲ್ಲಿ ಶೇಷಾದ್ರಿಪುರಂ ಕಾಲೇಜಿನ ಸಮ್ಮೇಳನ ಸಭಾಂಗಣದಲ್ಲಿ ಆಯೋಜಿಸಿದ್ದ ವಿವಿಧ ಲೇಖಕರ ಕೃತಿಗಳ ಲೋಕಾರ್ಪಣೆ ಹಾಗೂ 2024ನೇ ಸಾಲಿನ ಕ್ಯಾಲೆಂಡರ್ ಅನಾವರಣ ಸಮಾರಂಭದಲ್ಲಿ ಅವರು ಮಾತನಾಡಿದರು.

ಎಲ್ಲ ಸೇವೆಗಳೂ ಇಂದು ಉದ್ಯಮಗಳಾಗುತ್ತಿವೆ. ಇಂತಹ ಸಂದರ್ಭದಲ್ಲಿ ಸಮಾಜದ ಸ್ವಾಸ್ಥ್ಯ ಕಾಪಾಡಬೇಕೆಂದರೆ ಅದು ಕೇವಲ ಉತ್ತಮ ಪುಸ್ತಕಗಳಿಂದ ಮಾತ್ರ ಸಾಧ್ಯ. ಆದ್ದರಿಂದ ವಿದ್ಯಾರ್ಥಿಗಳು ಉತ್ತಮ ಪುಸ್ತಕಗಳನ್ನು ಓದುವ ಹವ್ಯಾಸ ಬೆಳೆಸಿಕೊಳ್ಳಬೇಕು. ಪುಸ್ತಕಗಳ ಅಂಶಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಸಮಾಜಕ್ಕೆ ತಮ್ಮ ಋಣ ತೀರಿಸಬೇಕು ಎಂದು ಕರೆ ನೀಡಿದರು.



ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದಿಂದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಹಲವು ಕೃತಿಗಳನ್ನು ಪ್ರೊ.ಹಿ.ಚಿ.ಬೋರಲಿಂಗಯ್ಯ, ನಿಡಸಾಲೆ ಪುಟ್ಟಸ್ವಾಮಯ್ಯ, ಆರ್.ದೊಡ್ಡೇಗೌಡ, ಡಾ| ವೂಡೇ ಪಿ.ಕೃಷ್ಣ, ಡಾ| ಶರಣು ಹುಲ್ಲೂರು, ಎಂ.ಎನ್.ಅರ್ಚನಾ ತೇಜಸ್ವಿ ಲೋಕಾರ್ಪಣೆಗೊಳಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ಡಾ| ವೂಡೇ ಪಿ.ಕೃಷ್ಣ ಮಾತನಾಡಿದರು. ಇದೇ ಸಂದರ್ಭದಲ್ಲಿ ಹಲವು ಲೇಖಕರ ಎಂಟು ಕೃತಿ, 2024ನೇ ಸಾಲಿನ ಕ್ಯಾಲೆಂಡರ್ ಬಿಡುಗಡೆಗೊಳಿಸಲಾಯಿತು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, ಕಾರ್ಯದರ್ಶಿ ಆರ್.ದೊಡ್ಡೇಗೌಡ, ಪತ್ರಕರ್ತ ಡಾ| ಶರಣು ಹುಲ್ಲೂರು, ಕನ್ನಡ ಸಂಘದ ಸಂಚಾಲಕಿ ಎಂ.ಎನ್.ಅರ್ಚನಾ ತೇಜಸ್ವಿ ಹಾಜರಿದ್ದರು.

ಪ್ರಜಾವಾಣಿ ಭಾನುವಾರ ● ಡಿಸೆಂಬರ್ 24, 2023



ಇಸ್ರೊದ ಸಲಹೆಗಾರ ಡಾ. ಸುರೇಂದ್ರ ಪಾಲ್, ವೆಂಟ್ರಿಲೋಕ್ವಿಸ್ಟ್ ಇಂದುಶ್ರೀ ರವೀಂದ್ರ ಮತ್ತು ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಅವರು 'ವಿಶೇಷ ಘಟಿಕೋತ್ಸವ'ದಲ್ಲಿ ಪ್ರಮಾಣ ಪತ್ರ ವಿತರಿಸಿದರು

# ವಿಶೇಷ ಘಟಿಕೋತ್ಸವ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಪ್ರಾಕ್ರಮಿಕಾ ವೊಕೇಷನಲ್ ಇನ್‌ಸ್ಟಿಟ್ಯೂಟ್ (ಪಿವಿಐ), ನರ ವ್ಯತಿರಿಕ್ತ ವ್ಯಕ್ತಿಗಳಿಗೆ ಸೀಮಿತವಾದ 'ವಿಶೇಷ ಘಟಿಕೋತ್ಸವ' ಆಯೋಜಿಸಿತ್ತು.

ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ವಿಶೇಷ ವಿದ್ಯಾರ್ಥಿಗಳು (ನ್ಯೂರೋಡೈವರ್ಜೆಂಟ್) ಘಟಿಕೋತ್ಸವದ ಗೌನ್ ಧರಿಸಿ ವೇದಿಕೆ ಏರಿದ್ದರು. ಗಣ್ಯರು ಪ್ರಮಾಣಪತ್ರ ಪ್ರದಾನ ಮಾಡಿದರು.

ಇಸ್ರೊದ ಸಲಹೆಗಾರ ಡಾ. ಸುರೇಂದ್ರ ಪಾಲ್, ವೆಂಟ್ರಿಲೋಕ್ವಿಸ್ಟ್ ಇಂದುಶ್ರೀ ರವೀಂದ್ರ ಮತ್ತು ಗೌರವ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಅವರು ಪ್ರಮಾಣಪತ್ರಗಳನ್ನು ನೀಡಿದರು.

ಪಿವಿಐ ಸಂಸ್ಥಾಪಕ ನಿರ್ದೇಶಕಿ ಡಾ. ಗಾಯತ್ರಿ ನರಸಿಂಹನ್ ಮಾತನಾಡಿ, 'ಈ ವಿಶೇಷ ವಿದ್ಯಾರ್ಥಿಗಳಿಗೆ ಕೌಶಲ ತರಬೇತಿಯಿಂದ ವೃತ್ತಿ ಜೀವನ ಮಾಡಲು ಸಶಕ್ತರನ್ನಾಗಿಸಿದೆ. ಪಿವಿಐನ ಹಲವಾರು ವಿದ್ಯಾರ್ಥಿಗಳು ವಿವಿಧ ಕಂಪನಿಗಳಲ್ಲಿ ಯಶಸ್ವಿ ಉದ್ಯೋಗಗಳನ್ನು ಗಳಿಸಿದ್ದಾರೆ. ಡೇಟಾ ಎಂಟ್ರಿ, ಹೋಟೆಲ್ ಉದ್ಯಮ, ಕಚೇರಿ ಸ್ಥಾನಗಳು ಮತ್ತು ವಿನ್ಯಾಸ ಸಂಬಂಧಿತ ವೃತ್ತಿಗಳನ್ನು ಹೊಂದಿದ್ದಾರೆ' ಎಂದರು.

'ಏಕೀಕರಣ ಮಾರ್ಗಗಳು -ಒಂದು ಶಾಲೆ, ಹಲವು ಸಾಮರ್ಥ್ಯಗಳು' ಪುಸ್ತಕವನ್ನು ಈ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು.

ಪ್ರಜಾವಾಣಿ
ಭಾನುವಾರ • ಡಿಸೆಂಬರ್ 24, 2023



ಕಾರ್ಯಕ್ರಮದಲ್ಲಿ ಹಿ.ಚಿ.ಬೋರಲಿಂಗಯ್ಯ ಪುಸ್ತಕಗಳನ್ನು ಬಿಡುಗಡೆ ಮಾಡಿದರು. ಸಂಘದ ಕಾರ್ಯದರ್ಶಿ ಆರ್. ದೊಡ್ಡೆಗೌಡ, ವಿಮರ್ಶಕ ಎಸ್.ಆರ್. ವಿಜಯಶಂಕರ, ವೂಡೇ ಪಿ. ಕೃಷ್ಣ, ನಿಡಸಾಲೆ ಪುಟ್ಟಸ್ವಾಮಯ್ಯ, ಪುಸ್ತಕಗಳ ಲೇಖಕರು ಪಾಲ್ಗೊಂಡಿದ್ದರು

# 'ಉದ್ದೇಶ ಮರೆತ ಪುಸ್ತಕ ಪ್ರಾಧಿಕಾರ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಪುಸ್ತಕ ಸಂಸ್ಕೃತಿಯನ್ನು ಸದೃಢಗೊಳಿಸಬೇಕಾದ ಕನ್ನಡ ಪುಸ್ತಕ ಪ್ರಾಧಿಕಾರವು ಮೂಲ ಉದ್ದೇಶದಿಂದ ವಿಮುಖವಾಗಿ, ಪುಸ್ತಕ ಪ್ರಕಟಣೆಗೆ ಸೀಮಿತವಾಗಿರುವುದು ಖಂಡನೀಯ' ಎಂದು ಜಾನಪದ ವಿದ್ವಾಂಸ ಹಿ.ಚಿ.ಬೋರಲಿಂಗಯ್ಯ ಬೇಸರ ವ್ಯಕ್ತ ಪಡಿಸಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ನಗರದಲ್ಲಿ ಶನಿವಾರ ಹಮ್ಮಿಕೊಂಡ ಕಾರ್ಯಕ್ರಮ-ದಲ್ಲಿ ವಿವಿಧ ಲೇಖಕರ 8 ಪುಸ್ತಕಗಳನ್ನು ಬಿಡುಗಡೆ ಮಾಡಿ, ಮಾತನಾಡಿದರು.

'ಪುಸ್ತಕ ಪ್ರಾಧಿಕಾರವು ಲೇಖಕರು, ಪ್ರಕಾಶಕರು ಮತ್ತು ಓದುಗರ ನಡುವೆ ಸಮನ್ವಯ ಸಾಧಿಸಿ, ಪುಸ್ತಕ ಸಂಸ್ಕೃತಿಯನ್ನು ಬೆಳೆಸುವಂತಾಗಬೇಕು. ರಾಜ್ಯದಲ್ಲಿ ಪ್ರತಿ ವರ್ಷ ಸುಮಾರು 8 ಸಾವಿರ ಪುಸ್ತಕಗಳು ಪ್ರಕಟವಾಗುತ್ತಿವೆ. ಇದು ಕನ್ನಡ ಭಾಷೆಯ ಸೃಜನಶೀಲತೆಗೆ ಸಾಕ್ಷಿ. ಪ್ರಕಟಗೊಂಡ ವರ್ಷವೇ ಆ ಪುಸ್ತಕಗಳನ್ನು ಜನರಿಗೆ ತಲುಪಿಸುವ ಕೆಲಸ ಸರ್ಕಾರದಿಂದ ಆಗುತ್ತಿಲ್ಲ. ವಿವಿಧ ಕಾಮಗಾರಿಗಳಿಗೆ ಸಾವಿರಾರು ಕೋಟಿ ರೂಪಾಯಿ ಹಣ ವೆಚ್ಚ ಮಾಡುವ ಸರ್ಕಾರ, ಪುಸ್ತಕ ಖರೀದಿಗೆ ಅಗತ್ಯವಿರುವ ₹10 ಕೋಟಿ ಹಣ ನೀಡಲು ಹಿಂದೆ ಮುಂದೆ ನೋಡುತ್ತಿರುವುದು ನಮ್ಮ ವ್ಯವಸ್ಥೆಯ ಜ್ಞಾನ ದಾರಿದ್ರ್ಯ' ಎಂದು ಅಸಮಾಧಾನ ವ್ಯಕ್ತಪಡಿಸಿದರು.

2024ನೇ ಸಾಲಿನ ಕ್ಯಾಲೆಂಡರ್ ಬಿಡುಗಡೆ ಮಾಡಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, 'ಪುಸ್ತಕ ಸಂಸ್ಕೃತಿ ಸಮಾಜದ ಮೌಢ್ಯವನ್ನು ಅಳಿಸಲು ಮತ್ತು ಸುಸಂಸ್ಕೃತ ಸಮಾಜ ನಿರ್ಮಾಣ ಮಾಡಲು ಸಹಕಾರಿ. ಒಂದು ತಲೆಮಾರಿನ ಅನುಭವ, ಜ್ಞಾನವನ್ನು ಇನ್ನೊಂದು ತಲೆಮರಿಗೆ ತಲುಪಿಸುವ ಸಾಧನ ಪುಸ್ತಕ. ಸಂಕಷ್ಟದಲ್ಲಿರುವ ಪುಸ್ತಕೋದ್ಯಮದ ಸಮಸ್ಯೆಗಳನ್ನು ಆಳುವವರು ಗಮನಿಸಬೇಕು' ಎಂದರು.

ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, 'ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಕನ್ನಡ ಪುಸ್ತಕ ಗಳನ್ನು ಖರೀದಿಸಲು ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ₹ 10 ಕೋಟಿ ಅನುದಾನವನ್ನು ಕಳೆದ ಬಜೆಟ್‌ನಲ್ಲಿ ಘೋಷಿಸಿದ್ದರು. ಆ ಹಣ ಬಿಡುಗಡೆಗೆ ಆರ್ಥಿಕ ಇಲಾಖೆ ಅನಗತ್ಯ ಕಾರಣಗಳನ್ನು ಕೇಳಿ ಸತಾಯಿಸುತಿದೆ. ಸಿದ್ದರಾಮಯ್ಯ ಅವರು ತಕ್ಷಣ ಹಣ ಬಿಡುಗಡೆ ಮಾಡಿಸಬೇಕು' ಎಂದು ಮನವಿ ಮಾಡಿದರು.

## ಬಿಡುಗಡೆಯಾದ ಪುಸ್ತಕಗಳು

ಆರ್.ಕೆ. ಮಧುಕರ್ ಅವರ 'ದೇಶ ವಿದೇಶದ ಅದ್ಭುತ ಲೋಕಕಥೆಗಳು' (ಸಪ್ನ ಬುಕ್ ಹೌಸ್), ಕೆ.ನಟರಾಜ್ ಅವರ 'ದುಬೈ ನಾಡಿನಲ್ಲಿ ಇಪ್ಪತ್ತು ದಿನಗಳು' (ಸುಧನ್ವ ಪಬ್ಲಿಕೇಷನ್ಸ್), ಎಸ್.ಆರ್. ವಿಜಯಶಂಕರ್ ಅವರ 'ಒಡನಾಟ' (ವಸಂತ ಪ್ರಕಾಶನ), ಮಂಡಗದ್ದೆ ಶ್ರೀನಿವಾಸಯ್ಯ ಅವರ 'ಸ್ವಾಮಿ ವಿವೇಕಾನಂದ' (ನಿರಂತರ), ಶ್ರೀಧರ್ ರಾಮಲಿಂಗಪ್ಪ ಅವರ 'ಅಸ್ತಿಯೋ ಅಸ್ತಿತ್ವವೋ' (ನಿರಂತರ), ಶ್ರೀಧರ್ ಎಚ್.ಜಿ. ಅವರ 'ನೆನಪಾಗಿ ಉಳಿದವರು' (ಅನ್ನಪೂರ್ಣ ಪಬ್ಲಿಷಿಂಗ್ ಹೌಸ್), ನಿಡಸಾಲೆ ಪುಟ್ಟಸ್ವಾಮಯ್ಯ ಅವರ 'ಬೆಳೆಯೋಣ ಬನ್ನಿ' (ಗೀತಾಂಜಲಿ ಪಬ್ಲಿಕೇಷನ್ಸ್) ಹಾಗೂ ಬಿ.ದಿವ್ಯಾ-ನಂದಮೂರ್ತಿ ಅವರ 'ಅನುಭವದ ಜೇನಹನಿ ಅಮೃತದ ಸಂಜೀವಿನಿ' W(ಸ್ನೇಹ ಬುಕ್ ಹೌಸ್) ಪುಸ್ತಕಗಳು ಬಿಡುಗಡೆಯಾದವು.

ಸಂಯುಕ್ತ ಕರ್ನಾಟಕ
ಭಾನುವಾರ 24 ಡಿಸೆಂಬರ್ 2023

# ಪುಸ್ತಕ ಪ್ರಕಟಣೆಗೆ ಸೀಮಿತವಾದ ಪ್ರಾಧಿಕಾರ



ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ಶೇಷಾದ್ರಿಪುರ ಕಾಲೇಜು ಆವರಣದಲ್ಲಿ ಏರ್ಪಡಿಸಿದ್ದ ವಿವಿಧ ಲೇಖಕರ ಕೃತಿಗಳ ಬಿಡುಗಡೆ ಸಮಾರಂಭವನ್ನು ಶಿಕ್ಷಣ ತಜ್ಞಡಾ.ವೂಡೇ ಪಿ. ಕೃಷ್ಣ ಉದ್ಘಾಟಿಸಿದರು.

ಬೆಂಗಳೂರು: ಪುಸ್ತಕ ಸಂಸ್ಕೃತಿಯನ್ನು ಸದೃಢಗೊಳಿಸಬೇಕಾದ ಕನ್ನಡ ಪುಸ್ತಕ ಪ್ರಾಧಿಕಾರ ಮೂಲ ಉದ್ದೇಶದಿಂದ ವಿಮುಖವಾಗಿ ಪುಸ್ತಕ ಪ್ರಕಟಣೆಗೆ ಸೀಮಿತವಾಗಿರುವುದು ಖಂಡನೀಯ ಎಂದು ಜಾನಪದ ವಿದ್ವಾಂಸ ಹಿ.ಚಿ.ಬೋರಲಿಂಗಯ್ಯ ಬೇಸರ ವ್ಯಕ್ತಪಡಿಸಿದರು. ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ಶೇಷಾದ್ರಿಪುರ ಕಾಲೇಜಿನಲ್ಲಿ ಶನಿವಾರ ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ವಿವಿಧ ಲೇಖಕರ 8 ಪುಸ್ತಕ ಬಿಡುಗಡೆ ಮಾಡಿ ಮಾತನಾಡಿದ ಅವರು, ಪ್ರಾಧಿಕಾರ ಲೇಖಕರು, ಪ್ರಕಾಶಕರು ಮತ್ತು ಓದುಗರ ನಡುವೆ ಸಮನ್ವಯ ಸಾಧಿಸಿ, ಪುಸ್ತಕ ಸಂಸ್ಕೃತಿಯನ್ನು ಬೆಳೆಸುವಂತಾಗಬೇಕು. ರಾಜ್ಯದಲ್ಲಿ ಪ್ರತಿವರ್ಷ ಅಂದಾಜು 8 ಸಾವಿರ ಪುಸ್ತಕಗಳು ಪ್ರಕಟವಾಗುತ್ತಿವೆ. ಇದು ಕನ್ನಡ ಭಾಷೆಯ ಸೃಜನಶೀಲತೆಗೆ ಸಾಕ್ಷಿ.

ಪ್ರಕಟಗೊಂಡ ವರ್ಷವೇ ಆ ಪುಸ್ತಕಗಳನ್ನು ಜನರಿಗೆ ತಲುಪಿಸುವ ಕೆಲಸ ಸರ್ಕಾರದಿಂದ ಆಗುತ್ತಿಲ್ಲ. ವಿವಿಧ ಕಾಮಗಾರಿಗಳಿಗೆ ಸಾವಿರಾರು ಕೋಟಿ ಹಣ ವೆಚ್ಚ ಮಾಡುವ ಸರ್ಕಾರ, ಪುಸ್ತಕ ಖರೀದಿಗೆ ಅಗತ್ಯವಿರುವ 10 ಕೋಟಿ ರೂ. ನೀಡಲು ಹಿಂದೆ ಮುಂದೆ ನೋಡುತ್ತಿರುವುದು ನಮ್ಮ ವ್ಯವಸ್ಥೆಯ ಜ್ಞಾನ ದಾರಿದ್ರ್ಯ ಎಂದು ಅಸಮಾಧಾನ ವ್ಯಕ್ತಪಡಿಸಿದರು. ಶೇಷಾದ್ರಿಪುರ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಕಾರ್ಯದರ್ಶಿ ವೂಡೇ ಡಾ.ಪಿ.ಕೃಷ್ಣ, 2024ನೇ ಸಾಲಿನ ಕ್ಯಾಲೆಂಡರ್ ಬಿಡುಗಡೆ ಮಾಡಿದರು.

ಸಂಯುಕ್ತ ಕರ್ನಾಟಕ
04 | ಗುರುವಾರ 21 ಡಿಸಂಬರ್ 2023
ಬೆಂಗಳೂರು | BENGALURU

# ಗಾಂಧಿ ತತ್ವಾದರ್ಶಗಳು ಮಾದರಿ

ಬೆಂಗಳೂರು: ಗಾಂಧೀಜಿ ಅವರ ತತ್ವಾದರ್ಶಗಳು ಭಾರತಕ್ಕೆ ಸಿಮೀತವಾಗಿಲ್ಲ, ಇಡೀ ಪ್ರಪಂಚಕ್ಕೆ ಮಾದರಿಯಾಗುತ್ತಾ ಸಾಗುತ್ತಿರುವುದು ವಿಶೇಷ ಎಂದು ವಿಧಾನ ಪರಿಷತ್ ಮಾಜಿ ಸಭಾಪತಿ ಡಾ.ಬಿ.ಎಲ್.ಶಂಕರ್ ಹೇಳಿದರು.

ಶೇಷಾದ್ರಿಪುರಂ ಕಾಲೇಜು ಗಾಂಧಿ ಅಧ್ಯಯನ ಕೇಂದ್ರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಸ್ಮರಣೆ-75ರ ಪ್ರಯುಕ್ತ ಹಮ್ಮಿಕೊಳ್ಳಲಾಗಿದ್ದ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ಉದ್ಘಾಟಿಸಿ ಮಾತನಾಡಿದರು. ಗಾಂಧೀಜಿಯವರ ಅಹಿಂಸಾ ಹೋರಾಟದ ಪರಿಯನ್ನು ಘನವೆತ್ತ ವಿಶ್ವಸಂಸ್ಥೆ ಕೂಡ ವಿಭಿನ್ನವಾಗಿ ಗೌರವಿಸುತ್ತಾ ಬರುತ್ತಿದೆ. ಜೊತೆಗೆ ಬೇರೆ ಬೇರೆ ರಾಷ್ಟ್ರಗಳು ಕೂಡ ಅವರ ಚಿಂತನೆಗಳಿಗೆ ಮೆಚ್ಚುಗೆ ವ್ಯಕ್ತಪಡಿಸುತ್ತಿವೆ ಎಂದು ತಿಳಿಸಿದರು.

ಗಾಂಧೀಜಿ ಅವರನ್ನು ಸಾಕಷ್ಟು ಮಂದಿ ಇಂದಿಗೂ ಮಹಾತ್ಮ ಎಂದು ಪೂಜಿಸಿ ಆರಾಧಿಸುವವರಿದ್ದಾರೆ. ಜೊತೆಗೆ ಅವರನ್ನು ಚಾಣಾಕ್ಷ ರಾಜಕಾರಣಿ ಎಂದು ವಿಮರ್ಶೆ ಮಾಡುವ ವ್ಯಕ್ತಿಗಳೂ ಇದ್ದಾರೆ. ಗಾಂಧೀಜಿಗೆ ಗೌರವ ಕೊಡುವುದೆಂದರೆ ಅದು ಅವರ ತತ್ವಾದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಸಾಗುವುದು ಬಹುಮುಖ್ಯವಾಗುತ್ತದೆ ಎಂದರು.

ಗಾಂಧೀಜಿ ಸ್ವಾತಂತ್ರ್ಯ ಚಳುವಳಿಗೆ ಬರುವ ಮುನ್ನ ಬ್ರಿಟಿಷರಿಂದ ನಮಗೆ ಬೇಕಾದ ಸ್ವಾತಂತ್ರ್ಯವನ್ನು ಭಿಕ್ಷೆಯಂತೆ ಬೇಡುವ ಪರಿಸ್ಥಿತಿ ಇತ್ತು. ಆದರೆ ಸ್ವಾತಂತ್ರ್ಯ ಚಳುವಳಿಗೆ ಗಾಂಧೀಜಿ ಪ್ರವೇಶ ನೀಡಿ ಅಹಿಂಸಾ ಹೋರಾಟದ ಮೂಲಕ ಸ್ವಾತಂತ್ರ್ಯ ಪಡೆದ ಬಗೆಯೇ ವಿಶೇಷತೆಯಿಂದ ಕೂಡಿದೆ ಎಂದು ಹೇಳಿದರು.

ಗಾಂಧೀಜಿ ನೀಡಿದ "ನನ್ನ ಜೀವನವೇ ನನ್ನ ಸಂದೇಶ" ಎಂಬುದನ್ನು ಪ್ರಪಂಚದಲ್ಲಿ ಯಾವ ವ್ಯಕ್ತಿಯು ಇಂತಹ ಸಂದೇಶವನ್ನು ಕೊಡಲು ಸಾಧ್ಯವಿಲ್ಲ ಎಂದು ನಂಬಿರುವೆ. ತಾವು ಹೇಳಿದ ತರಹ ಬದುಕಿ ತೋರಿಸಿ ಶ್ರೇಷ್ಠ ಮಹಾತ್ಮರೆನಿಸಿಕೊಂಡರು ಗಾಂಧೀಜಿ. ಇಂತಹ ಸಂದೇಶಗಳು ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಳ್ಳುತ್ತವೆ ಎಂದು ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ದೇಶದ ನಿಜವಾದ ಶಕ್ತಿ ಹಳ್ಳಿಗಳು. ಗ್ರಾಮಗಳು ಅಭಿವೃದ್ಧಿ ಹೊಂದಿದಾಗ ಮಾತ್ರ ರಾಷ್ಟ್ರದ ಸರ್ವಾಂಗೀಣ ಪ್ರಗತಿ ಸಾಧ್ಯವಾಗುತ್ತದೆ ಎಂಬ ಮೊದಲ ಪರಿಕಲ್ಪನೆಯನ್ನು ಗಾಧೀಜಿ ಕೊಟ್ಟರು. ಇದು ಇಂದಿಗೂ ಪ್ರಸ್ತುತವಾದದ್ದು ಆ ನಿಟ್ಟಿನಲ್ಲಿ ಗ್ರಾಮಗಳ ಸರ್ವತೋಮುಖ ಬೆಳವಣಿಗೆಗೆ ಹೆಚ್ಚು ಗಮನ ನೀಡುತ್ತಿಲ್ಲ ಎಂಬುದನ್ನು ಕಾಣಬಹುದಾಗಿದೆ ಎಂದರು. ವಿಶ್ರಾಂತ ಕುಲಪತಿ ಪ್ರೊ.ಎಸ್.ಚಂದ್ರಶೇಖರ್, ಅಂಕಣಕಾರ ಡಾ.ಎ.ನಾರಾಯಣ, ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ಎನ್.ಆರ್.ವಿಶುಕುಮಾರ್, ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಡಾ.ಬಿ.ಜಿ.ಭಾಸ್ಕರ್, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಡಾ.ನರಸಿಂಹಮೂರ್ತಿ ಹಳೇಹಟ್ಟಿ ಹಾಗೂ ಇತರರಿದ್ದರು.



ಶೇಷಾದ್ರಿಪುರಂ ಕಾಲೇಜು ಗಾಂಧಿ ಅಧ್ಯಯನ ಕೇಂದ್ರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ಗಾಂಧಿ ಸ್ಮರಣೆ-75ರ ಪ್ರಯುಕ್ತ ಬುಧವಾರ ರಾಜ್ಯಮಟ್ಟದ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಲಾಗಿತ್ತು.

ಉದಯವಾಣಿ ಗುರುವಾರ, ಡಿಸೆಂಬರ್ 21, 2023

# ಕಸ ವಿಲೇವಾರಿ ಮಾಹಿತಿಗೆ 93539 02092ಗೆ ಕರೆ ಮಾಡಿ

ಬೆಂಗಳೂರು: ತ್ಯಾಜ್ಯ ಪ್ರತ್ಯೇಕಿಸಿ ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡುವ ಬಗ್ಗೆ ಬೆಂಗಳೂರಿಗರಿಗೆ ಮಾಹಿತಿ ನೀಡುವ ಉದ್ದೇಶದಿಂದ ಸರ್ಕಾರೇತರ ಸಂಸ್ಥೆ(ಎನ್‌ಜಿಒ) 'ಸಾಹಸ್' ಬಿಬಿಎಂಪಿ ಸಹಯೋಗದೊಂದಿಗೆ 'ಸರ್ಕ್ಯುಲರ್ ವೇಸ್ಟ್ ಸೊಲ್ಯೂಷನ್' ಹೆಸರಿನ ಟೋಲ್ ಫ್ರೀ ನಂಬರ್ ಸಹಾಯವಾಣಿ ಪ್ರಾರಂಭಿಸಿದೆ. ಪ್ರೆಸ್‌ಕ್ಲಬ್‌ನಲ್ಲಿ ಬುಧವಾರ ಸುದ್ದಿಗೋಷ್ಠಿಯಲ್ಲಿ ಸಾಹಸ್ ಸಂಸ್ಥೆಯ ಪ್ರಾಜೆಕ್ಟ್ ಕನ್ಸಲ್‌ಟೆಂಟ್ ಡಾ.ಶಾಂತಿ ಮಾತನಾಡಿ, ಬೆಂಗಳೂರಿನಲ್ಲಿ ಹಸಿ ಕಸ, ಒಣ ಕಸ ವಿಂಗಡನೆ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವ ಉದ್ದೇಶದಿಂದ '93539 02092' ಸಹಾಯವಾಣಿ ರೂಪಿಸಿದ್ದೇವೆ ಎಂದು ಹೇಳಿದರು. ಈ ಟೋಲ್‌ಫ್ರೀ ನಂಬರ್‌ಗೆ ಕರೆ ಮಾಡಿ ಕನ್ನಡ, ಆಂಗ್ಲ ಭಾಷೆಯಲ್ಲಿ ಕಸ ವಿಲೇವಾರಿ ಬಗ್ಗೆ ಬೆಂಗಳೂರಿಗರು ಮಾಹಿತಿ ಪಡೆದುಕೊಳ್ಳಬಹುದು. ತ್ಯಾಜ್ಯದಿಂದ ಗೊಬ್ಬರ ಮಾಡುವ ವಿಧಾನ, ಮನೆ ಸಮಾರಂಭದಲ್ಲಿ ಶೂನ್ಯ ಕಸ ನಿರ್ವಹಣೆ ಬಗ್ಗೆಯೂ ತಿಳಿದುಕೊಳ್ಳಬಹುದು. ಸಹಾಯವಾಣಿ ಸಿಬ್ಬಂದಿ ಕಸ, ತ್ಯಾಜ್ಯ ವಿಲೇವಾರಿ ಬಗ್ಗೆ ಸಂಪೂರ್ಣ ಮಾಹಿತಿ ನೀಡಲಿದ್ದಾರೆ. ಸಾಹಸ್ ಎನ್‌ಜಿಒ ಸಂಸ್ಥೆ ಹಲವು ಸಮಾಜಮುಖಿ ಕೆಲಸಗಳನ್ನು ಮಾಡುತ್ತಿದ್ದು, ಸಾರ್ವಜನಿಕರಿಗೆ ಅನುಕೂಲ ಕಲ್ಪಿಸಿರುವ ನಿಟ್ಟಿನಲ್ಲಿ ಈ ಹೊಸ ಸಹಾಯವಾಣಿ ಪ್ರಾರಂಭಿಸಲಾಗಿದೆ ಎಂದು ತಿಳಿಸಿದರು.



ಕನ್ನಡಪ್ರಭ
ಗುರುವಾರ 21.12.2023

# ಗಾಂಧೀಜಿ ಬಗ್ಗೆ ಮಾತನಾಡುವುದಕ್ಕೂ ಗಟ್ಟಿಯಾದ ನೈತಿಕತೆ ಅಗತ್ಯ: ಶಂಕರ್

## ಗೋಡ್ಸೆಗೆ ದೇವಸ್ಥಾನ ಕಟ್ಟಿದರೂ ಗಾಂಧೀಜಿ ಎಲ್ಲ ಕಾಲಕ್ಕೂ ಪ್ರಸ್ತುತ: ಮಾಜಿ ಸಭಾಪತಿ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಜನಸಾಮಾನ್ಯರನ್ನು ಒಳಗೊಂಡು ಹೊಸ ಪ್ರಯೋಗದ ಸ್ವಾತಂತ್ರ್ಯ ಹೋರಾಟ ನಡೆಸಿದ ಗಾಂಧೀಜಿ ಅವರ ಜೀವನ ಹಾಗೂ ಅವರು ತಿಳಿಸಿದ ವಿಚಾರಗಳಿಂದ ಬದುಕಿಗೆ ಸದಾ ಸ್ಫೂರ್ತಿಯಾಗುತ್ತಾರೆ ಎಂದು ಮಾಜಿ ಸಭಾಪತಿ ಡಾ। ಬಿ.ಎಲ್.ಶಂಕರ್ ಹೇಳಿದರು.

'ಗಾಂಧಿ ಅಧ್ಯಯನ ಕೇಂದ್ರ', 'ಕರ್ನಾಟಕ ಗಾಂಧಿ ಸ್ಮಾರಕ ನಿಧಿ' ಬುಧವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ 'ಬಾಪೂ ನಂತರದ ಭಾರತ, ಆಶಯ ಮತ್ತು ಸವಾಲುಗಳು' ರಾಜ್ಯ ಮಟ್ಟದ ವಿಚಾರ ಸಂಕಿರಣದಲ್ಲಿ ಅವರು ಮಾತನಾಡಿದರು.

ಗಾಂಧೀಜಿ ಬರುವವರೆಗೆ ಸ್ವಾತಂತ್ರ್ಯ ಹೋರಾಟ ಕೆಲವರಿಗೆ ಮಾತ್ರ ಸೀಮಿತವಾಗಿತ್ತು. ಆದರೆ, ಜನತೆಯನ್ನು ಹೋರಾಟದಲ್ಲಿ ತೊಡಗಿಸಿಕೊಂಡಿದ್ದು ಅವರ ಚತುರತೆಯ ನಿದರ್ಶನ. ಸತ್ಯಾಗ್ರಹ, ಉಪವಾಸ, ಪಾದಯಾತ್ರೆಯಂತಹ ಹೊಸ ಪ್ರಯೋಗ ಮಾಡುತ್ತ ಅಹಿಂಸಾ ಸ್ವರೂಪದ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ದಿಕ್ಕು ತೋರಿಸಿದವರು ಗಾಂಧೀಜಿ. ಅವರು ದೈವತ್ವದ ಸ್ಥಾನಕ್ಕೆ ಏರಿದ್ದರೆ ಅದಕ್ಕೆ ಅವರು ಜೀವನ ನಡೆಸಿದ ರೀತಿಯೇ ಕಾರಣ ಎಂದರು.

ಗಾಂಧೀಜಿ ಬಗ್ಗೆ ಮಾತನಾಡುವುದಕ್ಕೂ ಗಟ್ಟಿಯಾದ ನೈತಿಕತೆ ಅಗತ್ಯ. ಇಡೀ ಪ್ರಪಂಚದಲ್ಲಿ 'ನನ್ನ ಜೀವನವೇ ನನ್ನ ಸಂದೇಶ' ಎಂದು ಹೇಳಿದ ಮತ್ತೊಬ್ಬ ನಾಯಕ ಇಲ್ಲ. ಹೋರಾಟದ ವಿಚಾರದಲ್ಲಿ ಜಯಪ್ರಕಾಶ್ ನಾರಾಯಣ್ ಅವರು ಗಾಂಧೀಜಿ ಸನಿಹಕ್ಕೆ ಬರುತ್ತಾರಾದರೂ ಅಧಿಕಾರ ರಾಜಕಾರಣದಲ್ಲಿ ಮಹಾತ್ಮರು ಏರಿದ ಎತ್ತರಕ್ಕೆ ಯಾರು ಬರಲಾರರು ಎಂದರು.



ಗಾಂಧಿ ಅಧ್ಯಯನ ಕೇಂದ್ರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯಿಂದ ಬುಧವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ 'ಬಾಪೂ ನಂತರದ ಭಾರತ, ಆಶಯ ಮತ್ತು ಸವಾಲುಗಳು' ರಾಜ್ಯ ಮಟ್ಟದ ವಿಚಾರ ಸಂಕಿರಣ ನಡೆಯಿತು.

ಗಾಂಧಿಯವರನ್ನು ಲೇವಡಿ ಮಾಡುವವರಿಗೆ ಲಾಭ ಇರುವ ಕಾಲಘಟ್ಟದಲ್ಲಿ ನಾವಿರುವುದು ಖೇದನೀಯ. ಗಾಂಧೀಜಿ ಅವರನ್ನು ಯಾರು ಒಪ್ಪಲಿ ಬಿಡಲಿ, ಗೋಡ್ಸೆಗೆ ದೇವಸ್ಥಾನವನ್ನೇ ಕಟ್ಟಲಿ. ಆದರೆ, ಗಾಂಧೀಜಿ ಎಲ್ಲಾ ಕಾಲಕ್ಕೂ ಪ್ರಸ್ತುತ ಎಂದು ಹೇಳಿದರು.

ಕೇಂದ್ರೀಯ ವಿವಿ ವಿಶ್ರಾಂತ ಕುಲಪತಿ ಪ್ರೊ.ಎಸ್. ಚಂದ್ರಶೇಖರ್ ಮಾತನಾಡಿ, ಸಮಾಜ ಸುಧಾರಣೆ, ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ ಆಗಿನವರ ಧ್ಯೇಯವಾಗಿತ್ತು. ಆದರೆ, ಗಾಂಧೀಜಿ ಯಾವುದೇ ಚೌಕಟ್ಟಿಗೆ ಸೀಮಿತವಾದವರಲ್ಲ. ರಾಜಕೀಯ ಆಧ್ಯಾತ್ಮೀಕರಣ ಆಗಬೇಕೆಂಬ ಅವರ ಕರೆ ವಿಶಿಷ್ಟ ಎಂದರು.

ಅವರು ಕೇವಲ ನಾಯಕರನ್ನು ನಂಬಿ ಸ್ವಾತಂತ್ರ್ಯ ಹೋರಾಟ ಮಾಡಲಿಲ್ಲ. ಸಾಂಸ್ಥಿಕತೆಗೆ ಸೀಮಿತವಾಗದೆ ಎಲ್ಲರಿಗೂ ಒಪ್ಪಿಗೆಯಾಗುವ ವಿಚಾರಗಳ ಜೊತೆಗೆ, ಅನಕ್ಷರಸ್ಥರು, ಮಹಿಳೆಯರ ಕೈಗೆ ಹೋರಾಟ ಕೊಟ್ಟಿದ್ದು, ಮುಸ್ಲಿಮರು ಸಕ್ರಿಯವಾಗಿ ಹೋರಾಟಕ್ಕೆ ಬರುವಂತೆ ಮಾಡಿದ್ದು ಅವರ ಹೆಗ್ಗಳಿಕೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಡಾ. ವೂಡೇ ಪಿ.ಕೃಷ್ಣ ಗಾಂಧೀಜಿ ಬಯಸಿದ ಆಡಳಿತ ವ್ಯವಸ್ಥೆ ಇಂದು ಇದೆಯಾ ಎಂಬ ಪ್ರಶ್ನೆ ನಮ್ಮ ಎದುರಿಗಿದೆ. ಅಧಿಕಾರ ವಿಕೇಂದ್ರೀಕರಣದ ಬದಲು ಅಧಿಕಾರ ಕೇಂದ್ರೀತ ರಾಜಕಾರಣ ಕಾಣುತ್ತಿದ್ದೇವೆ. ಹಳ್ಳಿಗೂ ದಿಲ್ಲಿಯ ಸಂದೇಶ ಬರುವ ವಾತಾವರಣದಲ್ಲಿ ಇದ್ದೇವೆ. ಅವರು ಬಯಸಿದಂತೆ ಸಾಮಾಜಿಕ, ನೈತಿಕ, ಆರ್ಥಿಕ ಸ್ವಾತಂತ್ರ್ಯ ಪಡೆಯುವತ್ತ ಹೆಜ್ಜೆ ಇಡಬೇಕಿದೆ ಎಂದರು.

ಪ್ರೊ. ಎಂ.ಜಿ.ಚಂದ್ರಶೇಖರಯ್ಯ, ಡಾ। ಎ. ನಾರಾಯಣ ವಿಷಯ ಮಂಡಿಸಿದರು. ಪ್ರಾಚಾರ್ಯ ಪ್ರೊ.ಬಿ.ಜಿ.ಭಾಸ್ಕರ್ ಇದ್ದರು.

ವಿಜಯವಾಣಿ

21/12/02023

# ಗಾಂಧಿ-ಅಂಬೇಡ್ಕರ್ ಜಗತ್ತನ್ನು ಮಾನಸಿಕವಾಗಿ ಆವರಿಸಿಕೊಂಡಿದ್ದಾರೆ: ಪ್ರೊ.ಎಚ್.ಟಿ.ಪೋತೆ ಅಭಿಮತ






ಬೆಂಗಳೂರು: ಮಹಾತ್ಮ ಗಾಂಧೀಜಿ ಹಾಗೂ ಡಾ.ಬಿ.ಆರ್.ಅಂಬೇಡ್ಕರ್ ದೈಹಿಕವಾಗಿ ಇಂದು ಇಲ್ಲವಾದರೂ, ಮಾನಸಿಕವಾಗಿ ಜಗತ್ತನ್ನು ಆವರಿಸಿಕೊಂಡಿದ್ದಾರೆ ಎಂದು ಕಲಬುರಗಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಪ್ರೊ.ಎಚ್.ಟಿ.ಪೋತೆ ಹೇಳಿದ್ದಾರೆ. ಗಾಂಧೀ ಶಾಂತಿ ಪ್ರತಿಷ್ಠಾನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಶೇಷಾದ್ರಿಪುರಂ ಸಂಜೆ ಕಾಲೇಜು ಸಂಯುಕ್ತಾಶ್ರಯದಲ್ಲಿ ನಗರದ ಗಾಂಧಿ ಭವನದಲ್ಲಿ ಬುಧವಾರ ಆಯೋಜಿಸಿದ್ದ ಗಾಂಧೀವಾದಿ ಡಬ್ಲ್ಯು.ಎಚ್.ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ 'ಗಾಂಧಿ ಮತ್ತು ಅಂಬೇಡ್ಕರ್ ಪ್ರಸ್ತುತತೆ' ವಿಷಯದ ಕುರಿತು ಮಾತನಾಡಿದರು. ಸಾಕಷ್ಟು ವಿಚಾರಗಳಲ್ಲಿ ಗಾಂಧೀಜಿ ಹಾಗೂ ಅಂಬೇಡ್ಕರ್ ನಡುವ ಭಿನ್ನಾಭಿಪ್ರಾಯ ಇತ್ತು. ಆದರ ದ್ವೇಷ ಭಾವನೆ ಇರಲಿಲ್ಲ. ಈ ಮನಸ್ಥಿತಿಯನ್ನು ಇಂದಿನ ಸಮಾಜ ಅರ್ಥ ಮಾಡಿಕೊಳ್ಳಬೇಕು ಎಂದರು.ಗಾಂಧೀಜಿ ಮೇಲ್ವರ್ಗದ ಸಮುದಾಯದಿಂದ ಸ್ವಾತಂತ್ರ್ಯಕ್ಕಾಗಿ ತಳಮಟ್ಟದಲ್ಲಿ ಹೋರಾಡಿದರು. ಅಂಬೇಡ್ಕರ್ ಕೆಳವರ್ಗದಿಂದ ಬಂದು ತಮ್ಮ ಜನರಿಗಾಗಿ ಮೇಲ್ಮಟ್ಟದಲ್ಲಿ ಹೋರಾಟ ನಡೆಸಿದರು. ಹೋರಾಟದ ದಾರಿ ಬೇರೆ ಬೇರೆಯಾಗಿದ್ದರೂ, ಇಬ್ಬರಲ್ಲೂ ಮಾನವೀಯತೆ ಹಾಗೂ ಅಚಲ ವಿಶ್ವಾಸ ಇತ್ತು. ರಾಜಕೀಯ ಹೋರಾಟಕ್ಕಿಂತಲೂ ಸಾಮಾಜಿಕ ಹೋರಾಟ ಮುಖ್ಯ ಎಂಬುದನ್ನು ಅಂಬೇಡ್ಕರ್ ಅರಿತುಕೊಂಡಿದ್ದರು. ಇವರಿಬ್ಬರ ದೃಷ್ಟಿಕೋನದಿಂದ ನೋಡಿದಾಗ ಭಾರತ ಏನೆಂಬುದು ಅರ್ಥವಾಗುತ್ತದೆ. ಗಾಂಧೀಜಿ ಮುಂಚೂಣಿಯಲ್ಲಿದ್ದುಕೊಂಡು ಸ್ವಾತಂತ್ರ್ಯ ತಂದುಕೊಟ್ಟರು. ಅಂಬೇಡ್ಕರ್ ಸಂವಿಧಾನ ತಂದರು. ಇಬ್ಬರು ಮಹಾನ್ ನಾಯಕರು ದೇಶ ಕಟ್ಟುವ ಕೆಲಸ ಮಾಡಿದ್ದಾರೆ. ಇಂದಿಗೂ ಜಾತಿ ಪದ್ಧತಿ, ಅಸಮಾನತೆ, ಅಸ್ಪೃಶ್ಯತೆ, ಮಹಿಳಾ ಶೋಷಣೆ ನಮ್ಮ ಸಮಾಜದ ಕೆಲ ಭಾಗಗಳಲ್ಲಿ ಉಳಿದುಕೊಂಡಿದೆ. ಇವೆಲ್ಲವೂ ಸಂಪೂರ್ಣವಾಗಿ ನಶಿಸುವಲ್ಲಿ ತನಕ ಗಾಂಧೀಜಿ ಹಾಗೂ ಅಂಬೇಡ್ಕರ್ ಪ್ರಸ್ತುತ ಆಗುತ್ತಲೇ ಇರುತ್ತಾರೆ ಎಂದು ಅಭಿಪ್ರಾಯಪಟ್ಟರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ದತ್ತಿ ದಾನಿಗಳ ಪ್ರತಿನಿಧಿ ಡಬ್ಲ್ಯು.ಡಿ.ಅಶೋಕ್, ಗಾಂಧೀ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ.ಸತ್ಯಮಂಗಲ ಮಹಾದೇವ ಮತ್ತಿತರರಿದ್ದರು.

ಉದಯವಾಣಿ ಬೆಂಗಳೂರು
ಭಾನುವಾರ, ಡಿಸೆಂಬರ್ 17, 2023

# ಗ್ರಾಮಗಳ ಬಗ್ಗೆ ಪ್ರೀತಿ ಬೆಳೆಯಬೇಕು

ದೊಡ್ಡಬಳ್ಳಾಪುರ: ಭಾರತ ಉಳಿಯಬೇಕಾದರೆ ಗ್ರಾಮಗಳ ಪ್ರೀತಿ ಬೆಳೆಯಬೇಕು, ಗ್ರಾಮೀಣ ಬದುಕನ್ನು ಪ್ರೀತಿಸಿದರೆ ನಮ್ಮ ಬದುಕು ಹಸನಾಗುತ್ತದೆ ಎನ್ನುವ ಗಾಂಧೀಜಿಯವರ ಮಾತು ಸತ್ಯ ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ನಾಡೋಜ ವೂಡೇ ಟಿ.ಕೃಷ್ಣ ಹೇಳಿದರು.

ತಾಲೂಕು ತೂಬಗೆರೆ ಹೋಬಳಿ ಹಾಡೋನಹಳ್ಳಿ ರಂಗಮಂದಿರದಲ್ಲಿ ಶೇಷಾದ್ರಿಪುರಂ ವಾಣಿಜ್ಯ ಮತ್ತು ವ್ಯವಹಾರ ನಿರ್ವಹಣಾ ಕಾಲೇಜಿನ ವತಿಯಿಂದ ಆರಂಭವಾದ ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರವನ್ನು ಉದ್ಘಾಟಿಸಿ ಅವರು ಮಾತನಾಡಿ, ಗಾಂಧೀಜಿಯವರು ಪ್ರವಾಸ ಕೈಗೊಂಡಿದ್ದಾಗ ಎಲ್ಲಾ ಹಳ್ಳಿಗಳಿಗೆ ಭೇಟಿ ನೀಡುತ್ತಿದ್ದರು, ಎಲ್ಲರ ಜೊತೆ ಮಾತುಕತೆ ನಡೆಸುತ್ತಿದ್ದರು ಆ ಪ್ರೀತಿ ನಿಮ್ಮಲ್ಲಿ ಬೆಳೆಯಬೇಕು. ಈ ದೇಶದ ಹಳ್ಳಿಗಳನ್ನು ಮರೆಯಬೇಡಿ, ಬಡವರನ್ನು ರೈತರನ್ನು ಮರೆಯಬೇಡಿ ಗಾಂಧೀಜಿಯವರ ತತ್ವಗಳನ್ನು ಪಾಲಿಸಬೇಕಾಗಿದೆ ಎಂದು ಹೇಳಿದರು.

ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರಗಳಲ್ಲಿ ನಮ್ಮ ಶೇಷಾದ್ರಿಪುರಂ ಕಾಲೇಜಿನ ವಿದ್ಯಾರ್ಥಿಗಳು ಉತ್ತಮ ಕೆಲಸಗಳನ್ನು ಮಾಡಿರುವುದರಿಂದ ನಮ್ಮ ಕಾಲೇಜಿಗೆ ರಾಷ್ಟ್ರ ಪ್ರಶಸ್ತಿ ದೊರೆತಿದೆ. 1992ರಲ್ಲಿ ಎನ್‌ಎಸ್‌ಎಸ್ ಶಿಬಿರಕ್ಕೆ ಮೊದಲ ಅಧ್ಯಕ್ಷತೆ ನೀಡಿದಾಗ ಡಾ.ನರಸಿಂಹಯ್ಯ ಅವರು ಮೊದಲ ಅತಿಥಿಯಾಗಿ ಭಾಗವಹಿಸಿ, ನಮ್ಮ ವಿದ್ಯಾರ್ಥಿಗಳಿಗೆ ಗ್ರಾಮೀಣ ಪ್ರದೇಶದ ಪರಿಚಯ ಮಾಡಿಸದೆ ಹೋದರೆ ಬಹಳ ಅನ್ಯಾಯವಾಗುತ್ತದೆ ಎಂದು ಹೇಳಿದ್ದರು ಎಂದು ಸ್ಮರಿಸಿದರು.

ಜಿಪಂ ಮಾಜಿ ಸದಸ್ಯ ಎಚ್.ಅಪ್ಪಯ್ಯಣ್ಣ ಮಾತನಾಡಿ, ಎನ್‌ಎಸ್‌ಎಸ್ ಶಿಬಿರಗಳು ಗ್ರಾಮೀಣ ಜನರ ಬದುಕನ್ನು ಅರಿಯಲು ಪೂರಕವಾಗಿದ್ದು, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯವರು ನಮ್ಮ ಗ್ರಾಮದಲ್ಲಿ ಶಿಬಿರ ಆಯೋಜಿಸಿರುವುದು ಸಂತಸ ತಂದಿದ್ದು, ಶಿಬಿರಕ್ಕೆ ಬೇಕಾದ ಅಗತ್ಯ ಸಹಕಾರ ನೀಡುವುದಾಗಿ ತಿಳಿಸಿದರು.

ಕಾರ್ಯಕ್ರಮದಲ್ಲಿ ಹಾಡೋನಹಳ್ಳಿ ಗ್ರಾಮ ಪಂಚಾಯಿತಿ ಅಧ್ಯಕ್ಷ ನಾಗರಾಜು, ವಿ ಎಸ್‌ಎಸ್ ಎನ್ ಅಧ್ಯಕ್ಷ ಜಗನ್ನಾಥ್ ಚಾರಿ, ಶೇಷಾದ್ರಿಪುರಂ ಕಾಲೇಜಿನ ಧರ್ಮದರ್ಶಿ ವೀರಭದ್ರಪ್ಪ, ಪ್ರಾಂಶುಪಾಲರಾದ ಬೈರೇಗೌಡ, ಪ್ರೊಫೆಸರ್ ವಿದ್ಯಾ ಶಿವಣ್ಣ, ಶಿಬಿರದ ಸಂಯೋಜಕರಾದ ಲಕ್ಷ್ಮೀನಾರಾಯಣ ಹಾಜರಿದ್ದರು.



ದೊಡ್ಡಬಳ್ಳಾಪುರ ತಾಲೂಕಿನ ಹಾಡೋನಹಳ್ಳಿಯಲ್ಲಿ ಶೇಷಾದ್ರಿಪುರಂ ವಾಣಿಜ್ಯ ಮತ್ತು ವ್ಯವಹಾರ ನಿರ್ವಹಣಾ ಕಾಲೇಜಿನ ವತಿಯಿಂದ ಆರಂಭವಾದ ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರದಲ್ಲಿ ಸಂಸ್ಥೆಯ ಕಾರ್ಯದರ್ಶಿ ನಾಡೋಜ ವೂಡೇ ಟಿ.ಕೃಷ್ಣ ಮಾತನಾಡಿದರು.

ಪ್ರಜಾವಾಣಿ
ಭಾನುವಾರ • ಡಿಸೆಂಬರ್ 17, 2023

# ಎನ್‌ಎಸ್‌ಎಸ್ ಶಿಬಿರದಿಂದ ಸೇವಾ ಮನೋಭಾವ

ಪ್ರಜಾವಾಣಿ ವಾರ್ತೆ

ತೂಬಗೆರೆ (ದೊಡ್ಡಬಳ್ಳಾಪುರ): ಶೇಷಾದ್ರಿಪುರಂ ಕಾಲೇಜಿನ ವಿದ್ಯಾರ್ಥಿಗಳು ಎನ್.ಎಸ್.ಎಸ್ ಶಿಬಿರಗಳಲ್ಲಿ ಉತ್ತಮ ಸೇವಾ ಕೆಲಸ ಮಾಡಿರುವುದನ್ನು ಗುರುತಿಸಿ ಸರ್ಕಾರ ರಾಷ್ಟ್ರ ಪ್ರಶಸ್ತಿ ನೀಡಿ ಗೌರವಿಸಿದೆ ಎಂದು ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ತಾಲ್ಲೂಕಿನ ಹಾಡೋನಹಳ್ಳಿ ಗ್ರಾಮದಲ್ಲಿ ಬೆಂಗಳೂರಿನ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್‌ಮೆಂಟ್ ವತಿಯಿಂದ ನಡೆಯುತ್ತಿರುವ ಏಳು ದಿನಗಳ ವಿಶೇಷ ರಾಷ್ಟ್ರೀಯ ಸೇವಾ ಯೋಜನಾ ಶಿಬಿರ ಉದ್ಘಾಟಿಸಿ ಮಾತನಾಡಿದರು.

ವಿದ್ಯಾರ್ಥಿಗಳಿಗೆ ಗ್ರಾಮೀಣ ಬದುಕಿನ ಪರಿಚಯ ಹಾಗೂ ಪರಿಸರವನ್ನು ಸ್ವಚ್ಛವಾಗಿಟ್ಟುಕೊಳ್ಳುವ ಬಗ್ಗೆ ಪ್ರಾಯೋಗಿಕ ಅನುಭವ ಆಗಬೇಕು ಅನ್ನುವ ಉದ್ದೇಶದಿಂದ ಶಿಬಿರ ಆಯೋಜಿಸಲಾಗಿದೆ ಎಂದರು.

ಗ್ರಾಮದ ಹಿರಿಯ ಮುಖಂಡ ಎಚ್. ಅಪ್ಪಯ್ಯ ಮಾತನಾಡಿ, ಕಾಲೇಜಿನ ವಿದ್ಯಾರ್ಥಿಗಳು ಗ್ರಾಮದ ಜನರೊಂದಿಗೆ ಬೆರೆತು ಉತ್ತಮ ಕೆಲಸ ಮಾಡಿ ಜನರ ವಿಶ್ವಾಸ ಗಳಿಸಬೇಕು. ವಿವಿಧ ಯೋಜನೆಗಳಡಿಯಲ್ಲಿ ಗ್ರಾಮದಲ್ಲಿ ಕಲಿಕೆಗೆ ಬರುವ ವಿದ್ಯಾರ್ಥಿಗಳಿಗೆ ಸದಾ ಸಹಕಾರ ನೀಡಲಾಗುತ್ತಿದೆ ಎಂದರು.

ಹಾಡೋನಹಳ್ಳಿ ಗ್ರಾಮ ಪಂಚಾಯಿತಿ ಅಧ್ಯಕ್ಷ ಎ.ನಾಗರಾಜ್, ವಿಎಸ್‌ಎಸ್‌ಎನ್ ಅಧ್ಯಕ್ಷ ಜಗನ್ನಾಥಚಾರಿ, ಶೇಷಾದ್ರಿಪುರಂ ಕಾಲೇಜಿನ ಕಾರ್ಯದರ್ಶಿ ವೀರಭದ್ರಯ್ಯ, ಪ್ರಾಂಶುಪಾಲ ಬೈರೇಗೌಡ, ಪ್ರೊ.ವಿದ್ಯಾ ಶಿವಣ್ಣ, ಶಿಬಿರದ ಸಂಯೋಜಕ ಪ್ರೊ. ಲಕ್ಷ್ಮೀನಾರಾಯಣ, ಗ್ರಾಮದ ಮುಖಂಡ ಎಚ್.ನಾರಾಯಣಪ್ಪ ಇದ್ದರು.



ದೊಡ್ಡಬಳ್ಳಾಪುರ ತಾಲ್ಲೂಕಿನ ಹಾಡೋನಹಳ್ಳಿ ಗ್ರಾಮದಲ್ಲಿ ನಡೆದ ಎನ್‌ಎಸ್‌ಎಸ್ ಶಿಬಿರದಲ್ಲಿ ವೂಡೇ ಪಿ.ಕೃಷ್ಣ ಮಾತನಾಡಿದರು

ಸಂಯುಕ್ತ ಕರ್ನಾಟಕ
ಭಾನುವಾರ 17 ಡಿಸೆಂಬರ್ 2023
saptahikasourabha80@gmail.com

# 'ಕತೆ, ಕಾದಂಬರಿಗೆ ಸಾಹಿತ್ಯ ಸೀಮಿತ'



ಬೆಂಗಳೂರು: ಸಾಹಿತ್ಯವನ್ನು ಕತೆ, ಕಾದಂಬರಿಗಳಿಗೆ ಮಾತ್ರ ಸೀಮಿತಗೊಳಿಸಿ ಉಳಿದ ಪ್ರಕಾರಗಳನ್ನು ಕಡೆಗಣಿಸಲಾಗುತ್ತಿದೆ ಎಂದು ಕರ್ನಾಟಕ ಲೇಖಕಿಯರ ಸಂಘದ ಮಾಜಿ ಅಧ್ಯಕ್ಷೆ ಕೆ.ಆರ್. ಸಂಧ್ಯಾರೆಡ್ಡಿ ಹೇಳಿದರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಸುಮಂಗಲಿ ಸೇವಾ ಆಶ್ರಮ ಹಾಗೂ ಬಿ. ಕೃಷ್ಣಪ್ಪ ಟ್ರಸ್ಟ್ ಶನಿವಾರ ಆಯೋಜಿಸಿದ್ದ ಮಹಿಳಾ ಸಾಹಿತ್ಯ–ಸಂಸ್ಕೃತಿ ಸಮಾವೇಶ ಉದ್ಘಾಟಿಸಿ ಮಾತನಾಡಿದ ಅವರು, ಜನಸಾಮಾನ್ಯರಲ್ಲಿ ಅರಿವು ಮೂಡಿಸುವ ಸಾಹಿತ್ಯ ಪ್ರಕಾರಗಳಾದ ಜಾನಪದ, ವೈದ್ಯಕೀಯ, ಅನುವಾದ ಕ್ಷೇತ್ರಗಳಲ್ಲಿ ಹೆಚ್ಚು ಸಾಹಿತ್ಯ ರೂಪಿಸಬೇಕಿದೆ. ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕಥೆ, ಗಾದೆ, ಗೀತೆಗಳನ್ನು ಸಂಗ್ರಹಿಸಿ ಅವುಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಕೆಲಸವನ್ನು ಮಹಿಳೆಯರು ಮಾಡಬೇಕು. ಶ್ರೇಷ್ಠ ಸಾಹಿತ್ಯ, ಅಡುಗೆ ಮನೆ ಸಾಹಿತ್ಯ ಎಂದು ವಿಂಗಡಿಸುವ ಮೂಲಕ ಮಹಿಳೆಯರ ನಿಜವಾದ ಕೊಡುಗೆಗಳನ್ನು ಗಮನಿಸುತ್ತಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಬಿ.ಆರ್. ಉಮಾ ಹಾಗೂ ಪಾಮಡಿ ನಾಗಮಣಿ ಮನೋಹರ್ ಅವರಿಗೆ 'ಕರ್ನಾಟಕದ ಮದರ್ ತೆರೆಸಾ ಡಾ.ಎಸ್.ಜಿ. ಸುಶೀಲಮ್ಮ ದತ್ತಿ ಪ್ರಶಸ್ತಿಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಪ್ರದಾನ ಮಾಡಿದರು.

ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷತೆ ಎಸ್.ಜಿ. ಸುಶೀಲಮ್ಮ, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನ ಅಧ್ಯಕ್ಷ ಎಸ್. ರಾಮಲಿಂಗೇಶ್ವರ ಇದ್ದರು.

ಪ್ರಜಾವಾಣಿ

ಶನಿವಾರದ ಹವಾಮಾನ : ಗರಿಷ್ಠ 27° ಕನಿಷ್ಠ 19°



ನಗರದಲ್ಲಿ ಶನಿವಾರ ನಡೆದ 'ಮಹಿಳಾ ಸಾಹಿತ್ಯ-ಸಂಸ್ಕೃತಿ ಸಮಾವೇಶ'ದಲ್ಲಿ (ಕುಳಿತವರು ಎಡದಿಂದ) ಸಂಗೀತ ನಿರ್ದೇಶಕಿ ಪಾಮಡಿ ನಾಗಮಣಿ ಮನೋಹರ್, ಸಮಾವೇಶದ ಸರ್ವಾಧ್ಯಕ್ಷೆ ಬಿ.ಆರ್. ಉಮಾ ಅವರಿಗೆ 'ಕರ್ನಾಟಕದ ಮದರ್ ತೆರೆಸಾ ಡಾ.ಎಸ್.ಜಿ. ಸುಶೀಲಮ್ಮ ದತ್ತಿ ಪ್ರಶಸ್ತಿ' ಪ್ರದಾನ ಮಾಡಲಾಯಿತು. (ಎಡದಿಂದ) ವೂಡೇ ಪಿ. ಕೃಷ್ಣ, ಕೆ.ಆರ್. ಸಂಧ್ಯಾರೆಡ್ಡಿ, ಎಸ್. ರಾಮಲಿಂಗೇಶ್ವರ, ಎಸ್.ಜಿ. ಸುಶೀಲಮ್ಮ ಭಾಗವಹಿಸಿದ್ದರು – ಪ್ರಜಾವಾಣಿ ಚಿತ್ರ

# 'ಸಾಹಿತ್ಯದ ಉಳಿದ ಪ್ರಕಾರಗಳ ಕಡೆಗಣನೆ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಾಹಿತ್ಯವನ್ನು ಕಥೆ-ಕಾದಂಬರಿಗಳಿಗೆ ಮಾತ್ರ ಸೀಮಿತಗೊಳಿಸಿ ಉಳಿದ ಪ್ರಕಾರಗಳನ್ನು ಕಡೆಗಣಿಸಲಾಗುತ್ತಿದೆ' ಎಂದು ಕರ್ನಾಟಕ ಲೇಖಕಿಯರ ಸಂಘದ ಮಾಜಿ ಅಧ್ಯಕ್ಷೆ ಕೆ.ಆರ್. ಸಂಧ್ಯಾರೆಡ್ಡಿ ಹೇಳಿದರು.

ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್, ಸುಮಂಗಲಿ ಸೇವಾ ಆಶ್ರಮ ಹಾಗೂ ಬಿ. ಕೃಷ್ಣಪ್ಪ ಟ್ರಸ್ಟ್ ಶನಿವಾರ ಆಯೋಜಿಸಿದ್ದ 'ಮಹಿಳಾ ಸಾಹಿತ್ಯ-ಸಂಸ್ಕೃತಿ ಸಮಾವೇಶ'ವನ್ನು ಉದ್ಘಾಟಿಸಿ ಅವರು ಮಾತನಾಡಿದರು.

'ಜನಸಾಮಾನ್ಯರಲ್ಲಿ ಅರಿವು ಮೂಡಿಸುವ ಸಾಹಿತ್ಯ ಪ್ರಕಾರಗಳಾದ ಜಾನಪದ, ವೈದ್ಯಕೀಯ, ಅನುವಾದ ಕ್ಷೇತ್ರಗಳಲ್ಲಿ ಹೆಚ್ಚು ಸಾಹಿತ್ಯ ರೂಪಿಸಬೇಕಿದೆ. ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕಥೆ, ಗಾದೆ, ಗೀತೆಗಳನ್ನು ಸಂಗ್ರಹಿಸಿ ಅವುಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಕೆಲಸವನ್ನು ಮಹಿಳೆಯರು ಮಾಡಬೇಕು. ಶ್ರೇಷ್ಠ ಸಾಹಿತ್ಯ, ಅಡುಗೆ ಮನೆ ಸಾಹಿತ್ಯ ಎಂದು ವಿಂಗಡಿಸುವ ಮೂಲಕ ಮಹಿಳೆಯರ ನಿಜವಾದ ಕೊಡುಗೆಗಳನ್ನು ಗಮನಿಸುತ್ತಿಲ್ಲ' ಎಂದು ಬೇಸರ ವ್ಯಕ್ತಪಡಿಸಿದರು.

ಸಮಾವೇಶದ ಸರ್ವಾಧ್ಯಕ್ಷತೆ ವಹಿಸಿದ್ದ ಬಿ.ಆರ್. ಉಮಾ, 'ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಯರಿಗೆ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಾರತಮ್ಯ ನೀತಿ ಅನುಸರಿಸಲಾಗುತ್ತಿದೆ. ಲೈಂಗಿಕ ಹಾಗೂ ಮಾನಸಿಕ ಕಿರುಕುಳವನ್ನು ನೀಡಲಾಗುತ್ತಿದೆ. ರಾಜ್ಯದಲ್ಲಿ ಮರ್ಯಾದೆಗೇಡು ಹತ್ಯೆಗಳು ಘಟಿಸುತ್ತಿದ್ದರೂ ಕಂಡು ಕಾಣದಂತೆ ಇದ್ದೇವೆ. ಈ ನಿಟ್ಟಿನಲ್ಲಿ ಸಾಮಾಜಿಕ ಹೋರಾಟಗಳು ಕ್ಷೀಣಿಸುತ್ತಿವೆ' ಎಂದರು.

ಬಿ.ಆರ್. ಉಮಾ ಹಾಗೂ ಪಾಮಡಿ ನಾಗಮಣಿ ಮನೋಹರ್ ಅವರಿಗೆ 'ಕರ್ನಾಟಕದ ಮದರ್ ತೆರೆಸಾ ಡಾ.ಎಸ್.ಜಿ. ಸುಶೀಲಮ್ಮ ದತ್ತಿ ಪ್ರಶಸ್ತಿ'ಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಪ್ರದಾನ ಮಾಡಿದರು.

ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷತೆ ಎಸ್.ಜಿ. ಸುಶೀಲಮ್ಮ, ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನ ಅಧ್ಯಕ್ಷ ಎಸ್. ರಾಮಲಿಂಗೇಶ್ವರ ಪಾಲ್ಗೊಂಡಿದ್ದರು.

ಉದಯವಾಣಿ ಬೆಂಗಳೂರು
ಮಂಗಳವಾರ, ಡಿಸೆಂಬರ್ 5, 2023

# ಆತ್ಮಸಾಕ್ಷಿಗೆ ವಿರುದ್ಧವಾಗಿ ನಾನು ಆತ್ಮಕಥೆ ಬರೆದಿಲ್ಲ

- ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಅವರ 'ದಿಟದ ದೀವಟಿಗೆ' ಆತ್ಮಕಥೆ ಬಿಡುಗಡೆ

ಬೆಂಗಳೂರು: 'ದಿಟದ ದೀವಟಿಗೆ' ಆತ್ಮಕಥೆಯಲ್ಲಿ ಎಲ್ಲೂ ನಾನು ಆತ್ಮಸಾಕ್ಷಿಗೆ ವಿರುದ್ಧವಾಗಿ ಬರೆದಿಲ್ಲ. ನನ್ನ ಜೀವನದಲ್ಲಿ ಮೂರ್ನಾಲ್ಕು ಮಂದಿ ಬಹಳಷ್ಟು ನೋವು, ಸಂಕಷ್ಟಗಳನ್ನು ಕೊಟ್ಟಿದ್ದರು. ಹೀಗಾಗಿ ಈ ಜೀವನವೇ ಬೇಡ ಅನಿಸಿದ್ದೂ ಇದೆ. ಆದರೆ ಅದ್ಯಾವುಗಳನ್ನು ಕೂಡ ಆತ್ಮಕಥೆಯಲ್ಲಿ ಬರೆದುಕೊಂಡಿಲ್ಲ ಎಂದು ಕರ್ನಾಟಕ ಸಂಸ್ಕೃತಿ ವಿವಿಯ ವಿಶ್ರಾಂತ ಕುಲಪತಿ, ವಿದ್ವಾಂಸ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ಗಾಂಧಿಭವನದಲ್ಲಿ ಹಮ್ಮಿಕೊಂಡಿದ್ದ ತಮ್ಮ ಆತ್ಮಕಥನ 'ದಿಟದ ದೀವಟಿಗೆ' ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು. ನನ್ನನ್ನು ಕೆಲವರು ಅಜಾತಶತ್ರು ಎಂದು ಕರೆಯುತ್ತಾರೆ. ಆದರೆ ಒಂದು ಕಾಲದಲ್ಲಿ ಮೂರ್ನಾಲ್ಕು ಜನ ಬಹಳಷ್ಟು ಸಂಕಷ್ಟಕೊಟ್ಟಿದ್ದಾರೆ. ಆದರೆ ಅವರಿಗೆ ಎಂದೂ ಕೂಡ ನಾನು ಕೆಡಕು ಮಾಡಿಲ್ಲ. ಗುರುಬಲ ಮತ್ತು ಮಿತ್ರ ಬಲದಿಂದ ಎಲ್ಲ ಸಂಕಷ್ಟಗಳನ್ನು ಗೆದ್ದೆ ಎಂದರು.

ಪೇಜಾವರ ಶ್ರೀಗಳು, ಸಿದ್ಧಗಂಗಾಶ್ರೀಗಳು, ಸುತ್ತೂರು ಶ್ರೀಗಳು, ಬಾಲಗಂಗಾಧರನಾಥ ಶ್ರೀಗಳು ಇನ್ನಿತರರು ನನ್ನಗೆ ಬೆನ್ನೆಲುಬಾಗಿದ್ದರು ಎಂದು ಸ್ಮರಿಸಿದರು. ಕಾರ್ಯಕ್ರಮದಲ್ಲಿ ಕೇಂದ್ರೀಯ ಸಂಸ್ಕೃತ ವಿವಿ ಕುಲಪತಿ ಪ್ರೊ.ಶ್ರೀನಿವಾಸ ವರಖೇಡಿ, ಗಡಿ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಸಿ.ಸೋಮಶೇಖರ್, ನಾಡೋಜ ವೂಡೇ ಪಿ.ಕೃಷ್ಣ, ಅಂಕಿತ ಪುಸ್ತಕ ಪ್ರಕಾಶನದ ಪ್ರಕಾಶ ಕಂಬತ್ತಹಳ್ಳಿ ಇತರರಿದ್ದರು.



ಕಾರ್ಯಕ್ರಮದಲ್ಲಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ಅವರ 'ದಿಟದ ದೀವಟಿಗೆ' ಆತ್ಮಕಥೆಯನ್ನು ಗಣ್ಯರು ಬಿಡುಗಡೆ ಮಾಡಿದರು.

ಪ್ರಜಾವಾಣಿ
ಸೋಮವಾರ • ಡಿಸೆಂಬರ್ 4, 2023

ಕೇಂದ್ರೀಯ ಸಂಸ್ಕೃತ ವಿ.ವಿ ಕುಲಪತಿ ಶ್ರೀನಿವಾಸ ವರಖೇಡಿ ಅಭಿಮತ

# ‘ಆತ್ಮಕಥೆಗಳು ನೈಜತೆಯಿಂದ ಕೂಡಿರಲಿ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಆತ್ಮಕಥೆ ಎನ್ನುವುದು ಇತಿಹಾಸ, ಪ್ರವಾಸ ಕಥನವಾದರೆ ಅಲ್ಲಿ ವ್ಯಕ್ತಿ ಮರೆಯಾಗುತ್ತಾನೆ. ಸಾಹಿತ್ಯದ ಗದ್ಯ ಕೃತಿಯಾದರೆ ಅದು ಕಲ್ಪನಾ ಲೋಕವಾಗಲಿದೆ. ಆದ್ದರಿಂದ, ಆತ್ಮಕಥೆಗಳು ನೈಜತೆಯಿಂದ ಕೂಡಿರಬೇಕು’ ಎಂದು ಕೇಂದ್ರೀಯ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿ ಶ್ರೀನಿವಾಸ ವರಖೇಡಿ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಅಂಕಿತ ಪುಸ್ತಕ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮಲ್ಲೇಪುರಂ ಜಿ. ವೆಂಕಟೇಶ ಅವರ ‘ದಿಟದ ದೀವಟಿಗೆ’ ಆತ್ಮಕಥೆ ಗ್ರಂಥ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

‘ಬಹಳಷ್ಟು ಜನ ಆತ್ಮಕಥೆಯ ಹೆಸರಿನಲ್ಲಿ ಸ್ವಗತವನ್ನು ಬರೆಯುತ್ತಾರೆ. ಆತ್ಮಕಥೆಯಲ್ಲಿ ಸ್ವ ಮತ್ತು ಅಹಂ ಇದ್ದರೆ ಅದು ಅಹಂಕಥನವಾಗುತ್ತದೆ. ಆತ್ಮಕಥೆ ಬರೆಯಬೇಕಾದರೆ ಮೊದಲು ಆ ವ್ಯಕ್ತಿಯೇ ಅದಕ್ಕೆ ಸಾಕ್ಷಿಯಾಗಬೇಕು. ಏಕೆಂದರೆ ತಾನು ಲೇಖಕನಾಗಿ ತನ್ನನ್ನು ತಾನು ಕಾಣದೇ ಒಬ್ಬ ಸಾಕ್ಷಿಯಾಗಿ ತನ್ನ ಜೀವನವನ್ನು ನೋಡಬೇಕಾಗುತ್ತದೆ. ಇಂತಹ ವಿಚಾರವನ್ನು ನಾನು ಮಲ್ಲೇಪುರಂ ಅವರ ಆತ್ಮಕಥೆಯಲ್ಲಿ ಕಂಡಿದ್ದೇನೆ’ ಎಂದರು.

### ಪುಸ್ತಕ ಪರಿಚಯ

ಪುಸ್ತಕ: ದಿಟದ ದೀವಟಿಗೆ
ಲೇಖಕ: ಮಲ್ಲೇಪುರಂಜಿ. ವೆಂಕಟೇಶ
ಪ್ರಕಾಶನ: ಅಂಕಿತ ಪುಸ್ತಕ
ಪುಟ: 568
ಬೆಲೆ: ₹595

ವಿಶ್ರಾಂತ ಕುಲಪತಿ ಮಲ್ಲೇಪುರಂ ಜಿ. ವೆಂಕಟೇಶ, ‘ದಿಟದ ದೀವಟಿಗೆ’ ಆತ್ಮಕಥೆಯಲ್ಲಿ ಎಲ್ಲೂ ನಾನು ಆತ್ಮಸಾಕ್ಷಿಗೆ ವಿರುದ್ಧವಾಗಿ ಬರೆದಿಲ್ಲ. ನನ್ನ ಜೀವನದಲ್ಲಿ ಮೂರ್ನಾಲ್ಕು ಮಂದಿ ಬಹಳಷ್ಟು ನೋವು, ಸಂಕಷ್ಟಗಳನ್ನು ಕೊಟ್ಟಿದ್ದರು. ಹೀಗಾಗಿ ಈ ಜೀವನವೇ ಬೇಡ ಅನಿಸಿದ್ದೂ ಇದೆ. ಆದರೆ ಅದ್ಯಾವುದನ್ನು ಕೂಡ ಆತ್ಮಕಥೆಯಲ್ಲಿ ಬರೆದುಕೊಂಡಿಲ್ಲ. ಗುರುಬಲ ಮತ್ತು ಮಿತ್ರ ಬಲದಿಂದ ಎಲ್ಲ ಸಂಕಷ್ಟಗಳನ್ನು ಗೆದ್ದಿದ್ದೇನೆ’ ಎಂದು ಹೇಳಿದರು.



ನಗರದ ಗಾಂಧಿಭವನದಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಮಲ್ಲೇಪುರಂ ಜಿ. ವೆಂಕಟೇಶ್ ಅವರ ಆತ್ಮಕಥೆ ‘ದಿಟದ ದೀವಟಿಗೆ’ ಪುಸ್ತಕವನ್ನು ಕೇಂದ್ರೀಯ ಸಂಸ್ಕೃತ ವಿಶ್ವವಿದ್ಯಾಲಯದ ಕುಲಪತಿ ಶ್ರೀನಿವಾಸ ವರಖೇಡಿ (ಎಡದಿಂದ ನಾಲ್ಕನೆಯವರು) ಬಿಡುಗಡೆಗೊಳಿಸಿದರು. (ಎಡದಿಂದ) ಜಿ. ಮಾದೇಶ, ಮಲ್ಲೇಪುರಂ ಜಿ. ವೆಂಕಟೇಶ, ವೂಡೇ ಪಿ. ಕೃಷ್ಣ, ಸಿ. ಸೋಮಶೇಖರ್ ಇದ್ದಾರೆ.

ವಿಧಾನ ಪರಿಷತ್ ಮಾಜಿ ಸದಸ್ಯ ಡಿ.ಎಸ್. ವೀರಯ್ಯ, ವಿದ್ವಾಂಸ ಎ.ವಿ. ಪ್ರಸನ್ನ, ಕಾದಂಬರಿಕಾರ ಕು. ವೀರಭದ್ರಪ್ಪ, ಬಿ.ಎಂ.ಶ್ರೀ ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ಮುಂತಾದವರನ್ನು ಸನ್ಮಾನಿಸಲಾಯಿತು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸಿ. ಸೋಮಶೇಖರ್, ಅಖಿಲ ಕರ್ನಾಟಕ ಕೊರಮ ಸಂಘದ ಅಧ್ಯಕ್ಷ ಜಿ. ಮಾದೇಶ ಇದ್ದರು.

ಸಂಯುಕ್ತ ಕರ್ನಾಟಕ



### ಪ್ರಖರತೆಯ ಹೋರಾಟ । ಆತ್ಮ ಕಥನ ದಿಟದ ದೀವಟಿಗೆ ಕೃತಿ ಬಿಡುಗಡೆ । ಗಣ್ಯರಿಗೆ ಸನ್ಮಾನ

# ಜೀವನದ ಮೂಲದ್ರವ್ಯ ಅಧ್ಯಯನಶೀಲತೆ

ಬೆಂಗಳೂರು: ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ವತಿಯಿಂದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಆತ್ಮಕಥನ 'ದಿಟದ ದೀವಟಿಗೆ' ಕೃತಿಯ ಲೋಕಾರ್ಪಣೆ ಮತ್ತು ಗಣ್ಯರಿಗೆ ಸನ್ಮಾನ ಕಾರ್ಯಕ್ರಮ ನಗರದ ಮಹದೇವ ದೇಸಾಯಿ ಸಭಾಂಗಣದಲ್ಲಿ ಭಾನುವಾರ ನಡೆಯಿತು.

ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರದ ನಿಕಟಪೂರ್ವ ಅಧ್ಯಕ್ಷ ಸಿ. ಸೋಮಶೇಖರ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ, ಅನೇಕ ಮಹಾನ ವ್ಯಕ್ತಿಗಳು ಹೋರಾಟದ ಹಾದಿಯಲ್ಲಿ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಹಾಗೆಯೇ ಮಲ್ಲೇಪುರ ಅವರ ಬದುಕಿನ ಸಾಧನೆಗೆ ಮೂಲ ಕಾರಣ ಅವರ ಕಠಿಣ ಪರಿಶ್ರಮ. ತಂದೆ ತಾಯಿಗಳ ಸ್ಫೂರ್ತಿಯಿಂದ ತಮ್ಮ ಬದುಕನ್ನು ರೂಪಿಸಿದವರಲ್ಲಿ ಮಲ್ಲೇಪುರಂ ಸಹ ಒಬ್ಬರು. ಸತ್ಯದ ಬೆಳಕಿನಲ್ಲಿ ಪ್ರಕರತೆಯ ಹೋರಾಟ ಇದೆ ಎಂದು ತಿಳಿಸುವ ಕೃತಿ 'ದಿವದ ದೀವಟಿಗೆ'. ನೋವು ದುಃಖಗಳ ಸಹಜ ಅಭಿವ್ಯಕ್ತಿ ಹಾಗೂ ಸತ್ಯದ ದರ್ಶನವನ್ನು ನಾವು ಇಲ್ಲಿ ಕಾಣಬಹುದು. ಇನ್ನು ಅವರ ಇಡೀ ಜೀವನದ ಮೂಲ ದ್ರವ್ಯ ಏನೆಂದರೆ ಅವರ ಅಧ್ಯಯನಶೀಲತೆ ಎಂದರು.

'ದಿಟದ ದೀವಟಿಗೆ' ಕೃತಿಯನ್ನು ಲೋಕಾರ್ಪಣೆಗೊಳಿಸಿ ಮಾತನಾಡಿದ ಕುಲಪತಿ ಪ್ರೊ. ಶ್ರೀನಿವಾಸ್, ದಿಟದ ದೀವಟಿಗೆ ಮಲ್ಲೇಪುರಂ ಅವರ ನಿಜವಾದ ಆತ್ಮಕಥನವಾಗಿದೆ. ಏಕೆಂದರೆ ಇಲ್ಲಿ ತಾನು ಆ ಪಾತ್ರದೊಳಗೆ ಇದ್ದೇನೆ, ಅದರಲ್ಲೇ ನಾನು ಜೀವಿಸುತ್ತಿದ್ದೇನೆ ಎನ್ನುವಂತಹ ವಿಚಾರವನ್ನು ನಾವು ಇಲ್ಲಿ ಕಾಣಬಹುದು. ಆತ್ಮಕಥನವೆನ್ನುವುದು ಇತಿಹಾಸ ಅಥವಾ ಪ್ರವಾಸ ಕಥನವಾಗಬಾರದು. ಅಂತಹ ಕಥನವಾದಾಗ ಅಲ್ಲಿ ವ್ಯಕ್ತಿ ಮರೆಯಾಗುತ್ತಾನೆ. ಅಷ್ಟೇ ಅಲ್ಲದೆ ಸಾಹಿತ್ಯ ಗದ್ಯ ಕೃತಿಯು ಆಗಬಾರದು. ಆಗ ಅದೊಂದು ಕಲ್ಪನಾ ಲೋಕವಾಗಿ ಹೊರಹೊಮ್ಮುತ್ತದೆ. ಆದರಿಂದ ಅದನ್ನೆಲ್ಲ ಮೀರಿದ ಕಥನವನ್ನು ಬರೆಯಬೇಕು. ಅಂತಹ ಕಥನವನ್ನು ಆತ್ಮಕಥನವಾಗಿ ಬರೆಯಬೇಕಾದರೆ ಮೊದಲು ಆ ವ್ಯಕ್ತಿಯು ಸಾಕ್ಷಿಯಾಗಬೇಕು. ತಾನು ಲೇಖಕನಾಗಿ ತನ್ನನ್ನು ತಾನು ಕಾಣದೇ ಒಬ್ಬ ಸಾಕ್ಷಿಯಾಗಿ ತನ್ನ ಜೀವನವನ್ನು ನೋಡಬೇಕಾಗುತ್ತದೆ. ಇದು ಬಹಳ ಸೂಕ್ಷ್ಮ. ಇಂತಹ ವಿಚಾರವನ್ನು ನಾನು ಮಲ್ಲೇಪುರಂ ಅವರ ಆತ್ಮಕಥನದಲ್ಲಿ ಕಂಡಿದ್ದೇನೆ ಎಂದು ಬಣ್ಣಿಸಿದರು.



ಬೆಂಗಳೂರು ನಗರದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ವತಿಯಿಂದ ಭಾನುವಾರ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಆತ್ಮಕಥನ 'ದಿಟದ ದೀವಟಿಗೆ' ಕೃತಿಯ ಲೋಕಾರ್ಪಣೆ ನಡೆಯಿತು.

ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ನನ್ನ ಎಲ್ಲಾ ಸಾಹಿತ್ಯ ಸೇವೆಯಲ್ಲಿಯೂ ಹಲವಾರು ಸಾಹಿತಿಕ ಗೆಳೆಯರ ಬೆಂಬಲವಿದೆ. ದಿಟದ ದೀವಟಿಗೆ ಆತ್ಮಕಥನವನ್ನು ಹೊರತರಲು ಬಹಳಷ್ಟು ಜನರು ಪ್ರೋತ್ಸಾಹನೀಡಿದ್ದಾರೆ. ಅನಾದಿಕಾಲದ ಗುರುಗಳಿಂದ ಹಿಡಿದು ಇತ್ತೀಚಿನ ಬರಹಗಾರರು ನನಗೆ ಪ್ರೀತಿಯನ್ನು ತೋರಿಸಿದ್ದಾರೆ ಈ ಸಂದರ್ಭದಲ್ಲಿ ಅವರೆಲ್ಲರಿಗೂ ನಾನು ಕೃತಜ್ಞತೆ ತಿಳಿಸುತ್ತೇನೆ ಎಂದರು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ನಾಡೋಜ ವೂಡೇ ಪಿ. ಕೃಷ್ಣ ಮಾತನಾಡಿ. ತಮ್ಮ ಜೊತೆ ಎಲ್ಲರನ್ನು ಒಟ್ಟಿಗೆ ಕರೆದುಕೊಂಡು ಹೋಗುವ ಮನಸ್ಥಿತಿ ಮಲ್ಲೇಪುರಂ ಅವರದ್ದು. ತಾನು ಬೆಳೆಯುವುದರ ಜೊತೆಗೆ ಇತರರನ್ನು ಬೆಳೆಸುವ ಪ್ರವೃತ್ತಿಯನ್ನು ಹೊಂದಿದ್ದಾರೆ. ಇಂದಿನ ಈ ಕಾರ್ಯಕ್ರಮವು ರಾಜ್ಯಮಟ್ಟದ ಕಾರ್ಯಕ್ರಮವಾಗಿ ಹೊರಮ್ಮುತ್ತಿರುವುದು ಬಹಳ ಖುಷಿ ತಂದಿದೆ ಎಂದು ಅಭಿಪ್ರಾಯ ಪಟ್ಟರು. ಕಾರ್ಯಕ್ರಮದಲ್ಲಿ ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ ಸೇರಿದಂತೆ ಹಲವು ಗಣ್ಯರಿಗೆ ಗೌರವ ಸಮರ್ಪಣೆ ಮಾಡಲಾಯಿತು.

# ಮಲ್ಲೇಪುರಂರ ದಿಟದ ದೀವಟಿಗೆ ಬಿಡುಗಡೆ

**ಬೆಂಗಳೂರು:** ಸತ್ಯದ ಬೆಳಕಿನಲ್ಲಿ ಪ್ರಖರತೆಯ ಹೋರಾಟ ಇದೆ ಎಂದು ತಿಳಿಸುವ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಕೃತಿ 'ದಿಟದ ದೀವಟಿಗೆ'ಯಲ್ಲಿ ನೋವು, ದುಃಖಗಳ ಸಹಜ ಅಭಿವ್ಯಕ್ತಿ ಹಾಗೂ ಸತ್ಯದ ದರ್ಶನ ಕಾಣಬಹುದು ಎಂದು ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷರೂ ಆಗಿರುವ ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಸಿ. ಸೋಮಶೇಖರ್ ಹೇಳಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ವತಿಯಿಂದ ನಗರದ ಗಾಂಧಿ ಭವನದ ಮಹದೇವ ದೇಸಾಯಿ ಸಭಾಂಗಣದಲ್ಲಿ ಆಯೋಜಿಸಲಾಗಿದ್ದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಆತ್ಮಕಥನ 'ದಿಟದ ದೀವಟಿಗೆ' ಕೃತಿಯ ಲೋಕಾರ್ಪಣೆ ಮತ್ತು ಗಣ್ಯರಿಗೆ ಸನ್ಮಾನ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

'ದಿಟದ ದೀವಟಿಗೆ' ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿದ ಕೇಂದ್ರಿಯ ಸಂಸ್ಕೃತ ವಿವಿ ಕುಲಪತಿ ಪ್ರೊ. ಶ್ರೀನಿವಾಸ ವರಖೇಡಿ, ಸಾಹಿತ್ಯ ಗದ್ಯ ಕೃತಿ ಮಾತ್ರ ಆಗಬಾರದು. ಆಗ ಅದೊಂದು ಕಲ್ಪನಾ ಲೋಕವಾಗಿ ಹೊರಹೊಮ್ಮುತ್ತದೆ. ಆದರಿಂದ ಅದನ್ನೆಲ್ಲಾ ಮೀರಿದ ಕಥನವನ್ನು ಬರೆಯಬೇಕು. ಅಂತಹ ಕಥನವನ್ನು ಆತ್ಮಕಥನವಾಗಿ ಬರೆಯಬೇಕಾದರೆ ಮೊದಲು ಆ ವ್ಯಕ್ತಿ ಸಾಕ್ಷಿಯಾಗಬೇಕು. ಲೇಖಕನಾಗಿ ತನ್ನನ್ನು ತಾನು ಕಾಣದೇ ಒಬ್ಬ ಸಾಕ್ಷಿಯಾಗಿ ತನ್ನ ಜೀವನವನ್ನು ನೋಡಬೇಕಾಗುತ್ತದೆ. ಇದು ಬಹಳ ಸೂಕ್ಷ್ಮ. ಇಂತಹ ವಿಚಾರವನ್ನು ನಾನು ಮಲ್ಲೇಪುರಂ ಅವರ ಆತ್ಮಕಥನದಲ್ಲಿ ಕಂಡಿದ್ದೇನೆ ಎಂದು ತಿಳಿಸಿದರು.

ನಾಡೋಜ ವೂಡೇ ಪಿ. ಕೃಷ್ಣ, ಅಂಕಿತ ಪುಸ್ತಕದಪ್ರಕಾಶ್ ಕಂಬತ್ತಳ್ಳಿ ಮತ್ತಿತರರು ಇದ್ದರು. ಇದೇ ವೇಳೆ ಮಲ್ಲೇಪುರಂ ಜಿ. ವೆಂಕಟೇಶ್ ಸೇರಿ ದಂತೆ ಹಲವು ಗಣ್ಯರನ್ನು ಸನ್ಮಾನಿಸಲಾಯಿತು.



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ವತಿಯಿಂದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಆತ್ಮಕಥನ 'ದಿಟದ ದೀವಟಿಗೆ' ಕೃತಿ ಲೋಕಾರ್ಪಣೆ ಮಾಡಲಾಯಿತು. ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಸಿ. ಸೋಮಶೇಖರ್, ಸಾಹಿತಿ ಪ್ರೊ. ಶ್ರೀನಿವಾಸ ವರಖೇಡಿ, ಮಲ್ಲೇಪುರಂ ಜಿ. ವೆಂಕಟೇಶ, ನಾಡೋಜ ವೂಡೇ ಪಿ. ಕೃಷ್ಣ, ಅಂಕಿತ ಪುಸ್ತಕದ ಪ್ರಕಾಶ್ ಕಂಬತ್ತಳ್ಳಿ ಮತ್ತಿತರರು ಇದ್ದರು.



ನನ್ನ ಎಲ್ಲ ಸಾಹಿತ್ಯ ಸೇವೆಯಲ್ಲಿಯೂ ಹಲವಾರು ಸಾಹಿತ್ಯಿಕ ಗೆಳೆಯರ ಬೆಂಬಲವಿದೆ. ನನ್ನ ಆತ್ಮಕಥನವನ್ನು ಹೊರತರಲು ಬಹಳಷ್ಟು ಮಂದಿ ಪ್ರೋತ್ಸಾಹವನ್ನು ನೀಡಿದ್ದಾರೆ. ಅನಾದಿಕಾಲದ ಗುರುಗಳಿಂದ ಹಿಡಿದು ಇತ್ತೀಚಿನ ಬರಹಗಾರರು ನನಗೆ ಪ್ರೀತಿಯನ್ನು ತೋರಿಸಿದ್ದಾರೆ.

**– ಮಲ್ಲೇಪುರಂ ಜಿ. ವೆಂಕಟೇಶ**
ವಿದ್ವಾಂಸ



ಅನೇಕ ಮಹಾನುಭವರು ಹೋರಾಟದ ಹಾದಿಯಲ್ಲಿ ತಮ್ಮ ಬದುಕು ರೂಪಿಸಿಕೊಂಡವರು. ಇವರ ಬದುಕಿನ ಸಾಧನೆಗೆ ಮೂಲ ಕಾರಣ ಅವರ ಕಠಿಣ ಪರಿಶ್ರಮ ಗುರು ಕಾರುಣ್ಯ ಮತ್ತು ಅವರ ತಂದೆ ತಾಯಿಯ ಆಶೀರ್ವಾದ. ಹೀಗೆ ತಂದೆ ತಾಯಿಗಳ ಸ್ಫೂರ್ತಿಯಿಂದ ತಮ್ಮ ಬದುಕನ್ನು ರೂಪಿಸಿದವರಲ್ಲಿ ಬಹುಭಾಷಾ ವಿದ್ವಾಂಸ ಮಲ್ಲೇಪುರಂ ಸಹ ಒಬ್ಬರು.

**– ಡಾ.ಸಿ.ಸೋಮಶೇಖರ್**
ಗಡಿ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ

DAILY NEWS ಕನ್ನಡ

ಸೋಮವಾರ • ಡಿಸೆಂಬರ್ 4, 2023

# ಜೀವನದ ಮೂಲ ದ್ರವ್ಯ ಅಧ್ಯಯನಶೀಲತೆ

## ತಮ್ಮ ಜೊತೆ ಎಲ್ಲರನ್ನೂ ಒಟ್ಟಿಗೆ ಕರೆದುಕೊಂಡು ಹೋಗುವ ಮನಸ್ಥಿತಿ ಮಲ್ಲೇಪುರಂ ಅವರದ್ದು: ನಾಡೋಜ ವೂಡೇ ಪಿ. ಕೃಷ್ಣ

• ದಿ ಡೈಲಿ ನ್ಯೂಸ್ ಬೆಂಗಳೂರು

ಅನೇಕ ಮಹಾನುಭವರು ಹೋರಾಟದ ಹಾದಿಯಲ್ಲಿ ಬದುಕನ್ನು ರೂಪಿಸಿಕೊಂಡವರು. ಇವರ ಸಾಧನೆಗೆ ಮೂಲ ಕಾರಣ ಕಠಿಣ ಪರಿಶ್ರಮ ಗುರುಕಾರುಣ್ಯ, ತಂದೆ ತಾಯಿಯ ಆಶೀರ್ವಾದ. ಹೀಗೆ ಬದುಕನ್ನು ರೂಪಿಸಿದವರಲ್ಲಿ ಮಲ್ಲೇಪುರಂ ಸಹ ಒಬ್ಬರು ಎಂದು ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರದ ನಿಕಟಪೂರ್ವ ಅಧ್ಯಕ್ಷ ಸಿ.ಸೋಮಶೇಖರ ಹೇಳಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ಪತಿಯಿಂದ ನಗರದ ಮಹದೇವ ದೇಸಾಯಿ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಆತ್ಮಕಥನ ದಿಟದ ದೀವಟಿಗೆ ಕೃತಿಯ ಲೋಕಾರ್ಪಣೆ ಮತ್ತು ಗಣ್ಯರಿಗೆ ಸನ್ಮಾನ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಸತ್ಯದ ಬೆಳಕಿನಲ್ಲಿ ಪ್ರಖರತೆಯ ಹೋರಾಟ ಇದೆ ಎಂದು ತಿಳಿಸುವ ಕೃತಿ ದಿಟದ ದೀವಟಿಗೆ. ನೋವು ದುಃಖಗಳ ಸಹಜ ಅಭಿವ್ಯಕ್ತಿ ಹಾಗೂ ಸತ್ಯದ ದರ್ಶನವನ್ನು ಇಲ್ಲಿ ಕಾಣಬಹುದು. ಅವರ ಇಡೀ ಜೀವನದ ಮೂಲ ದ್ರವ್ಯ ಏನೆಂದರೆ ಅವರ ಅಧ್ಯಯನಶೀಲತೆ ಎಂದರು. ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿದ ಕುಲಪತಿಗಳು, ಪ್ರೊ. ಶ್ರೀನಿವಾಸ್, ದಿಟದ ದೀವಟಿಗೆ ಮಲ್ಲೇಪುರಂ ಅವರ ನಿಜವಾದ ಆತ್ಮಕಥನ. ಇಲ್ಲಿ ತಾನು ಆ ಪಾತ್ರದೊಳಗೆ ಇದ್ದೇನೆ, ಅದನ್ನೇ ನಾನು ಜೀವಿಸುತ್ತಿದ್ದೇನೆ ಎನ್ನುವಂತಹ ವಿಚಾರವನ್ನು ನಾವು ಇಲ್ಲಿ ಕಾಣಬಹುದು. ಆತ್ಮಕಥನವೆನ್ನುವುದು ಇತಿಹಾಸ, ಪ್ರವಾಸ ಕಥನವಾಗಬಾರದು.



ಅಂತಹ ಕಥನವಾದಾಗ ಅಲ್ಲಿ ವ್ಯಕ್ತಿ ಮರೆಯಾಗುತ್ತಾನೆ. ಅಷ್ಟೇ ಅಲ್ಲದೆ ಸಾಹಿತ್ಯ ಗದ್ಯ ಕೃತಿಯೂ ಆಗಬಾರದು. ಆಗ ಅದೊಂದು ಕಲ್ಪನಾ ಲೋಕವಾಗಿ ಹೊರಹೊಮ್ಮುತ್ತದೆ. ಆದರಿಂದ ಅದನ್ನೆಲ್ಲಾ ಮೀರಿದ ಕಥನವನ್ನು ಬರೆಯಬೇಕು. ಅಂತಹ ಕಥನವನ್ನು ಆತ್ಮಕಥನವಾಗಿ ಬರೆಯಬೇಕಾದರೆ ಮೊದಲು ಆ ವ್ಯಕ್ತಿಯು ಸಾಕ್ಷಿಯಾಗಬೇಕು. ಏಕೆಂದರೆ ತಾನು ಲೇಖಕನಾಗಿ ತನ್ನನ್ನು ತಾನು ಕಾಣದೇ ಒಬ್ಬ ಸಾಕ್ಷಿಯಾಗಿ ತನ್ನ ಜೀವನವನ್ನು ನೋಡಬೇಕಾಗುತ್ತದೆ. ಇದು ಬಹಳ ಸೂಕ್ಷ್ಮ. ಇಂತಹ ವಿಚಾರವನ್ನು ನಾನು ಮಲ್ಲೇಪುರಂ ಅವರ ಆತ್ಮಕಥನದಲ್ಲಿ ಕಂಡಿದ್ದೇನೆ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ನಾಡೋಜ ವೂಡೇ ಪಿ. ಕೃಷ್ಣ ಮಾತನಾಡಿ, ತಮ್ಮ ಜೊತೆ ಎಲ್ಲರನ್ನೂ ಒಟ್ಟಿಗೆ ಕರೆದುಕೊಂಡು ಹೋಗುವ ಮನಸ್ಥಿತಿ ಮಲ್ಲೇಪುರಂ ಅವರದ್ದು. ತಾನು ಬೆಳೆಯುವುದರ ಜೊತೆಗೆ ಇತರರನ್ನು ಬೆಳೆಸುವ ಪ್ರವೃತ್ತಿ ಹೊಂದಿದ್ದಾರೆ. ಇಂದಿನ ಈ ಕಾರ್ಯಕ್ರಮವು ರಾಜ್ಯಮಟ್ಟದ ಕಾರ್ಯಕ್ರಮವಾಗಿ ಹೊರಮ್ಮುತ್ತಿದೆ.ಅದು ಬಹಳಷ್ಟು ಖುಷಿ ತಂದಿದೆ ಎಂದರು. ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ ಸೇರಿದಂತೆ ಹಲವಾರು ಗಣ್ಯರಿಗೆ ಗೌರವ ಸಮರ್ಪಣೆಯನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ವಿಸ್ತಾರ ವಾಹಿನಿಯ ಸ್ಥಾಪಕ ಹರಿಪ್ರಕಾಶ್ ಕೋಣೆಮನೆ ಸೇರಿದಂತೆ ಹಲವಾರು ಗಣ್ಯರು ಉಪಸ್ಥಿತರಿದ್ದರು.

> ನನ್ನ ಎಲ್ಲಾ ಸಾಹಿತ್ಯ ಸೇವೆಯಲ್ಲಿಯೂ ಹಲವಾರು ಸಾಹಿತ್ಯಿಕ ಗೆಳೆಯರ ಬೆಂಬಲವಿದೆ. ದಿಟದ ದೀವಟಿಗೆ ಆತ್ಮಕಥನವನ್ನು ಹೊರತರಲು ಬಹಳಷ್ಟು ಮಂದಿ ಪ್ರೋತ್ಸಾಹ ನೀಡಿದ್ದಾರೆ. ಅನಾದಿಕಾಲದ ಗುರುಗಳಿಂದ ಹಿಡಿದು ಇತ್ತೀಚಿನ ಬರಹಗಾರರು ನನಗೆ ಪ್ರೀತಿ ತೋರಿಸಿದ್ದಾರೆ .ಈ ಸಂದರ್ಭದಲ್ಲಿ ಅವರೆಲ್ಲರಿಗೂ ನಾನು ಕೃತಜ್ಞತೆ ತಿಳಿಸುತ್ತೇನೆ.
>
> -ಮಲ್ಲೇಪುರಂ ಜಿ. ವೆಂಕಟೇಶ, ವಿದ್ವಾಂಸ

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

● VIJAYAVANI >> BENGALURU
ಸೋಮವಾರ 4 ಡಿಸೆಂಬರ್ 2023
4 DECEMBER 2023

## ಡಾ. ಸಿ. ಸೋಮಶೇಖರ್ ಅಭಿಮತ | ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಆತ್ಮಕಥೆ ಬಿಡುಗಡೆ

# ಬಡತನ ಅರಿತವನಿಗೆ ಉಜ್ವಲ ಭವಿಷ್ಯವಿದೆ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಬಡತನ ಮತ್ತು ಹಸಿವು ಅರಿತವನಿಗೆ ಉಜ್ವಲವಾದ ಭವಿಷ್ಯ ಇದೆ ಎಂಬುದಕ್ಕೆ ಪ್ರೊ. ಮಲ್ಲೇಪುರಂ ವೆಂಕಟೇಶ್ ಸಾಕ್ಷಿಯಂತೆ ಇದ್ದಾರೆ. ನಿರಂತರ ಅಧ್ಯಯನಶೀಲತೆ ಮತ್ತು ವಿನಯವಂತಿಕೆಯ ಅಪೂರ್ವ ಗುಣಗಳಿಂದ ಅವರು ಉತ್ತುಂಗದ ಸ್ಥಾನ ಪಡೆದಿರುವುದು ಬೇರೆಯವರಿಗೂ ಮಾದರಿಯಾಗಿದೆ ನಿವೃತ್ತ ಐಎಎಸ್ ಅಧಿಕಾರಿ ಡಾ. ಸಿ. ಸೋಮಶೇಖರ್ ಹೇಳಿದ್ದಾರೆ.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಅಂಕಿತ ಪುಸ್ತಕ ಪ್ರಕಾಶನ ವತಿಯಿಂದ ಗಾಂಧಿ ಭವನದಲ್ಲಿ ಭಾನುವಾರ ಆಯೋಜಿಸಿದ್ದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ 'ದಿಟದ ದೀವಟಿಗೆ' ಆತ್ಮ ಕಥೆ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದರು.

'ದಿಟ' ಅಂದರೆ 'ಸತ್ಯ', 'ದೀವಟಿಗೆ' ಅಂದರೆ ದೀಪ. ದೀಪ ಎಂಬ ಪದಕ್ಕೆ 'ಪಂಜು' ಎನ್ನುವ ಅರ್ಥವೂ ಇದೆ. ಅದು ಹೋರಾಟದ ಸಂಕೇತ. ಮಲ್ಲೇಪುರಂ ಅವರ ಬದುಕು ಸತ್ಯದ ಬೆಳಕಿನಲ್ಲಿ ನಡೆಸಿದ ಪ್ರಖರ ಹೋರಾಟವಾಗಿದೆ. ಮಲ್ಲೇಪುರಂ ಅವರ ಪ್ರಖರತೆಯ ಹೋರಾಟ ಇದೆ. ಈ ಆತ್ಮಕಥನದಲ್ಲಿ ಕಠಿಣ ಪರಿಶ್ರಮ, ಗುರು ಕಾರುಣ್ಯ ಮತ್ತು ತಂದೆ-ತಾಯಿಯ ಆಶೀರ್ವಾದವನ್ನು ಸೊಗಸಾಗಿ ವಿವರಿಸಿದ್ದಾರೆ ಎಂದರು. ದೊಡ್ಡ ವಿದ್ವಾಂಸರಾಗಿದ್ದರೂ ವಿನಯಶೀಲತೆ ಮಲ್ಲೇಪುರಂ ಅವರ ಮುಖ್ಯ ಗುಣ. ಕನ್ನಡ ಹಾಗೂ ಸಂಸ್ಕೃತ ಭಾಷೆಗೆ ಅವರ ಕೊಡುಗೆ ಗಣನೀಯವಾಗಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಮಲ್ಲೇಪುರಂ ಜಿ. ವೆಂಕಟೇಶ್ ಮಾತನಾಡಿ, ಬದುಕಿನುದ್ದಕ್ಕೂ ಸಮಾಜವೇ ನನ್ನ ಕುಟುಂಬವಾಗಿದೆ. ಸಾಧನೆಯ ಪ್ರತಿಯೊಂದು ಹೆಜ್ಜೆಯಲ್ಲಿ ನನ್ನ ಗುರುಗಳು, ಕುಟುಂಬ, ಆಪ್ತಮಿತ್ರರು, ವಿದ್ಯಾರ್ಥಿಗಳ ಅಪಾರ ಪ್ರೀತಿ ಮತ್ತು ಬೆಂಬಲವಿದೆ ಎಂದು ಸ್ಮರಿಸಿದರು.

ಅಖಿಲ ಕರ್ನಾಟಕ ಕೊರಮ ಸಂಘದ ಅಧ್ಯಕ್ಷ ಜಿ. ಮಾದೇಶ ಇತರರಿದ್ದರು.



ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ 'ದಿಟದ ದೀವಟಿಗೆ' ಆತ್ಮಕಥೆ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಡಾ. ಸಿ. ಸೋಮಶೇಖರ್, ಡಾ. ವೂಡೇ ಪಿ. ಕೃಷ್ಣ, ಪ್ರೊ. ಶ್ರೀನಿವಾಸ ವರಖೇಡಿ, ಮಾದೇಶ ಇತರರಿದ್ದರು.

### ಕಷ್ಟದೆದುರು ಬಂಡೆಗಲ್ಲಿನಂತೆ ನಿಲ್ಲುತ್ತಾರೆ...

ಸ್ವ ಅಹಂ ಎಂಬ ಪದ ಬಳಕೆಗೊಳ್ಳದೆ ಇದ್ದರೆ ಈ ಪ್ರಪಂಚವು ಮಲ್ಲೇಪುರಂ ಅವರಂತಹ ಗಣ್ಯರಿಂದಲೇ ಕೂಡಿರುತ್ತಿತ್ತು. ಸಾಮಾನ್ಯವಾಗಿ ಆತ್ಮಕಥನಗಳು ಇತಿಹಾಸ, ಪ್ರವಾಸಕಥನ, ಗದ್ಯ ಕೃತಿ ಎನಿಸಿಕೊಳ್ಳುತ್ತದೆ. ಆದರೆ ಮಲ್ಲೇಪುರಂ ಅವರ ಈ ಕೃತಿ ಜೀವಂತಿಕೆ ಕೂಡಿದೆ. ಕಷ್ಟ, ನೋವು ಎದುರಾದಾಗ ಬಂಡೆಗಲ್ಲಿನಂತೆ ನಿಲ್ಲುವುದು ಅವರ ಸ್ವಭಾವ. ಹಿಂದೊಮ್ಮೆ ಸುಪ್ರೀಂಕೋರ್ಟ್ ವಿಶ್ರಾಂತ ಮುಖ್ಯ ನ್ಯಾಯಮೂರ್ತಿ ಎಂ.ಎನ್. ವೆಂಕಟಾಚಲಯ್ಯ ಅವರು ಹೇಳಿರುವ ಹಾಗೆ, ಮಲ್ಲೇಪುರಂ ಅವರು 'ಈ ಕಾಲದ ವಾಲ್ಮೀಕಿ' ಎಂದು ಕೇಂದ್ರೀಯ ಸಂಸ್ಕೃತ ವಿವಿ ಕುಲಪತಿ ಪ್ರೊ. ಶ್ರೀನಿವಾಸ ವರಖೇಡಿ ಹೇಳಿದರು.

> ಮಲ್ಲೇಪುರಂ ಅವರು ವೃತ್ತಿಯಿಂದ ನಿವೃತ್ತಿಗೊಂಡರೆ ವಿನಾ ಪ್ರವೃತ್ತಿಯಿಂದ ಅಲ್ಲ. ಅಧ್ಯಯನಶೀಲತೆ ಅವರ ಮೂಲ ಗುಣ. ಅವರ ಶಿಷ್ಯಂದಿರ ಬೆಳವಣಿಗೆಯಲ್ಲೂ ಈ ಅಂಶವನ್ನು ಕಾಣಬಹುದು. ತಮ್ಮ ಬದುಕಿನ ಘಟನೆಗಳನ್ನು ಅನುಭವಿಸುತ್ತಲೇ ಅವಕ್ಕೆ ಸಾಕ್ಷಿಪ್ರಜ್ಞೆಯಾಗಿ ಇಲ್ಲಿ ಬಿಂಬಿಸಿದ್ದಾರೆ.
>
> | ಡಾ. ವೂಡೇ ಪಿ. ಕೃಷ್ಣ
> ಅಧ್ಯಕ್ಷ, ಗಾಂಧಿ ಸ್ಮಾರಕ ನಿಧಿ

ವಿಜಯವಾಣಿ
ಭಾನುವಾರ 3 ಡಿಸೆಂಬರ್ 2023
3 DECEMBER 2023

# ಆತ್ಮವಿಶ್ವಾಸವೇ ಶಿಕ್ಷಣದ ಸಂಕೇತ

ವಿಜಯವಾಣಿ ಚಿತ್ರ



ಪಂಡಿತ್ ಬಸವರಾಜ ಬೆಂಡಿಗೇರಿ ಸ್ಮರಣಾರ್ಥ ಆಯೋಜಿಸಿದ್ದ 'ಗಾನ ವಾದ್ಯ ವೈಭವ' ಕಾರ್ಯಕ್ರಮದಲ್ಲಿ ಡಾ. ವೂಡೇ ಪಿ. ಕೃಷ್ಣ, ಡಾ. ಮೃತ್ಯುಂಜಯ ಶೆಟ್ಟರ್, ಸತೀಶ್ ಹಂಪಿಹೊಳಿ ಮತ್ತಿತರರಿದ್ದರು.

» ಡಾ. ವೂಡೇ ಪಿ. ಕೃಷ್ಣ ಅಭಿಮತ

» ಬನಶಂಕರಿಯಲ್ಲಿ 'ಗಾನ ವಾದ್ಯ ವೈಭವ'

**ಬೆಂಗಳೂರು:** ನಕಾರಾತ್ಮಕ ಚಿಂತನೆ ಹಾಗೂ ಶಬ್ದಗಳು ಮಕ್ಕಳಲ್ಲಿ ಬರದಂತೆ ಬೆಳೆಸಬೇಕು. ಆತ್ಮವಿಶ್ವಾಸವೇ ನಿಜವಾದ ಶಿಕ್ಷಣದ ಸಂಕೇತ ಎಂದು ಶಿಕ್ಷಣತಜ್ಞ ಡಾ. ವೂಡೇ ಪಿ. ಕೃಷ್ಣ ಹೇಳಿದ್ದಾರೆ.

ಸತೀಶ್ ಹಂಪಿಹೊಳಿ ಮ್ಯೂಸಿಕ್ ಫೌಂಡೇಶನ್ ಟ್ರಸ್ಟ್ ಹಾಗೂ ಸಂಗೀತ ಕೃಪಾ ಕುಟೀರ ವತಿಯಿಂದ ಬನಶಂಕರಿಯ ವಿವೇಕಾನಂದ ವಿದ್ಯಾಶಾಲೆಯಲ್ಲಿ ತಬಲ ವಾದಕ ಪಂಡಿತ್ ಬಸವರಾಜ ಬೆಂಡಿಗೇರಿ ಸ್ಮರಣಾರ್ಥ ಆಯೋಜಿಸಿದ್ದ 'ಗಾನ ವಾದ್ಯ ವೈಭವ' ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಪ್ರತಿಯೊಬ್ಬರಲ್ಲೂ ಇರುವ ಸ್ವಧರ್ಮವನ್ನು ಗಮನಿಸಿ ತರಬೇತಿ ನೀಡಿದರೆ ಎಲ್ಲರೂ ಹಂಪಿಹೊಳಿ ರೀತಿ ಆಗುತ್ತಾರೆ. ಸಂಗೀತವು ಸೂಕ್ಷ್ಮತೆ ಮತ್ತು ಸಂವೇದನಾಶೀಲತೆಯನ್ನು ವರ್ಧಿಸುತ್ತದೆ. ಇದು ಸುಸಂಸ್ಕೃತ ವ್ಯಕ್ತಿಯ ಲಕ್ಷಣ ಎಂದರು.

ಪ್ರಸಿದ್ಧ ಹಿಂದುಸ್ತಾನಿ ಗಾಯಕ ಡಾ. ಮೃತ್ಯುಂಜಯ ಶೆಟ್ಟರ್ ಮಾತನಾಡಿ, ಬಂಡಿಗೇರಿ ಸ್ಮರಣೆಯಂದು ಹಿಂದುಸ್ತಾನಿ ಶಾಸ್ತ್ರೀಯ ಸಂಗೀತವನ್ನು ಎಲ್ಲೆಡೆ ಪ್ರಚಾರ ಪಡಿಸಿದ ಪಂಡಿತ್ ಶೇಷಾದ್ರಿ ಗವಾಯಿ ಅವರನ್ನು ನೆನೆಯುತ್ತ, ತಮ್ಮ ಗುರು ಪಂಡಿತ್ ಮಲ್ಲಿಕಾರ್ಜುನ್ ಮನ್ಸೂರ್ ಹೇಳುತ್ತಿದ್ದ 'ಸ್ವರಗಳನ್ನು ಕಿತ್ಕೋಬಾರ್ದು, ಅವುಗಳನ್ನು ಎತ್ಕೋಬೇಕು' ಎಂಬ ಮಾತನ್ನು ನೆನಪಿಸಿಕೊಂಡರು.

ಹಿರಿಯ ಕಲಾವಿದರಾದ ಪಂಡಿತ್ ಎನ್.ಎಸ್. ಗುಂಡಾಶಾಸ್ತ್ರಿ, ಪಂಡಿತ್ ಸತೀಶ್ ಹಂಪಿಹೊಳಿ, ವಿದ್ವಾನ್ ಅಮೃತೇಶ್ ಕುಲಕರ್ಣಿ, ಅಮಿತ್ ಭಟ್, ಆಕಾಂಕ್ಷಾ ಬಾದಾಮಿ ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ

ಶನಿವಾರ 2 ಡಿಸೆಂಬರ್ 2023

ಬೆಂಗಳೂರು । BENGALURU



ಸಮುದಾಯ ಸಂಘಟನೆ ಹಮ್ಮಿಕೊಂಡಿದ್ದ ರಾಷ್ಟ್ರೀಯ ಸಾಂಸ್ಕೃತಿಕ ಜಾಥಾವನ್ನು ಮಾಜಿ ಸಂಸದ ಸಿ.ನಾರಾಯಣಸ್ವಾಮಿ ಉದ್ಘಾಟಿಸಿದರು. ಈ ವೇಳೆ ನಟ ಮುಖ್ಯಮಂತ್ರಿ ಚಂದ್ರು, ಚಿತ್ರಕಲಾ ಪರಿಷತ್ ಅಧ್ಯಕ್ಷ ಬಿ.ಎಲ್. ಶಂಕರ್, ಪತ್ರಕರ್ತೆ ಡಾ. ವಿಜಯಮ್ಮ, ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಉಪಾಧ್ಯಕ್ಷ ವಿಷುಕುಮಾರ್, ರಂಗಕರ್ಮಿ ಪ್ರಸನ್ನ, ಸಮುದಾಯ ಅಧ್ಯಕ್ಷ ಶಶಿಧರ್ ಜೆ.ಸಿ. ಮತ್ತಿತರರಿದ್ದರು.

# ಗಾಂಧಿ ಮನಸ್ಕ ಹಿರಿಯ ಲೇಖಕ ಜಾಣಗೆರೆ ವೆಂಕಟರಾಮಯ್ಯ ನುಡಿಗೋಲು ಕೃತಿ ಲೋಕಾರ್ಪಣೆ, ಸಮಾರಂಭದಲ್ಲಿ ನಾಡೋಜ ಡಾ. ವೂಡೇ ಪಿ. ಕೃಷ್ಣ



"ನಾಡು, ನುಡಿಗಳಿಗೆ ಸಂಬಂಧಿಸಿದಂತೆ ಸಾಧನೆ ಮಾಡಿರುವ ಅಪೂರ್ವ ಸಾಧಕರ ಕುರಿತು ಅಪೂರ್ವವಾದ ಕೃತಿಯೊಂದನ್ನು ರಚಿಸಿರುವ ಹಿರಿಯ ಪತ್ರಕರ್ತ, ಲೇಖಕ ಜಾಣಗೆರೆ ವೆಂಕಟರಾಮಯ್ಯನವರು ತಮ್ಮ ಅನೇಕ ಕೃತಿಗಳಲ್ಲಿ ಗಾಂಧೀಜಿ ಅವರ ಚಿಂತನೆಗಳನ್ನು ಅಳವಡಿಸಿಕೊಂಡಿದ್ದಾರೆ. ಗಾಂಧಿ ಮನಸ್ಕರಾದ ಅವರು ನಮ್ಮ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಪದವೀಧರರಾಗಿದ್ದಾರೆ. ಹೀಗಾಗಿ, ಅವರು ನಮ್ಮ ಅಂಗಳದಲ್ಲಿ ಅರಳಿದ ಹೂ. ಶೇಷಾದ್ರಿಪುರಂ ಕಾಲೇಜಿನಲ್ಲಿ ಉದ್ಯೋಗಿಯಾಗಿದ್ದ ಹಿರಿಯ ಕನ್ನಡ ಹೋರಾಟಗಾರ ಹನುಮಂತರಾಯ, ಹಿರಿಯ ಲೇಖಕಿ, ಹೋರಾಟಗಾರ್ತಿ ಪ್ರೊ. ಬಿ. ನಾರಾಯಣಮ್ಮ ಮೊದಲಾದ ಐವತ್ತು ಸಾಧಕರ ಬಗೆಗೆ ಲೇಖನಗಳು ಈ ಕೃತಿಯಲ್ಲಿದ್ದು, ಮುಂದೆ ಕನ್ನಡಪರ ಹೋರಾಟ ಮಾಡುವವರಿಗೆ ಮತ್ತು ಈ ಬಗೆಗೆ ಬರವಣಿಗೆ ಮಾಡುವವರಿಗೆ ನಿಜವಾಗಿ ಒಂದು ಆಕರ ಗ್ರಂಥ" ಎಂದು ಹೇಳಿದ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ, ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು 1982ರಲ್ಲಿ ಬಿ.ಇ. ವ್ಯಾಸಂಗ ಮಾಡುತ್ತಿದ್ದ ಸಂದರ್ಭದಲ್ಲಿ ಗೋಕಾಕ್ ಚಳವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದುದನ್ನು ಸ್ಮರಿಸಿಕೊಂಡರು.

ಇತ್ತೀಚೆಗೆ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಜಾಣಗೆರೆ ಪತ್ರಿಕೆ ಪ್ರಕಾಶನ ಏರ್ಪಡಿಸಿದ್ದ ಸಮಾರಂಭದಲ್ಲಿ ಪತ್ರಕರ್ತ, ಸಾಹಿತಿ ಜಾಣಗೆರೆ ವೆಂಕಟರಾಮಯ್ಯ ಅವರು ಅಪೂರ್ವ ಸಾಧಕರ ಬಗ್ಗೆ ರಚಿಸಿರುವ ನುಡಿ ಸಂಕಲನ 'ನುಡಿಗೋಲು' ಕೃತಿ ಲೋಕಾರ್ಪಣೆಗೊಳಿಸಿ ಡಾ. ವೂಡೇ ಪಿ. ಕೃಷ್ಣ ಮಾತನಾಡಿದರು.

ಇದೇ ಸಮಾರಂಭದಲ್ಲಿ ಈ ಬಾರಿಯ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನ್ಯಾಯಮೂರ್ತಿ ವಿ. ಗೋಪಾಲಗೌಡ, ಶಿಕ್ಷಣ ತಜ್ಞ ಕೆ. ಚಂದ್ರಶೇಖರ್ ಮತ್ತು ಕವಯತ್ರಿ ಕೆ. ಷರೀಫ್ ಅವರಿಗೆ ವಿಶೇಷ ಗೌರವಾಭಿನಂದನೆ ಸಲ್ಲಿಸಲಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಕಾರ್ಯದರ್ಶಿ ಸಿ.ಕೆ. ರಾಮೇಗೌಡ ನಿರೂಪಿಸಿದ ಕಾರ್ಯಕ್ರಮ ಲಿಂಕಾ ಬುಕ್ ಆಫ್ ವರ್ಲ್ಡ್ ರಿಕಾರ್ಡ್ಸ್‌ನಲ್ಲಿ ಹ್ಯಾಟ್ರಿಕ್ ದಾಖಲೆ ಮಾಡಿರುವ ರಂಗ ಸಂಸ್ಥಾನದ ಡಾ. ಬಂಡ್ಲಹಳ್ಳಿ ವಿಜಯಕುಮಾರ್ ಮತ್ತು ತಂಡದವರು ಸುಶ್ರಾವ್ಯವಾಗಿ ನಾಡಗೀತೆ ಮತ್ತು ರೈತಗೀತೆ ಹಾಡುವುದರೊಂದಿಗೆ ಆರಂಭವಾಯಿತು. ಇದೇ ತಂಡ ವೇದಿಕೆ ಕಾರ್ಯಕ್ರಮಕ್ಕೆ ಮೊದಲು ಅನೇಕ ಕನ್ನಡ ಗೀತೆಗಳ ಗಾಯನದಿಂದ ಹೆಚ್ಚಿನ ಸಂಖ್ಯೆಯಲ್ಲಿ ನೆರೆದಿದ್ದ ಸಾಹಿತ್ಯಾಭಿಮಾನಿಗಳ ಮನಸ್ಸಿಗೆ ಮುದ ನೀಡಿತು. ನಿರೂಪಕ ಸಿ.ಕೆ. ರಾಮೇಗೌಡ 'ಲಂಕೇಶ್ ಪತ್ರಿಕೆಯ ಪ್ರಕಟಣೆಯಲ್ಲಿ ಪಿ. ಲಂಕೇಶರ ಬಲಗೈ ಆಗಿದ್ದ ಜಾಣಗೆರೆ. ಕನ್ನಡದಿಂದ ಬದುಕಿದ ಅನೇಕ ನಾಯಕರಿದ್ದರೆ, ಕನ್ನಡಕ್ಕೋಸ್ಕರ ಬದುಕುತ್ತಿರುವ ಕೆಲವೇ ನಾಯಕರಲ್ಲಿ ಜಾಣಗೆರೆ ಅವರು ಒಬ್ಬರು. ಪ್ರತಿ ಶನಿವಾರ, ಭಾನುವಾರ ವ್ಯವಸಾಯದ ಕಾರ್ಯಕ್ರಮದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಇವರು ನಿಜವಾದ ಮಣ್ಣಿನಮಗ' ಎಂದು ಪ್ರಶಂಸೆಯ ನುಡಿಗಳನ್ನಾಡಿದರು.



ಪ್ರಾಸ್ತಾವಿಕ ನುಡಿಗಳನ್ನಾಡಿದ ಲೇಖಕ ಜಾಣಗೆರೆ ವೆಂಕಟರಾಮಯ್ಯ '50 ಹಿರೋಗಳ ಚಿತ್ರಣ ಇರುವ ನುಡಿಗೋಲು ನನ್ನ ಮಹತ್ವದ ಕೃತಿ' ಎಂದರಲ್ಲದೆ, ರಷ್ಯಾ-ಉಕ್ರೇನ್, ಇಸ್ರೇಲ್‌ಗಳಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಪ್ರಸ್ತಾಪಿಸಿ, ಜಗತ್ತೇ ಯುದ್ಧ ಪಿಪಾಸುವಾಗಿದೆ. ರಕ್ತ ಪಿಪಾಸುವಾಗಿದೆ. ಮಹಾತ್ಮ ಗಾಂಧೀಜಿ ಅಂತಹವರು ಈಗ ಅವತರಿಸಬೇಕು ಎಂದು ಅಭಿಪ್ರಾಯಪಟ್ಟರು.

ಸಮಾರಂಭದಲ್ಲಿ ಕೃತಿಯ ಪ್ರಥಮ ಪ್ರತಿ ಸ್ವೀಕರಿಸಿದ ಪ್ರಜಾವಾಣಿ ಪತ್ರಿಕೆಯ ಕಾರ್ಯನಿರ್ವಾಹಕ ಸಂಪಾದಕ ರವೀಂದ್ರ ಭಟ್ಟ ಅವರು ತಾವು ಇದೇ ಕಾಲೇಜಿನ ಮುಂಭಾಗದಲ್ಲಿ ಬೀಡಾ ಅಂಗಡಿ ಇಟ್ಟುಕೊಂಡು ಜೀವನ ನಿರ್ವಹಿಸುತ್ತಿದ್ದುದು, ಜಾಣಗೆರೆ ಅವರು ತಮ್ಮನ್ನು ಈ ಸಂಜೆ ಪತ್ರಿಕೆಗೆ ಸೇರಿಸಿ ಪತ್ರಕರ್ತನನ್ನಾಗಿ ಮಾಡಿದುದನ್ನು ಸ್ಮರಿಸಿಕೊಂಡರು.

ಸಮಾರಂಭ ಉದ್ಘಾಟಿಸಿದ ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಡಾ. ಹೆಚ್.ಎಲ್. ಪುಷ್ಪ ತಮ್ಮ ಹಲವಾರು ಕವನಗಳು ಜಾಣಗೆರೆ ಅವರ ಮಾರ್ದನಿ ಪತ್ರಿಕೆಯಲ್ಲಿ ಪ್ರಕಟವಾಗಿ ತಮಗೆ ಖ್ಯಾತಿ ತಂದುಕೊಟ್ಟುದನ್ನು ಸ್ಮರಿಸಿಕೊಂಡರು. ಸ್ವತಃ ದೊಡ್ಡ ಕನ್ನಡಪರ ಹೋರಾಟಗಾರರಾದ ಜಾಣಗೆರೆ 'ಊರುಗೋಲು' ಕೃತಿಯಲ್ಲಿ ವಿವಿಧ ಘಟ್ಟಗಳ ಹೋರಾಟಗಾರರ ಬಗೆಗೆ ಬರೆದು ಕೃತಿಯನ್ನು ವ್ಯಕ್ತಿತ್ವಗಳ ಕೋಶವನ್ನಾಗಿಸಿದ್ದಾರೆ. ಹಿರಿಯ ಲೇಖಕಿ, ಹೋರಾಟಗಾರ್ತಿ ಆಗಿದ್ದ ಪ್ರೊ. ಬಿ. ನಾರಾಯಣಮ್ಮ ಅವರ ಕುರಿತು ಲೇಖನ ಇರುವುದು ನನ್ನ ಸಂತಸ ಹೆಚ್ಚಿಸಿತು. ಕೃತಿಯ ಎಲ್ಲಾ ಲೇಖನಗಳನ್ನು ಓದಿ ಸಂತೋಷ ಪಟ್ಟಿದ್ದೇನೆ' ಎಂದು ಹೇಳಿದರು.

ಕೃತಿ ಕುರಿತು ಮಾತನಾಡಿದ ಕವಿ, ಚಿಂತಕ ಡಾ. ಬಂಜಗೆರೆ ಜಯಪ್ರಕಾಶ್ 'ನಾನು ಜಾಣಗೆರೆ ಅವರ ಗರಡಿಯಿಂದ ಬಂದವನು. ನನ್ನಂತೆ ಅನೇಕ ಲೇಖಕರನ್ನು ಜಾಣಗೆರೆ ಬೆಳಕಿಗೆ ತಂದಿದ್ದಾರೆ. ಅವರು ತಮ್ಮ ಗುಣಗ್ರಾಹಿತ್ವ ಬರವಣಿಗೆಯಿಂದ ಮೂರ್ನಾಲ್ಕು ದಶಕಗಳ ಹೋರಾಟಗಾರರನ್ನು 'ನುಡಿಗೋಲು' ಕೃತಿಯಲ್ಲಿ ಪರಿಚಯಿಸಿದ್ದಾರೆ. ಸ್ವತಃ ದೊಡ್ಡ ಚಳವಳಿಗಾರರಾಗಿ, ಅಸ್ಖಲಿತ ಭಾಷಣಕಾರರಾಗಿ ಇವರು ರಚಿಸಿರುವ ಈ ಕೃತಿ ಕರ್ನಾಟಕದ ನಾಲ್ಕು ದಶಕಗಳ ಕಾಲದ ಸಾಂಸ್ಕೃತಿಕ ಲೋಕದ ಒಂದು ಆಕರ ಗ್ರಂಥ. ಅತ್ಯಂತ ಸಂಯಮದಿಂದ, ಎಲ್ಲಾ ಉತ್ಪ್ರೇಕ್ಷೆ ಇಲ್ಲದೆ, 25 ಖ್ಯಾತ ನಾಮರ ಜೊತೆಗೆ, ಅಸಾಮಾನ್ಯ ಕೊಡುಗೆ ನೀಡಿರುವ ಅತಿ ಸಾಮಾನ್ಯ ಎಲೆಮರೆಯ ಕಾಯಿಗಳಂತಿರುವ ವ್ಯಕ್ತಿಗಳ ಚಿತ್ರಣವನ್ನು ನೀಡಿದ್ದಾರೆ' ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಹಂಪಿ ಕನ್ನಡ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ಹಿ.ಚಿ. ಬೋರಲಿಂಗಯ್ಯ ಅವರು ತಾವೂ ವೆಂಕಟರಾಮಯ್ಯನವರಂತೆ ಕುಣಿಗಲ್ ತಾಲ್ಲೂಕಿನವರು, ಸಾಹಿತ್ಯಕ-ಸಾಂಸ್ಕೃತಿಕ ಲೋಕಕ್ಕೆ ನಮ್ಮ ತಾಲ್ಲೂಕು ದೊಡ್ಡ ಕೊಡುಗೆ ನೀಡಿದೆ ಎಂದು ಸಂತಸಪಟ್ಟರು. ತಮ್ಮ ಬಗೆಗೆ ಬರೆಸಿಕೊಳ್ಳದೆ, ಇತರರ ಬಗೆಗೆ ಸೊಗಸಾಗಿ ಬರೆದಿದ್ದಾರೆ. ಕುವೆಂಪು ಅವರು ಹೇಳಿರುವ ಶ್ರೀಸಾಮಾನ್ಯನೇ ಭಗವನ್ ಮಾನ್ಯಂ ಎಂಬ ತತ್ತ್ವವನ್ನು ಪಾಲಿಸಿ, ಕೃತಿಯಲ್ಲಿ ಶ್ರೀಸಾಮಾನ್ಯರನ್ನು ಎತ್ತರಕ್ಕೇರಿಸಿದ್ದಾರೆ. ಬದುಕು-ಬರಹ, ನಡೆ-ನುಡಿ ನೇರಾನೇರ ಜಾಣಗೆರೆ ವೆಂಕಟರಾಮಯ್ಯನವರು.

ಅವರದು ರೈತಾಪಿ ಬದುಕಿಗೆ ಸಹಾಯವಾಗುವಂತಹ ಕಾದಂಬರಿಗಳನ್ನು ಬರೆದಿದ್ದಾರೆ. ಕನ್ನಡ ಚಳಚಳಿಯ ಕುರಿತಾಗಿಯೂ ಗ್ರಂಥಗಳನ್ನು ರಚಿಸಿದ್ದಾರೆ. "ತಮ್ಮ ಖ್ಯಾತಿಯಿಂದಾಗಿ, ಪ್ರಭಾವದಿಂದಾಗಿ, ಅವರು ಮನಸ್ಸು ಮಾಡಿದ್ದರೆ, ಬೇಕಾದಷ್ಟು ಹಣ, ಆಸ್ತಿ ಮಾಡಬಹುದಾಗಿತ್ತು. ಅಗ್ನಿಕುಂಡದಿಂದ ಎದ್ದು ಬಿದ್ದಂತಹ ಅಪ್ಪಟ ಚಿನ್ನದಂತಿರುವ ಇವರ ಬಗೆಗೆ ಒಂದು ದೊಡ್ಡ ಅಭಿನಂದನಾ ಗ್ರಂಥ ಹೊರಬರಬೇಕು" ಎಂದು ಆಶಯ ವ್ಯಕ್ತಪಡಿಸಿದರು.

ಜಾಣಗೆರೆ ವೆಂಕಟರಾಮಯ್ಯ ಅವರ ಪತ್ನಿ, ಪುತ್ರರೂ, ಸೊಸೆಯಂದಿರು, ಮೊಮ್ಮಕ್ಕಳು, ಹಿರಿಯ ವಿದ್ವಾಂಸಪ್ತ ಮಲ್ಲೇಪುರಂ ಜಿ. ವೆಂಕಟೇಶ್, ಬೆಂ.ನ.ಜಿ.ಕ.ಸಾ.ಪ ಅಧ್ಯಕ್ಷ ಎಂ. ಪ್ರಕಾಶಮೂರ್ತಿ ಮತ್ತಿತರರು ಹಾಗೂ ಕುಣಿಗಲ್ ತಾಲ್ಲೂಕಿನ ಜಾಣಗೆರೆ ಮತ್ತಿತರ ಗ್ರಾಮಗಳಿಂದ ಜಾಣಗೆರೆ ವೆಂಕಟರಾಮಯ್ಯ ಅವರ ಅನೇಕ ಅಭಿಮಾನಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. 250 ರೂ. ಮುಖಬೆಲೆಯ 278 ಪುಟಗಳ 'ನುಡಿಗೋಲು' ಕೃತಿಯ ಪ್ರತಿಗಳನ್ನು ಸಮಾರಂಭದಲ್ಲಿ ಎನ್. ವೇಣುಗೋಪಾಲ್ ಮತ್ತು ಸ್ನೇಹಿತರು ರಿಯಾಯಿತಿ ದರದಲ್ಲಿ (100 ರೂ.) ಮಾರಾಟ ಮಾಡಿದರು. -ರು. ಬಸಪ್ಪ

# ಆಡು ಮುಟ್ಟದ ಸೊಪ್ಪಿಲ್ಲ – ವೂಡೇ ಪಿ. ಕೃಷ್ಣ



## ಸದಾ ತನ್ನ ತಾತನವರನ್ನು ನೆನೆಯುವ ವೂಡೇ ಪಿ.ಕೃಷ್ಣರವರು

ಪರಿಚಯ

ಸೃಷ್ಟಿಯ ನಿಯಮದಲ್ಲಿ ಪ್ರತಿಯೊಬ್ಬ ಮನುಷ್ಯನು ಒಂದೇ ರೀತಿಯಲ್ಲಿ ಹುಟ್ಟಲು, ಬದುಕಲು, ಜೀವಿಸಲು, ಸಾಧಿಸಲು ಸಾಧ್ಯವಾಗುವುದಿಲ್ಲ, ಹುಟ್ಟಿಸುವ ದೇವರು ಹುಲ್ಲು ಮೇಯಿಸುವನೇ ಎಂಬ ಅರ್ಥಗರ್ಭಿತವಾದ ಪದಗಳು ವೂಡೇ ಪಿ. ಕೃಷ್ಣರವರಿಗೆ ಅನ್ವಯಿಸುತ್ತದೆ, ಅದೇ ರೀತಿ ದೇವರು ಎಲ್ಲವನ್ನು ಕೊಟ್ಟಿದ್ದಾನೆ, ಹಣ, ಅಂತಸ್ತು, ಅಧಿಕಾರ, ವಿದ್ಯಾ, ಸಮಾಜದಲ್ಲಿ ಗೌರವ, ಸರ್ವಜನರ ಪ್ರೀತಿವಿಶ್ವಾಸ ಎಲ್ಲವೂ ಇದೆ, ಆದರೆ ನನ್ನಲ್ಲಿ ಎಲ್ಲವೂ ಇದೆ ಎಂದು ಅಹಂ ಪಡುವ, ನಾನು ಎಂಬುವ ಈ ಎರಡು ಪದಗಳು ಕೃಷ್ಣರವರಲ್ಲಿ ಹುಡುಕಿದರು ಸಿಗುವುದಿಲ್ಲ, ಏಕೆಂದರೆ ವೂಡೇ ಪಿ ರವರಿಗೆ ದೇವರು ಎಲ್ಲವನ್ನು ಕೊಟ್ಟಿರುವುದರ ಜೊತೆಗೆ ಬೃಹದಕರವಾದ ಸಂಸ್ಕಾರವನ್ನು, ಅದರ ಜೊತೆಗೆ ಮಾನವನಾಗಿ ಹುಟ್ಟಿದ ಮೇಲೆ ಸಮಾಜದಲ್ಲಿ, ಸರ್ವಜನರ ಮಧ್ಯೆ ಹೇಗೆ ಬದುಕ ಬೇಕು ಎಂಬ ಮೌಲ್ಯವನ್ನು, ಆದರ್ಶವನ್ನು ತನ್ನ ಜೀವನದಲ್ಲಿ ಹೆಚ್ಚಾಗಿ ಅಳವಡಿಸಿಕೊಂಡಿರುತ್ತಾರೆ, ಪ್ರಸ್ತುತ ಅವರು ಇರುವ ಅಥವಾ ಜೀವಿಸುವ ರೀತಿಯನ್ನು ಒಮ್ಮೆ ನೋಡಿದಾಗ ಸದಾ ನಗು ಮುಖದ ಮುಖಿ ಎದುರಿಗೆ ಯಾರೇ ಬಂದರು ಅವರನ್ನು ನೋಡಿ ಏನೋ ಹಳೆಯ ಸ್ನೇಹಿತರೋ, ಸಂಬಂಧಿಗಳೋ ಎನ್ನುವ ರೀತಿಯಲ್ಲಿ ನಗುವಿನ ಸನ್ನೆಯಲ್ಲಿ ಪ್ರೀತಿಯ ಬಾಂದವ್ಯವನ್ನು ಬೆಸೆಯುವ ವರ್ಚಸ್ಸಿನ ವ್ಯಕ್ತಿ ನಮ್ಮ ನಾಡೋಜ ವೂಡೇ ಪಿ. ಕೃಷ್ಣರವರು.

ನಾಡೋಜ ವೂಡೇ ಪಿ. ಕೃಷ್ಣರವರ ಕುರಿತಾದ ಅಂಕಣ ಬರೆಯುವಾಗ ಕೆಲವು ಮಾಹಿತಿಗಳನ್ನು ಅವರಿವರಿಂದ ಪಡೆಯುವುದೋ – ಅಥವಾ ಮಾಹಿತಿಗಳನ್ನು ಸಂಗ್ರಹಿಸುವೂದೋ ಅಥವಾ ಇನ್ನೆಲ್ಲೋ ಮಾಹಿತಿಗಳನ್ನು ಕೇಳುವುದೋ ನನ್ನ ಕೆಲಸವಾಗಿರುತ್ತದೆ. ಈ ರೀತಿ ಮಾಹಿತಿಯನ್ನು ಸಂಗ್ರಹಿಸುವಾಗ ವೂಡೇ ಪಿ. ಕೃಷ್ಣರವರನ್ನು ಒಂದು ಸಂದರ್ಭದಲ್ಲಿ ಯೋರೋ ಕೇಳುತ್ತಾರೆ ನಿಮ್ಮ ತಾತನವರ ಪ್ರಭಾವ ನಿಮ್ಮ ಮೇಲೆ ಸ್ವಲ್ಪವಾದರೂ ಪರಿಣಾಮ ಬೀರಿದೆಯೇ ಎಂದು ಕೇಳಿದಾಗ ತುಂಬಾ ಸಂತೋಷದಿಂದ ವೂಡೇ ಪಿ. ಕೃಷ್ಣರವರು ಹೇಳುತ್ತಾರೆ, ಹೌದು, ನಮ್ಮ ತಾತಾನವರು ನನ್ನ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರಿದ್ದಾರೆ. ಇದಕ್ಕೆ ಕಾರಣ ನಮ್ಮ ತಾತನವರು ನಡೆದು ಬಂದ ಧಾರಿ, ನಡೆಸಿದ ಜೀವನ ನನ್ನಂತಹವನಿಗೆ ಒಂದು ಆದರ್ಶವಾಗಿತ್ತು, ಬೆಂಗಳೂರಿನ ಲಂಡನ್ ಮಿಷನ್ ಶಾಲೆಯಲ್ಲಿ ಶಿಕ್ಷಣ ಪಡೆದ ನಮ್ಮ ತಾತ ಡಬ್ಲೂ ಹೆಚ್. ಹನುಮಂತಪ್ಪ (ಸೀನಿಯರ್) ಇಂಗ್ಲೀಷ್ ಮತ್ತು ಕನ್ನಡ ಎರಡು ಭಾಷೆಗಳಲ್ಲೆಯು ಪಾಂಡಿತ್ಯವನ್ನು ಪಡೆದವರು ಅಂದು ನಮ್ಮ ತಾತನವರು ಒಬ್ಬ ಪ್ರತಿಷ್ಠಿತ ನಿಷ್ಠಾವಂತ ಸಿವಿಲ್ ಕಂಟ್ರ್ಯಾಕ್ಟರ್ ಆಗಿದ್ದವರು, ಇವರು ಅಂದು ಕಟ್ಟಿದ ಆಣೆ ಕಟ್ಟುಗಳು, ಕೆರೆಗಳು, ಸರ್ಕಾರಿ ಕಟ್ಟಡಗಳು ಇಂದಿಗೂ ಅವರ ಮಾಡಿದ ಈ ಸಾಧನೆಗಳು ನಮ್ಮ ಕಣ್ಣು ಮುಂದಿವೆ, ಅಂದಿನ ಮೈಸೂರು ಕಾಂಗ್ರೇಸ್ ಸಂಸ್ಥಾಪಕರಲ್ಲಿ ನಮ್ಮ ತಾತನವರು ಮೊದಲಿಗರಾಗಿದ್ದರು. ಬ್ರಹ್ಮ ಸಮಾಜ ಸ್ಥಾಪಕರಾಗಿದ್ದ ರಾಜಾ ರಾಮ್ ಮೋಹನ್‌ರಾಯ್‌ರವರ ಸಿದ್ಧಾಂತಗಳಿಗೆ ತಮ್ಮನ್ನು ಸಮರ್ಥಿಸಿಕೊಂಡು ಬೆಳೆದವರು, ಬೆಂಗಳೂರು ನಗರದ ಅಂದು ಮುನ್ಸಿಪಲ್ ಕೌನ್ಸಿಲರ್ ಆಗಿ 1920 ರಿಂದ 1956ರವರೆಗೂ ನಿರಂತರ 36 ವರ್ಷಗಳ ಕಾಲ ಒಂದೇ ಒಂದು ಕಪ್ಪು ಚುಕ್ಕೆ ಇಲ್ಲದೆ ಸೇವೆ ಸಲ್ಲಿಸಿದ ಕೀರ್ತಿ ನಮ್ಮ ತಾತನವರದು, ನನ್ನ ತಾತನವರ ಚಿಂತನೆಗಳು, ಯೋಚನೆಗಳು, ಯೋಜನೆಗಳು ಯಾವಾಗಲು ಬಹಳ ಎತ್ತರದಲ್ಲಿರುತ್ತಿದ್ದವು, ನಮ್ಮ ತಾತನವರು ರಾಜಾ ರಾಮ್ ಮೋಹನ್‌ರಾಯ್ ಅವರ ಅಪ್ಪಟ ಅಭಿಮಾನಿಯಾಗಿದ್ದರಿಂದ ತಾವು ನಿರ್ಮಿಸಿದ ಕೆಂಗಲ್ ಹನುಮಂತಯ್ಯ ರಸ್ತೆಯ ರಾಜಾ ರಾಮ್‌ಮೋಹನ್ ರಾಯ್ ಬಡಾವಣೆಯಲ್ಲಿ ಒಂದು ರಾಜಾರಾಮ್ ಮೋಹನ್‌ರಾಯ ಸ್ಮಾರಕ ಇಂದು ಸಾರ್ವಜನಿಕ ಗ್ರಂಥಾಲಯದ ವ್ಯವಸ್ಥೆಗೆ ಕಾರಣರಾದವರು ನಮ್ಮ ತಾತನವರು.

ಹಾಗೇಯೇ ತನ್ನ ತಾತನವರು ಬೆಂಗಳೂರಿನ ಮೇಯರ್ ಸಹ ಆಗಿದ್ದವರು, ಜೊತೆಗೆ ಮೈಸೂರು ಪ್ರಜಾಪ್ರತಿ ನಿಧಿಯ ಸಭೆಯ ಸದಸ್ಯರಾಗಿದ್ದವರು, 30–40ರ ದಶಕದ್ಲಲಿ ನನ್ನ ತಾತನವರು ಬೆಂಗಳೂರಿನ ಬಹು ದೊಡ್ಡ ನಾಯಕರಾಗಿದ್ದು, ಸಮಾಜ ಸುಧಾರಣೆಗೆ ತಮ್ಮ ಜೀವನವನ್ನೇ ಮುಡುಪಾಗಿಟ್ಟವರು. ಹಾಗೇಯೇ 1943ರಲ್ಲೆ ಅವರು "ಠಕ್ಕರ್ ಬಾಪಾ ಹರಿಜನ್ ಗರ್ಲ್ಸ್ ಹಾಸ್ಟೆಲ್"ನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿದ್ದರು, ಈ ರೀತಿಯ ಅನೇಕರು ಮೆಚ್ಚುವ ಕೆಲಸವನ್ನು ನನ್ನ ತಾತನವರು ಮಾಡಿದ್ದು ಎಲ್ಲೋ ಒಂದು ಕಡೆ ನನ್ನ ತಾತನವರ ಆದರ್ಶ, ಅವರ ಸಿದ್ದಾಂತ ನನ್ನನ್ನು ಆವರಿಸಿಕೊಂಡಿದೆ ಎಂದು ಹೇಳಿದರೆ ಅದು ತಪ್ಪಾಗಲಾರದು, ಹೇಳಿಕೇಳಿ ನನ್ನ ತಾತನವರು ಮಹಾತ್ಮ ಗಾಂಧಿಜಿಯವರ ಬಹು ದೊಡ್ಡ ಅಭಿಮಾನಿಯಾಗಿದ್ದವರು, ಹೀಗಾಗಿಯೇ ಗಾಂಧೀಜಿಯವರು ಕೊಟ್ಟಂತಹ ರಚನಾತ್ಮಕ ಕಾರ್ಯಕ್ರಮಗಳ ಅನ್ವಯ ಅವರು ವಯಸ್ಕರ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸುತ್ತಾರೆ ನನ್ನ ತಾತನವರು ಯಾವುದೇ ಒಂದು ಕೆಲಸವನ್ನು ಕೈಗೆತ್ತಿಕೊಂಡರೆ ಆ ಕೆಲಸವು ಪರಿಪೂರ್ಣವಾಗಿ, ಜನರು ಮೆಚ್ಚುವಂತಹ ಮತ್ತು ಒಪ್ಪುವಂತಹ ಕೆಲಸವನ್ನು ಮಾಡುತ್ತಿದ್ದರು, ಶಿಸ್ತಿನ ಸಿಪಾಯಿ, ಅವರ ನಡೆಗೆ, ಊಟ, ತೊಡುಗೆ, ಅವರ ಮಾತು, ಅವರು ಸ್ನೇಹಿತರೊಂದಿಗೆ, ಮುಖಂಡರೊಂದಿಗೆ, ಬಂದು ಬಳಗದವರೊಂದಿಗೆ ನಡೆದುಕೊಳ್ಳುವ ರೀತಿ, ವ್ಯವಹರಿಸುವ ಪದ್ಧತಿ ಎಲ್ಲವು ಒಂದು ರೀತಿಯಲ್ಲಿ ಪಾರದರ್ಶಕವಾಗಿರುತ್ತಿತ್ತು, ದೇವರು ಎಲ್ಲವನ್ನು ಅಂದರೆ ಸಕಲ ರೀತಿಯ ಸವಲತ್ತನ್ನು ಕೊಟ್ಟಿದ್ದರು ಅವರು ಅಂದರೆ ನನ್ನ ತಾತನವರು ಮಾತ್ರ ಸರಳ ಜೀವನವನ್ನು ನಡೆಸುತ್ತಿದ್ದರು, ಮತ್ತು ನನ್ನ ತಾತನವರು, ಅಜ್ಜಿಯವರು ಕೂಡ ಎಂದೂ ವಿಲಾಸಿ ಜೀವನವನ್ನು ನಡೆಸಿದವರಲ್ಲ, ದೇವರು ಎಲ್ಲವನ್ನೂ ಕೊಟ್ಟಿದ್ದರು, ಅವರು ಮಾತ್ರ ಸರಳ ಜೀವನವನ್ನು ನಡೆಸುತ್ತಿದ್ದರು, ಹೀಗಾಗಿ ನನ್ನ ತಾತನವರ ಅಚಾರ, ವಿಚಾರ, ಸಂಪ್ರದಾಯ, ಆದರ್ಶಗಳು, ಸಮಾಜ ಸೇವೆಯ ಮೌಲ್ಯಗಳು, ಜೀವನದಲ್ಲಿ ಹೇಗೆ ಇರಬೇಕು, ಯಾರೊಂದಿಗೆ ಹೇಗೆ ವರ್ತಿಸಬೇಕು, ಯಾವ ರೀತಿ ಮಾತನಾಡಬೇಕು, ಹಣ, ಅಂತಸ್ತಿಗೆ, ಅಧಿಕಾರಕ್ಕೆ ಯಾವ ರೀತಿ ಗೌರವ ಕೊಡಬೇಕು ಹಿರಿಯರೊಂದಿಗೆ, ಕಿರಿಯರೊಂದಿಗೆ ಹೇಗೆ ನಡೆದುಕೊಳ್ಳಬೇಕು ಹೀಗೆ ಹತ್ತು ಹಲವು ರೀತಿಯಲ್ಲಿ ಇಂದು ನಾನು ಏನಾಗಿದ್ದೇನೋ ಅದಕ್ಕೆ ಕಾರಣ ನನ್ನ ತಾತ ಎಂದು ತುಂಬು ಹೃದಯದಿಂದ ಹೇಳಿಕೊಳ್ಳುತ್ತಾರೆ. ನಮ್ಮ ನಾಡೋಜ ವೂಡೇ ಪಿ. ಕೃಷ್ಣರವರು.

ನನ್ನ ತಾತನವರ ಜೀವನ ಶೈಲಿಯ ಅನೇಕ ಗುಣಗಳನ್ನು ನಾನು ಸಹ ಇಂದಿಗೂ ಪಾಲಿಸಿಕೊಂಡು ಬರುತ್ತಿದ್ದೇನೆ, ನಾನು ಕೂಡ ಚಿಕ್ಕವಯಸ್ಸಿನಿಂದಲೂ ಯಾವತ್ತು ಕೂಡದುಂದು ವೆಚ್ಚವನ್ನು ಬೇಕಾಬಿಟ್ಟಿಯಾಗಿ ಮಾಡಿದವನಲ್ಲ, ಇವತ್ತಿಗೂ ನಾನು ಒಂದೇ ಒಂದು ರೂಪಾಯಿಯನ್ನು ಸಾಲ ಮಾಡಿದವನಲ್ಲ, ಹಾಗೇಯೇ ಯಾರಿಗೂ ಹಣವನ್ನು ಸಾಲವನ್ನಾಗಿ ಕೊಟ್ಟಿಲ್ಲ, ಮುಂದೆಯು ಕೊಡುವುದಿಲ್ಲ, ಏಕೆಂದರೆ ಹಣದ ವ್ಯವಹಾರದಿಂದ ನಮ್ಮ ಅವರ ನಡುವೆ ಸಂಬಂಧಗಳು ಹಾಳಾಗುತ್ತವೆ, ಹೀಗಾಗಿ ಬೇರೆ ಬೇರೆ ರೀತಿಯಲ್ಲಿ ನಮ್ಮ ಕೈಲಾದ ಮಟ್ಟಿಗೆ ಉಪಯೋಗವಾಗುವ ಮತ್ತು ಅವಶ್ಯಕವಾಗಿ ಬೇಕಾಗಿರುವಂತಹ ಕೆಲಸಗಳಿಗೆ ಅಲ್ಪಸ್ವಲ್ಪ ಸಹಾಯ ಮಾಡೋಣ, ಆದರೆ ಹಣ ಕೇಳುವುದು, ಸಾಲಕೊಡುವುದು ಯಾವೊಬ್ಬರಿಗೂ ಒಳ್ಳೆಯದಲ್ಲ, ಇದು ನನ್ನ ವ್ಯಯಕ್ತಿಕ ಅಭಿಪ್ರಾಯ, ಹೀಗಾಗಿ ನನ್ನ ಜೀವನದಲ್ಲಿ, ನಮ್ಮ ಕುಟುಂಬದಲ್ಲಿ ನಮ್ಮ ತಾತನವರ ಪ್ರಭಾವ, ಮೌಲ್ಯಗಳು, ಆದರ್ಶಗಳು ಹೆಚ್ಚಿನ ಪಾತ್ರವಹಿಸುತ್ತವೆ, ಇಂದು ನಾನು ಏನಾಗಿದ್ದೇನೆಯೋ ಅದಕ್ಕೆ ಮುಖ್ಯ ಕಾರಣ ಒಂದು ಕಡೆ ನನ್ನ ತಾತನವರ ಆದರ್ಶಗಳು, ತತ್ವಗಳು, ಮೌಲ್ಯಗಳು, ಮತ್ತೊಂದು ಕಡೆ ನಮ್ಮ ಕೌಟುಂಬಿಕ ಹಿನ್ನಲೆ ಬಹಳ ಮಹತ್ತರವಾದದ್ದು. ಒಟ್ಟಾರೆ ನನ್ನ ತಾತನವರು ನನ್ನ ಮೇಲೆ ಪ್ರಬಲವಾದ ಮತ್ತು ಮಹತ್ತರವಾದ ಪ್ರಭಾವವನ್ನು ಬೀರಿರುತ್ತಾರೆ ಎಂದು ತುಂಬಾ ಸಂತೋಷದಿಂದ ಹೇಳಿ ಕೊಳ್ಳಲು ಇಚ್ಚಿಸುತ್ತೇನೆ, ಎಂದು ವೂಡೇ ಪಿ.ಕೃಷ್ಣರವರು ಹೇಳುತ್ತಾರೆ.

ಇಂತಹ ಕುಟುಂಬದಿಂದ ಬಂದ ವೂಡೇ ಪಿ.ಕೃಷ್ಣರವರು 2011 ರಲ್ಲಿ ಸ್ಥಾಪಿಸಲಾದ ಶೇಷಾದ್ರಿಪುರಂ ಅಕಾಡೆಮಿ ಫಾರ್ ಗ್ಲೋಬಲ್ ಎಕ್ಸಲೆನ್ಸ್ ಸಂಸ್ಥೆ ಉತ್ಸಾಹಭರಿತ ವಿದ್ಯಾರ್ಥಿಗಳ ಸುಧಾರಿತ ಕಲಿಕೆಯನ್ನು ಉತ್ತೇಜಿಸುವ ಮೂಲಕ ದೂರದ ಅಮೇರಿಕಾದ ಉತ್ತರ ಈಶಾನ್ಯ ರಾಜ್ಯ ವಿಶ್ವವಿದ್ಯಾಲಯ, ಬಕ್ಲಹೋವಮ್ ಕೇಂದ್ರೀಯ ವಿಶ್ವವಿದ್ಯಾಲಗಳೊಂದಿಗೆ ಮತ್ತು ಯೂನಿವರ್ಸಿಟಿ ಆಫ್ ವಿಸ್ಕೆ ಸ್ಟಿನ್ ರಿವರ್ ಫಾಲ್ಸ್, ಇಂಗ್ಲೆಂಡಿನ ಯೂನಿವರ್ಸಿಟಿ ಆಫ್ ಬೆಸ್ಟರ್‌ದಂತಹ ಅಂತ ರಾಷ್ಟ್ರೀಂಯ ಖ್ಯಾತಿಂಯ ವಿಶ್ವವಿದ್ಯಾಲಯಗಳೊಂದಿಗೆ ಸಂಪರ್ಕವನ್ನು ಏರ್ಪಡಿಸಿದೆ, ಉನ್ನತ ವ್ಯಾಸಂಗ ಪಡೆಯಲು ಅಮೇರಿಕಾ ಮತ್ತು ಯುಕೆ ವಿಶ್ವವಿದ್ಯಾಲಯಗಳಲ್ಲಿ ಅನೇಕ ವಿದ್ಯಾರ್ಥಿಗಳು ಸೇರಿಸಿಕೊಳ್ಳುತ್ತಿರುವುದರಿಂದ ಕೃಷ್ಣರವರಿಗೆ ಶಿಕ್ಷಣ ಕ್ಷೇತ್ರದ ಬಗ್ಗೆ ಯಾವ ರೀತಿ ಆಸಕ್ತಿ ಇದೆ ಎಂಬುದನ್ನು ತೋರಿಸುತ್ತದೆ. ಹೀಗಾಗಿ ಕೃಷ್ಣರವರ ಪರಿಶ್ರಮ ಶ್ಲಾಘನೀಯವಾದರು ಮತ್ತು ಅಪರೂಪವಾದದು.

ಈಗಾಗಲೇ ವಿವಿಧ ದೇಶಗಳಿಂದ ಭಾರತಕ್ಕೆ ಬಂದು ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜುಗಳಲ್ಲಿ ಸುಮಾರು 150 ಕ್ಕೂ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿರುವುದು, ಅಂತರಾಷ್ಟ್ರೀಯ ಮಟ್ಟದಲ್ಲಿ ತನ್ನ ಸೇವೆಯನ್ನು ಪ್ರಶಂಸುತ್ತಿರುವುದು ಸಂತೋಷದ ವಿಚಾರ ಹಾಗೇಯೇ ಡಾ.ಕೃಷ್ಣರವರ ಸೇವೆಗೆ ರಾಷ್ಟ್ರ ಪ್ರಶಸ್ತಿಗಳ ಸಾಲಿನಲ್ಲಿ ಶೇಷಾದ್ರಿಪುರಂ ಕಾಲೇಜಿಗೆ ಇಂದಿರಾಗಾಂಧಿ ರಾಷ್ಟ್ರ ಪ್ರಶಸ್ತಿ ದೊರೆತಿರುವುದು ನಿಜಕ್ಕೂ ಕೃಷ್ಣರವರ ಸಾಧನೆಗೆ ನಾವೆಲ್ಲರು ತುಂಬು ಹೃದಯದಿಂದ ಅಭಿನಂದಿಸಲೇಬೇಕು.

ಇಷ್ಟೇಲ್ಲ ಸಾಧನೆಯನ್ನು ಮಾಡಿರುವ ವೂಡೇ ಪಿ. ಕೃಷ್ಣರವರು ಎಷ್ಟು ಸರಳತೆ ಎಂಬುದಕ್ಕೆ ಇತ್ತೀಚಿಗೆ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಒಂದು ಅಪರೂಪದ ಸಮಾರಂಭ ನಡೆಯಿತು. ಆ ಸಮಾರಂಭ ಹೆಸರಾಂತ ಜನಪದ ಗಾಯಕ ಬಾನೊಂದೂರು ಕೆಂಪಯ್ಯರವರ ಕುರಿತಾದ "ಬಾನಂದದ ಕಿನ್ನರಿ" ಎಂಬ ಅಭಿನಂದನಾ ಗ್ರಂಥ ಬಿಡುಗಡೆಯ ಸಮಾರಂಭವು ಏರ್ಪಡಿಸಿತು, ಅಂದಿನ ಸಭೆಯ ಅಧ್ಯಕ್ಷತೆಯನ್ನು ವೂಡೇ ಪಿ.ಕೃಷ್ಣರವರು ವಹಿಸಿದ್ದರು. ಸಭೆಗೆ ಖ್ಯಾತ ಸಾಹಿತಿಗಳು, ಪತ್ರಕರ್ತರು, ವಿಮರ್ಶಕರು ಹೀಗೇ ಎಲ್ಲ ಸ್ಥರದ ಖ್ಯಾತ ನಾಯಕರು ಇದ್ದದು, ನಾನು ಸಹ ಕೊನೆಯ ಸಾಲಿನಲ್ಲಿ ಯಾರಿಗೂ ಕಾಣದ ರೀತಿಯಲ್ಲಿ ಒಂದು ಕಡೆ ಕುಳಿತಿದ್ದೆ, ಏಕೆಂದರೆ ಸಬಾಂಗಣ ಸಂಪೂರ್ಣವಾಗಿ ತುಂಬಿ ಹೋಗಿತ್ತು, ಜಾಗ ಸಿಗಲಿಲ್ಲ, ಸಮಾರಂಭದ ಕೊನೆಯಲ್ಲಿ ಅವರು ಅಧ್ಯಕ್ಷರ ಭಾಷಣ ಮಾಡುವಾಗ ವಾಡಿಕೆಯಂತೆ ಅಂದಿನ ಸಭೆಗೆ ಬಂದಿದವರ ಹೆಸರುಗಳನ್ನು ಹೇಳುತ್ತಿರುವಾಗ ಹೂವಿನಿಂದ ನಾರು ಸ್ವರ್ಗಕ್ಕೆ ಹೋದಂತೆ ನನ್ನ ಹೆಸರನ್ನು "ಅಡ್ವೋಕೇಟ್ ಗಂಗಾಧರ್‌ರವರು ಈ ಸಭೆಗೆ ಬಂದಿದ್ದಾರೆ ಎಂದು ಹೇಳಿದಾಗ ಇವರ ಕಣ್ಣಿನ ದೃಷ್ಟಿ, ಇವರು ಯಾವಾಗ ಅಷ್ಟು ದೂರದಿಂದ ನನ್ನನ್ನು ನೋಡಿದರೋ ಖಂಡಿತವಾಗಿಯೂ ನನಗೆ ಗೊತ್ತಿಲ್ಲ, ಆದರೂ ಅಂದಿನ ಸಭೆಯಲ್ಲಿ ನನ್ನ ಹೆಸರನ್ನು ಹೇಳಿದ್ದು ಸಭೆಯಲ್ಲಿ ಭಾಗವಹಿಸಿದ ಜನರಿಗೆ ಗೊತ್ತಾಗಿದ್ದು ನಿಜಕ್ಕೂ ನಾನೇ ಧನ್ಯ. ಇಂತಹ ವೂಡೇ ಪಿಯವರ ಸರಳತೆ, ಅವರ ಪ್ರಾಮಾಣಿಕತನ ಪ್ರತಿಯೊಬ್ಬರಿಗೂ ಮಾದರಿಯಾಗಬೇಕು, ಇದರ ಅರ್ಥ ವೂಡೇ ಪಿ.ಕೃಷ್ಣರವರು ಹೇಗೆ ಅವರ ತಾತ ನವರ ಆದರ್ಶಗಳನ್ನು ಜೀವನದ ಮೌಲ್ಯಗಳನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡಿರುತ್ತಾರೋ ಹಾಗೇಯೇ ನಾವು ಕೂಡ ವೂಡೇ ಪಿ.ಕೃಷ್ಣರವರ ಆದರ್ಶ, ಅವರ ಆಚಾರ ವಿಚಾರಗಳನ್ನು ಅಳವಡಿಸಿಕೊಂಡು ಮುಂದೆ ಹೋಗೋಣ.

ಎಷ್ಟೇ ಆಗಲಿ ಮೆಚ್ಚಿನ, ನೆಚ್ಚಿನ, ತಾತನ ಮೊಮ್ಮಗ ಅಲ್ಲವೆ. ನಮ್ಮ ವೂಡೇ ಪಿ.ಕೃಷ್ಣರವರು

ಮುಂದುವರೆಯುವುದು

– ಸಂ

ಸಂಯುಕ್ತ ಕರ್ನಾಟಕ
ಬುಧವಾರ 22 ನವೆಂಬರ್ 2023
ಬೆಂಗಳೂರು | BENGALURU



'ಹೆಸರಾಯಿತು ಕರ್ನಾಟಕ-50' ಸಂಭ್ರಮ ಹಾಗೂ ರಾಜ್ಯೋತ್ಸವ ಕಾರ್ಯಕ್ರಮವನ್ನು ಹಿರಿಯ ಸಾಹಿತಿ ಬರಗೂರು ರಾಮಚಂದ್ರಪ್ಪ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

ಕನ್ನಡಪ್ರಭ ಬುಧವಾರ 22.11.2023

# ಕನ್ನಡಕ್ಕೆ ಸವಾಲುಗಳು ಇವೆ, ಸಾವಿಲ್ಲ: ಬರಗೂರು

## ಆಳಲು ಬಂದವರನ್ನು ಅರಗಿಸಿಕೊಳ್ಳುವ ಶಕ್ತಿ ಕನ್ನಡಕ್ಕಿದೆ | ಶೇಷಾದ್ರಿಪುರಂ ಕಾಲೇಜಲ್ಲಿ 'ಹೆಸರಾಯಿತು ಕರ್ನಾಟಕ-50' ಕಾರ್ಯಕ್ರಮ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಜನಭಾಷೆಯಾದ ಕನ್ನಡ ಆಳಲು ಬಂದವರನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಹೊಂದಿರುವುದರಿಂದ ಸವಾಲುಗಳಿವೆ. ಆದರೆ ಕನ್ನಡಕ್ಕೆ ಸಾವಿಲ್ಲ ಎಂದು ಸಾಹಿತಿ ಡಾ| ಬರಗೂರು ರಾಮಚಂದ್ರ ಅಭಿಪ್ರಾಯಪಟ್ಟರು.

ಮಂಗಳವಾರ ಶೇಷಾದ್ರಿಪುರಂ ಕಾಲೇಜು ಕನ್ನಡ ವಿಭಾಗದಕನ್ನಡಸಂಘಆಯೋಜಿಸಿದ್ದ 'ಹೆಸರಾಯಿತು ಕರ್ನಾಟಕ-50' ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿ ಕನ್ನಡ ಬದುಕಾಗಬೇಕು, ಬದುಕು ಕನ್ನಡವಾಗಬೇಕು. ಆಗ ಮಾತ್ರ ಕನ್ನಡಿಗರು ಕರ್ನಾಟಕದ ನೆಲದಲ್ಲಿ ಸಾರ್ವಭೌಮತ್ವ ಹಿಡಿದಿಟ್ಟುಕೊಳ್ಳಲು ಸಾಧ್ಯ ಎಂದರು.

ಎಲ್ಲ ಜಾತಿ ಧರ್ಮವನ್ನು ಮೀರಿದ ಭಾಷೆ ಕನ್ನಡ. 1973 ನವೆಂಬರ್ 1 ಕರ್ನಾಟಕದಲ್ಲಿ ಪ್ರಜಾಸತ್ತಾತ್ಮಕ ಮೌಲ್ಯಗಳಿಗೆ ಮನ್ನಣೆ ಸಿಕ್ಕ ದಿನ. ಪ್ರಪಂಚದಲ್ಲಿ 6703 ಭಾಷೆಗಳಿವೆ. ಕೇವಲ ಕೆಲವೇ ಭಾಷೆಗಳನ್ನು ಮಾತ್ರ ಜನರು ಮಾತನಾಡುತ್ತಿದ್ದಾರೆ. ಜನರ ಮುಖಾಂತರ ಭಾಷೆಯನ್ನು ನೋಡಬೇಕು. ಜನರ ಬದುಕಿಗೆ ಭದ್ರತೆ ಕೊಡಲು ಆದ್ಯತೆ ಕೊಡಬೇಕು. ಕನ್ನಡವನ್ನು ಜನರ ಬದುಕನ್ನು ಹಸನು ಮಾಡುವ ಉದ್ಯೋಗದ ಮೂಲಕ ಸದ್ಬಳಕೆ ಮಾಡಿಕೊಳ್ಳಬೇಕು ಎಂದು ಹೇಳಿದರು.



ನಗರದ ಶೇಷಾದ್ರಿಪುಂ ಕಾಲೇಜು ಕನ್ನಡ ವಿಭಾಗದ ಕನ್ನಡ ಸಂಘ ಆಯೋಜಿಸಿದ್ದ 'ಹೆಸರಾಯಿತು ಕರ್ನಾಟಕ-50' ಕಾರ್ಯಕ್ರಮದಲ್ಲಿ ಡಾ| ಬರಗೂರು ರಾಮಚಂದ್ರಪ್ಪ ಭುವನೇಶ್ವರಿ ದೇವಿಗೆ ಪುಷ್ಪ ನಮನ ಸಲ್ಲಿಸಿದರು.

- ಜನರ ಮುಖಾಂತರ ಭಾಷೆ ನೋಡಬೇಕು, ಜನರ ಬದುಕಿಗೆ ಭದ್ರತೆಗೆ ಆದ್ಯತೆ ನೀಡಬೇಕು
- ಕನ್ನಡವನ್ನು ಜನರ ಬದುಕನ್ನು ಹಸನು ಮಾಡುವ ಉದ್ಯೋಗದ ಮೂಲಕ ಸದ್ಬಳಕೆ ಮಾಡಿಕೊಳ್ಳಲು ಸಲಹೆ
- ಕಲಿಕೆಗೆ ಎಲ್ಲಾಭಾಷೆ ಇರಲಿ, ಆದರೆ ರಾಜ್ಯದಲ್ಲಿ ಕನ್ನಡಕ್ಕೆ ಅಗ್ರ ಸ್ಥಾನವಿರಲಿ

ಕರ್ನಾಟಕದಲ್ಲಿ ಕನ್ನಡಕ್ಕೆ ಅಗ್ರಸ್ಥಾನ ಬೇಕು. ಕಲಿಕೆಗೆ ಎಲ್ಲ ಭಾಷೆ ಇರಲಿ. ಆದರೆ, ಹೇರಿಕೆ ಬೇಡ. ಕನ್ನಡವನ್ನು ಅನ್ನದ ಭಾಷೆಯನ್ನಾಗಿ ಮಾಡಿಕೊಳ್ಳಬೇಕು. ಕನ್ನಡಕ್ಕೆ 2 ಸಾವಿರ ವರ್ಷಗಳ ಇತಿಹಾಸವಿದೆ. ಶಾಸ್ತ್ರೀಯ ಸ್ಥಾನಮಾನ ಸಿಕ್ಕರೂ ಅಭಿವೃದ್ಧಿಗೆ ಅನುದಾನವೂ ಬೇಕಿದ್ದು ಕೇಂದ್ರ ಸರ್ಕಾರ ಈ ಕಡೆ ಹೆಚ್ಚು ಗಮನ ಹರಿಸಬೇಕು ಎಂದು ಸಲಹೆ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ| ವೂಡೇ ಪಿ.ಕೃಷ್ಣ ಮಾತನಾಡಿ, ರಾಜ್ಯೋತ್ಸವ ಆಚರಣೆ ಗದ್ದಲವಾಗಬಾರದು ಸಂಭ್ರಮವಾಗಬೇಕು. ಸಮಗ್ರ ಕರ್ನಾಟಕದಲ್ಲಿ ಕನ್ನಡ ಜನರ ಜೀವಂತ ಭಾಷೆಯಾಗಬೇಕು. ಕನ್ನಡ ಸಾಕ್ಷಿ ಪ್ರಜ್ಞೆಯಾಗಬೇಕು ಎಂದು ತಿಳಿಸಿದರು.

ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಎಂ.ಎಸ್. ನಟರಾಜ್, ಪ್ರಾಂಶುಪಾಲ ಡಾ| ಬಿ.ಜಿ.ಭಾಸ್ಕರ, ಕನ್ನಡ ವಿಭಾಗದ ಮುಖ್ಯಸ್ಥೆ ಎಚ್.ಎಂ.ಗೀತಾ, ಸಂಚಾಲಕಿ ಎಂ.ಎನ್.ಅರ್ಚನಾ ತೇಜಸ್ವಿ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ ಭಾನುವಾರ,19 ನವೆಂಬರ್ 2023

## ಸಾಹಿತ್ಯ ಸಂಗಮ ಟ್ರಸ್ಟ್‌ನ ದಶಮಾನೋತ್ಸವ ಸಮಾರಂಭದಲ್ಲಿ ನ್ಯಾ. ಗೋಪಾಲಗೌಡ ಆಗ್ರಹ

# ಎಚ್.ಡಿ.ದೇವೇಗೌಡರಿಗೆ ಭಾರತರತ್ನ ಪ್ರಶಸ್ತಿ ನೀಡಲಿ

■ **ವಿಕ ಸುದ್ದಿಲೋಕ** ಬೆಂಗಳೂರು

ಮಾಜಿ ಪ್ರಧಾನಿ ಎಚ್.ಡಿ.ದೇವೇಗೌಡ ಅವರಿಗೆ ಭಾರತ ರತ್ನ ಪ್ರಶಸ್ತಿ ನೀಡಬೇಕು ಎಂದು ಸುಪ್ರೀಂಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಗೋಪಾಲಗೌಡ ಒತ್ತಾಯಿಸಿದರು.

ನಗರದ ವಿವಿಪುರಂನಲ್ಲಿರುವ ಕುವೆಂಪು ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ ಸಾಹಿತ್ಯ ಸಂಗಮ ಟ್ರಸ್ಟ್‌ನ ದಶಮಾನೋತ್ಸವ ಮತ್ತು ಒಕ್ಕಲಿಗರ ವಾಯ್ಸ್ ಪತ್ರಿಕೆಯ 4ನೇ ವರ್ಷದ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರು ಮಾತನಾಡಿದರು.

''ಎಚ್.ಡಿ.ದೇವೇಗೌಡ ಅವರು ತಮ್ಮ ಸುದೀರ್ಘ ರಾಜಕಾರಣದಲ್ಲಿ ಸಾಕಷ್ಟು ಅಭಿವೃದ್ಧಿ ಕೆಲಸ ಮಾಡಿದ್ದಾರೆ. ಇಳಿವಯಸ್ಸಿನಲ್ಲಿ ಅಧ್ಯಯನಶೀಲ ಗುಣವನ್ನು ಹಾಗೇ ಕಾಯ್ದುಕೊಂಡಿರುವ ಅವರು, ಯಾವುದೇ ವಿಷಯದ ಬಗ್ಗೆ ಪರಿಪೂರ್ಣವಾಗಿ ತಿಳಿದು, ತಮ್ಮದೇ ಆದ ಶೈಲಿಯಲ್ಲಿ ಸೂಕ್ಷ್ಮವಾಗಿ ತಿಳಿಸುತ್ತಾರೆ. ಅವರು ಪ್ರಧಾನಿಯಂತಹ ಹುದ್ದೆಯನ್ನು ಅಲಂಕರಿಸಿದ್ದು ನಾಡಿನ ಹೆಮ್ಮೆಯ ವಿಷಯ. ಅಂತಹವರಿಗೆ ಏಕೆ ಭಾರತರತ್ನ ನೀಡಬಾರದು?,'' ಎಂದು ಪ್ರಶ್ನಿಸಿದ ಅವರು, ''ಈ ಕುರಿತು ರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿ ಅವರಿಗೆ ಪತ್ರ ಬರೆಯುತ್ತೇನೆ,'' ಎಂದು ತಿಳಿಸಿದರು.

''ನನ್ನ ಪ್ರಕಾರ ಒಕ್ಕಲುತನ ಮಾಡುವವರೆಲ್ಲರೂ ಒಕ್ಕಲಿಗರೇ. ಈ ಮನೋಭಾವನೆಯಿಂದ ಎಲ್ಲರನ್ನೂ ಜತೆಗೆ ತೆಗೆದುಕೊಂಡು ಹೋಗುವ ಕೆಲಸವನ್ನು ಸಮುದಾಯ ಮಾಡಬೇಕಿದೆ. ಒಕ್ಕಲಿಗ ಸಂಘದ ನಿರ್ದೇಶಕರು ಸರಿಯಾಗಿ ಕೆಲಸ ಮಾಡಬೇಕು. ಮುಂದಿನ ಚುನಾವಣೆಯಲ್ಲಿ ಹಣ ಮತ್ತು ಮತ್ಯಾವುದರ ಬಲದಿಂದಲೋ ಚುನಾವಣೆಯಲ್ಲಿ ಗೆದ್ದು ಬರುತ್ತೇವೆ ಎಂದು ಭಾವಿಸಿದ್ದರೆ ಅದು ಹಗಲುಕನಸು,'' ಎಂದರು.

ಜಲಸಾರಿಗೆ ಆಯುಕ್ತ ಜಯರಾಮ್ ರಾಯ್‌ಪುರ ಮಾತನಾಡಿ, ''ಒಕ್ಕಲಿಗರಲ್ಲಿ ಸಾಕಷ್ಟು ಮಂದಿ ಶ್ರೀಮಂತರಿದ್ದಾರೆ. ಎಲ್ಲರೂ ಸೇರಿ ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ಪ್ರೋತ್ಸಾಹಿಸಲು ಮುಂದಾಗಬೇಕಿದೆ. ಇದಕ್ಕಾಗಿ ಒಂದು ಸಾಂಸ್ಕೃತಿಕ ಟ್ರಸ್ಟ್ ಸ್ಥಾಪಿಸಿ, 100 ಕೋಟಿ ರೂ. ಸಾಂಸ್ಕೃತಿಕ ನಿಧಿ ಇಟ್ಟು, ಅದರಿಂದ ಬರುವ ಬಡ್ಡಿಯಲ್ಲಿ ಕಲಾವಿದರು, ಸಾಹಿತಿಗಳನ್ನು ಪ್ರೋತ್ಸಾಹಿಸುವ ಕೆಲಸ ಮಾಡಬೇಕಿದೆ. ಈ ಕೆಲಸ ಜಾತ್ಯತೀತವಾಗಿರಬೇಕು,'' ಎಂದು ಅಭಿಪ್ರಾಯಪಟ್ಟರು.

**ಕೃತಿಗಳ ಬಿಡುಗಡೆ:** 'ಮಣ್ಣಿನ ಮಕ್ಕಳ ಬದುಕಿನ ಹಣತೆ' ಸಂಪುಟ-4 (ಕನ್ನಡ-ಇಂಗ್ಲಿಷ್), 'ಮಣ್ಣಿನ ಹಣತೆ' ಸಂಪುಟ-3, 'ಪ್ರತಿಬಿಂಬ' ವಿಶೇಷಾಂಕ, ಮಾಲಿನಿ ಗೋಯಲ್, ಪ್ರಶಾಂತ್ ಪ್ರಕಾಶ್ ಅವರ 'ಅನ್‌ಬಾಕ್ಸಿಂಗ್ ಬೆಂಗಳೂರು' (ಇಂಗ್ಲಿಷ್), ಮೇಜರ್ ಸತೀಶ್ ಮತ್ತು ಪಾವನಿ ಅವರ 'ಕರಿಯರ್ ಇನ್ ದಿ ಇಂಡಿಯನ್ ಡಿಫೆನ್ಸ್ ಫೋರ್ಸಸ್-ಎ ಕಂಪ್ಲೀಟ್ ಗೈಡ್' (ಇಂಗ್ಲಿಷ್) ಕೃತಿಗಳನ್ನು ಬಿಡುಗಡೆ ಗೊಳಿಸಲಾಯಿತು.

**ಸಾಧಕರಿಗೆ ಗೌರವ ಸಮರ್ಪಣೆ:** ಡಾ.ಆರತಿ ಕೃಷ್ಣ, ಡಾ.ಎಚ್.ಕೆ. ಮರಿಯಪ್ಪ, ಅಮರನಾಥ್‌ಗೌಡ, ಹಳೇಕೋಟೆ ಡಾ.ಎನ್.ವಿಶ್ವಾಮಿತ್ರ, ಕೀಲಾರ ಬಾಬು, ಪ್ರಶಾಂತ್ ಪ್ರಕಾಶ್, ಮೇಜರ್ ಸತೀಶ್, ಜಯರಾಮ್ ರಾಯ್‌ಪುರ, ಡಾ.ಎಂ.ಎಸ್.ಮೂರ್ತಿ, ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರನ್ನು ಕಾರ್ಯಕ್ರಮದಲ್ಲಿ ಸನ್ಮಾನಿಸಲಾಯಿತು.

ಆದಿಚುಂಚನಗಿರಿ ಕ್ಷೇತ್ರದ ನಿರ್ಮಲಾನಂದನಾಥ ಸ್ವಾಮೀಜಿ, ಶಾಸಕರಾದ ಎಂ.ಕೃಷ್ಣಪ್ಪ, ಪುಟ್ಟಸ್ವಾಮಿಗೌಡ, ಡಿ.ಹನುಮಂತಯ್ಯ ಉಪಸ್ಥಿತರಿದ್ದರು.



ಸಾಹಿತ್ಯ ಸಂಗಮ ಟ್ರಸ್ಟ್‌ನ ದಶಮಾನೋತ್ಸವ ಮತ್ತು ಒಕ್ಕಲಿಗರ ವಾಯ್ಸ್ ಪತ್ರಿಕೆಯ 4ನೇ ವರ್ಷದ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಗಣ್ಯರು.

### ಸಾಂಸ್ಕೃತಿಕ ನಿಧಿ ಸ್ಥಾಪಿಸುವ ಕೆಲಸ ಮಾಡಲಾಗುವುದು

ಕಾರ್ಯಕ್ರಮದ ಕೊನೆಯಲ್ಲಿ ಮಾತನಾಡಿದ ನಿರ್ಮಲಾನಂದನಾಥ ಸ್ವಾಮೀಜಿ, ''ಜಯರಾಮ್ ರಾಯ್‌ಪುರ ಅವರು ಪ್ರಸ್ತಾಪಿಸಿದ ವಿಷಯಕ್ಕೆ ಕಾರ್ಯಕ್ರಮದಲ್ಲಿ ನೆರೆದ ಎಲ್ಲರಿಂದಲೂ ಸಕರಾತ್ಮಕ ಅಭಿಪ್ರಾಯ ದೊರೆತಿದೆ. ಹಾಗಾಗಿ, ಸಮುದಾಯದವರ ನೆರವಿನೊಂದಿಗೆ ಈ ಕೆಲಸ ಮಾಡಲಾಗುವುದು,'' ಎಂದರು. ''ದೇಶ ವಿದೇಶಗಳಲ್ಲಿಯೂ ಸಮುದಾಯದವರು ನೆಲೆಸಿದ್ದಾರೆ. ಅಲ್ಲಿರುವ ಮಕ್ಕಳಿಗೆ ನಾಡು ಮತ್ತು ಸಮುದಾಯದ ಬಗ್ಗೆ ತಿಳಿಸುವ ಉದ್ದೇಶದಿಂದ ಶೀಘ್ರದಲ್ಲಿ ಒಕ್ಕಲಿಗರ ವಾಯ್ಸ್ ಇಂಗ್ಲಿಷ್ ಡಿಜಿಟಲ್ ಪತ್ರಿಕೆ ತರಲಾಗುವುದು,'' ಎಂದರು.

ವಿಶ್ವವಾಣಿ 08.11.2023 ಬುಧವಾರ

# ಸಮಸ್ಥಿತಿಯ ಮನಸ್ಥಿತಿ, ತಾಳ್ಮೆಯ ಗುಣ ನಮ್ಮಲ್ಲಿರಲಿ

ಬೆಂಗಳೂರು: ಆರಕ್ಕೇರದ ಮೂರಕ್ಕಿಳಿಯದ ಸ್ಥಿತಪ್ರಜ್ಞತೆ, ಸಮಸ್ಥಿತಿಯ ಮನಸ್ಸು ಪ್ರಸ್ತುತವಾಗಿ ನಮಗೆ ಅಗತ್ಯವಿರುವ ಅಂಶ. ನಮ್ಮ ಕಲೆ, ಸಂಸ್ಕೃತಿ ಇದನ್ನು ನಮಗೆ ಸಮರ್ಥವಾಗಿ ತಿಳಿಸಿಕೊಡುತ್ತದೆ. ಆದರೆ ಅದನ್ನು ಅನುಸರಿಸುವ ತಾಳ್ಮೆಯ ಗುಣ ನಮ್ಮಲ್ಲಿರಬೇಕು ಎಂದು ನಾಡೋಜ ವೂಡೆ ಪಿ.ಕೃಷ್ಣ ಅಭಿಪ್ರಾಯಪಟ್ಟರು.



50ನೇ ಕನ್ನಡ ರಾಜ್ಯೋತ್ಸವದ ಪ್ರಯುಕ್ತ ಬ್ರಹ್ಮಕುಮಾರಿ ಸೇವಾಶ್ರಮದ ಕಲಾ ಮತ್ತು ಸಂಸ್ಕೃತಿ ವಿಭಾಗದ ವತಿಯಿಂದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಸಭಾಂಗಣದಲ್ಲಿ ಆಯೋಜಿಸಿದ್ದ 'ಕಲಾಕಾರ-ಸ್ವರ್ಣಿಮ ಭಾರತದ ರಚನಾಕಾರ' ಸಾಂಸ್ಕೃತಿಕ ಉತ್ಸವ ಉದ್ಘಾಟಿಸಿ ಮಾತನಾಡಿ, ಬ್ರಹ್ಮಕುಮಾರಿ ಈಶ್ವರೀಯ ವಿಶ್ವ ವಿದ್ಯಾಲಯ ಆಧ್ಯಾತ್ಮಿಕ ಕ್ಷೇತ್ರದ ಜತೆಗೆ ನಮ್ಮ ಮಣ್ಣಿನ ಕಲೆ, ಸಂಸ್ಕೃತಿ, ಪರಂಪರೆಯ ಉಳಿವಿಗೆ ಪೂರಕವಾದ ಇಂತಹ ಕಾರ್ಯಕ್ರಮ ಆಯೋಜಿಸಿರುವುದು ಪ್ರಶಂಸನೀಯ ಎಂದರು. ನಾಡಿನ ಸಂಸ್ಕೃತಿಯ ಕಲಾ ಪ್ರಕಾರಗಳಾದ ಯಕ್ಷಗಾನ, ಭರತನಾಟ್ಯ, ಕಥಕ್ ನೃತ್ಯ, ಲಾವಣಿ, ತತ್ವ ಪದಗಳು, ಚಿತ್ರಕಲೆ, ಭಕ್ತಿ ಗೀತೆಗಳ ಗಾಯನ, ಹಾಸ್ಯ ಕಾರ್ಯಕ್ರಮ ಸೇರಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ ಪ್ರದರ್ಶಿಸಲಾಯಿತು.

## ‘ಸ್ಪರ್ಧಾವಾಣಿ’ ಸಂಚಿಕೆ ಬಿಡುಗಡೆ ಕಾರ್ಯಕ್ರಮದಲ್ಲಿ ಶಂಕರ ಬಿದರಿ ಅಭಿಮತ

# ಗಡಿದಾಟಿದರಷ್ಟೇ ಕನ್ನಡಿಗರಿಗೆ ಯಶಸ್ಸು

ಪ್ರಜಾವಾಣಿ ವಾರ್ತೆ

ಬೆಂಗಳೂರು: ಕೇಂದ್ರ ಸೇವೆಗಳಲ್ಲಿ ಹಲವು ಉದ್ಯೋಗಾವಕಾಶಗಳಿದ್ದರೂ, ಹೆಚ್ಚಿನ ಸಂಖ್ಯೆಯ ಕನ್ನಡಿಗರು ರಾಜ್ಯದ ಗಡಿ ದಾಟದೇ ಅವಕಾಶಗಳನ್ನು ಕಳೆದುಕೊಳ್ಳುತ್ತಿದ್ದಾರೆ ಎಂದು ನಿವೃತ್ತ ಐಪಿಎಸ್ ಅಧಿಕಾರಿ ಶಂಕರ್ ಬಿದರಿ ಗುರುವಾರ ಹೇಳಿದರು.

ಸರ್ಕಾರಿ ನೌಕರರ ಭವನದಲ್ಲಿ ‘ಪ್ರಜಾವಾಣಿ’ ಪತ್ರಿಕೆ ಸ್ಪರ್ಧಾ ಪರೀಕ್ಷೆಯ ಆಕಾಂಕ್ಷಿಗಳಿಗಾಗಿ ರೂಪಿಸಿದ ‘ಸ್ಪರ್ಧಾವಾಣಿ’ ಮಾಸಿಕ ಸಂಚಿಕೆ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಕೇಂದ್ರ ಸರ್ಕಾರದಲ್ಲಿ 1.80 ಕೋಟಿ ಹುದ್ದೆಗಳಿವೆ. ಭೌಗೋಳಿಕ ವಿಸ್ತೀರ್ಣ, ಜನಸಂಖ್ಯೆ ಆಧಾರದಲ್ಲಿ ರಾಜ್ಯದ 15 ಲಕ್ಷ ಜನರಿಗೆ ಕೆಲಸ ದೊರಕಬೇಕಿತ್ತು. ಕೇಂದ್ರ ಲೋಕಸೇವಾ ಆಯೋಗ, ಸಿಬ್ಬಂದಿ ನೇಮಕಾತಿ ಆಯೋಗ ನಡೆಸುವ ಪ್ರತಿ ವರ್ಷದ ನೇಮಕಾತಿಯಲ್ಲಿ ಕನಿಷ್ಠ ಶೇ 5.5ರಷ್ಟು ಹುದ್ದೆಗಳು ಲಭಿಸಬೇಕು. ಈಗ ಇರುವುದು ಶೇ 1ಕ್ಕಿಂತ ಕಡಿಮೆ. ನಮಗಿಂತ ಕಡಿಮೆ ವಿಸ್ತೀರ್ಣ, ಜನಸಂಖ್ಯೆ ಹೊಂದಿರುವ ಕೇರಳ ಶೇ 12ರಷ್ಟು ಪಾಲು ಪಡೆಯುತ್ತಿದೆ ಎಂದರು.

ರಾಜ್ಯದ ಅಭ್ಯರ್ಥಿಗಳು ಗಡಿ ದಾಟಲು ಮನಸ್ಸು ಮಾಡದೆ ರಾಜ್ಯ ಸರ್ಕಾರದ ಹುದ್ದೆಗಳ ಮೇಲೆ ಅವಲಂಬಿತರಾಗಿದ್ದಾರೆ. ಇಲ್ಲಿನ ಬಹುತೇಕ ನೇಮಕಾತಿಗಳು 5ರಿಂದ 10 ವರ್ಷಗಳಷ್ಟು ವಿಳಂಬವಾಗುತ್ತಿವೆ. ಯುವಕರಿದ್ದಾಗ ಅರ್ಜಿ ಸಲ್ಲಿದರೆ, ಪ್ರಕ್ರಿಯೆ ಪೂರ್ಣಗೊಂಡು ನೇಮಕಾತಿ ಆದೇಶ ನೀಡುವಷ್ಟರಲ್ಲಿ ಮಧ್ಯವಯಸ್ಸು ದಾಟಿರುತ್ತದೆ. ಕೆಲಸದ ಆಸಕ್ತಿ, ಸೇವಾ ಮನೋಭಾವ ಹೊರಟು ಹೋಗಿರುತ್ತದೆ. ಸರ್ಕಾರಕ್ಕೂ ಪ್ರಯೋಜನವಾಗುವುದಿಲ್ಲ. ಕೇಂದ್ರ ಸೇವೆಗಳಿಗೆ ಪರೀಕ್ಷೆ ಬರೆದರೆ ಒಂದು ವರ್ಷದ ಒಳಗೆ ನೇಮಕಾತಿ ಆದೇಶ ಪಡೆಯಬಹುದು ಎಂದು ಕಿವಿಮಾತು ಹೇಳಿದರು.

‘ಸ್ಪರ್ಧಾವಾಣಿ’ ಬಿಡುಗಡೆ ಮಾಡಿದ ಉನ್ನತ ಶಿಕ್ಷಣ ಸಚಿವ ಡಾ.ಎಂ.ಸಿ.ಸುಧಾಕರ್, ಕೆಲ ವಿದ್ಯಾರ್ಥಿಗಳು ಜ್ಞಾನದ ಆಧಾರದಲ್ಲಿ ಪರೀಕ್ಷೆ ಎದುರಿಸದೆ, ಆಧುನಿಕ ತಂತ್ರಜ್ಞಾನ ಬಳಸಿಕೊಂಡು ಅಡ್ಡದಾರಿ ಹಿಡಿಯುತ್ತಿದ್ದಾರೆ. ಅಂತಹ ದಾರಿಯಲ್ಲಿ ವಿದ್ಯಾರ್ಥಿನಿಯರೂ ಸಾಗಿರುವುದು ಕಳವಳಕಾರಿ ವಿಚಾರ. ಕೆಇಎ ಈಚೆಗೆ ನಡೆಸಿದ ಪರೀಕ್ಷೆಯಲ್ಲಿ ಕಿವಿಯೊಳಗೆ ಬ್ಲೂಟೂತ್ ಅಳವಡಿಸಿಕೊಂಡ ಪ್ರಕರಣ ಪತ್ತೆಹಚ್ಚಲಾಗಿದ್ದು, ವೈದ್ಯರ ಬಳಿ ತೆಗಿಸಬೇಕಾಯಿತು. ‘ಪ್ರಜಾವಾಣಿ’ಯಂತಹ ಪತ್ರಿಕೆ ಓದಿದರೆ ಅಡ್ಡದಾರಿಯ ಅಗತ್ಯವಿಲ್ಲ ಎಂದರು.

ಕೆಪಿಎಸ್‌ಸಿ ಪರೀಕ್ಷೆಯಲ್ಲಿ ಕೋಲಾರದ ಯುವಕರೇ ಹೆಚ್ಚಿನ ಯಶಸ್ಸು ಪಡೆದಿದ್ದಾರೆ. ಒಂದು ಕಾಲದಲ್ಲಿ ಕೆಎಎಸ್ ಅನ್ನು ಕೋಲಾರ ಆಡಳಿತ ಸೇವೆ ಎಂದು ಕರೆಯುತ್ತಿದ್ದೆವು. ಇಂದು ಎಲ್ಲ ಕೆಲಸಗಳಿಗೂ ಘನತೆ ಇದೆ. ಹೋಟೆಲ್ ಅಡುಗೆ ಸಿದ್ಧಪಡಿಸುವ ಕೆಲಸಕ್ಕೂ ಬೇಡಿಕೆ ಇದೆ. ಜ್ಞಾನದ ಜತೆಗೆ ಗ್ರಹಿಕೆ ಇದ್ದರೆ ಯಶಸ್ಸು ಕಾಣಬಹುದು ಎಂದು ಹೇಳಿದರು.



‘ಸ್ಪರ್ಧಾವಾಣಿ’ ಮಾಸಿಕ ಪತ್ರಿಕೆಯನ್ನು ಸಚಿವರಾದ ಮಧು ಬಂಗಾರಪ್ಪ, ಡಾ.ಎಂ.ಸಿ. ಸುಧಾಕರ್ ಗುರುವಾರ ಬಿಡುಗಡೆ ಮಾಡಿದರು. ಶಂಕರ ಬಿದರಿ ಹಾಗೂ ವೂಡೇ ಪಿ. ಕೃಷ್ಣ ಇದ್ದರು —ಪ್ರಜಾವಾಣಿ ಚಿತ್ರ

ವಿದ್ಯಾರ್ಥಿಗಳಿಗೆ ಏನು ಅನುಕೂಲ ಮಾಡಿಕೊಟ್ಟಿದ್ದೀರಿ ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗೆ ಭೇಟಿ ನೀಡಿದ್ದ ನ್ಯಾಕ್ ಸಮಿತಿ ಕೇಳಿತ್ತು. ‘ಪ್ರಜಾವಾಣಿ’ಯ ‘ಮಾಸ್ಟರ್‌ಮೈಂಡ್’ ಪ್ರತಿ ತೋರಿಸಿದೆವು. ‘ಎ ಡಬಲ್ ಪ್ಲಸ್’ ಗ್ರೇಡ್ ದೊರೆಯಿತು

**ವೂಡೇ ಪಿ. ಕೃಷ್ಣ**, ಶಿಕ್ಷಣ ತಜ್ಞ

‘ಪ್ರಜಾವಾಣಿ’ ಓದಿದ ಬಹುತೇಕರು ಸ್ಪರ್ಧಾ ಪರೀಕ್ಷೆಗಳಲ್ಲಿ ಯಶಸ್ಸು ಕಂಡಿದ್ದಾರೆ. ಹೊಸದಾಗಿ ರೂಪಿಸಲಾದ ‘ಸ್ಪರ್ಧಾವಾಣಿ’ ಓದಿನ ಸಮಯವನ್ನು ಇನ್ನಷ್ಟು ಉಳಿಸುತ್ತದೆ. ಹೆಚ್ಚಿನ ಜ್ಞಾನ ವೃದ್ಧಿಗೆ ಸಹಕಾರಿಯಾಗುತ್ತದೆ

**ಪಿ.ಮಣಿವಣ್ಣನ್**, ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ

### ಬಡ ಅಭ್ಯರ್ಥಿಗಳಿಗೆ ‘ಸ್ಪರ್ಧಾವಾಣಿ’ ವರ

ಬಾಲ್ಯದಿಂದಲೇ ಪ್ರಜಾವಾಣಿ, ಸುಧಾ, ಮಯೂರ ಓದಿಕೊಂಡು ಬೆಳೆದಿದ್ದೇನೆ. ಪತ್ರಿಕೆಗಳಲ್ಲಿ ಅಂದಿನ ಗುಣಮಟ್ಟವೇ ಇಂದೂ ಉಳಿದಿದೆ. ಅಧಿಕ ಮೊತ್ತ ನೀಡಿ ತರಬೇತಿ ಪಡೆಯಲು ಸಾಧ್ಯವಾಗದ ಬಡ ವರ್ಗದ ಅಭ್ಯರ್ಥಿಗಳಿಗೆ ‘ಸ್ಪರ್ಧಾವಾಣಿ’ ದಾರಿ ದೀಪವಾಗಲಿದೆ ಎಂದು ಶಾಲಾ ಶಿಕ್ಷಣ ಸಚಿವ ಮಧು ಬಂಗಾರಪ್ಪ ಹೇಳಿದರು.

ಆಧುನಿಕ ತಂತ್ರಜ್ಞಾನದ ಬಳಕೆಯ ಜತೆಗೆ ವಿದ್ಯಾರ್ಥಿಗಳು ಓದುವ ಬರೆಯುವ ಅಭ್ಯಾಸ ರೂಢಿಸಿಕೊಳ್ಳಬೇಕು. ಬರೆಯುವ, ಓದುವ ಬುನಾದಿ ಇದ್ದರೆ ಉಳಿದ ಮಾರ್ಗ ಸುಲಭವಾಗುತ್ತದೆ ಎಂದು ಸಲಹೆ ನೀಡಿದರು.

ಪ್ರಜಾವಾಣಿ

ಭಾನುವಾರ, 29 ಅಕ್ಟೋಬರ್ 2023

# ‘ಜನಪದರಿಲ್ಲದ ಅರ್ಧ ಸತ್ಯದ ಚರಿತ್ರೆ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಜನಪದರನ್ನು, ಜನ ಸಾಮಾನ್ಯರನ್ನು ಒಳಗೊಳ್ಳದ ಮೋಸದ ಚರಿತ್ರೆ ನಮ್ಮದು. ರಾಜರ, ಪಂಡಿತರ ಬಗ್ಗೆ ಇರುವ ಅರ್ಧ ಸತ್ಯದ ಚರಿತ್ರೆ’ ಎಂದು ಜನಪದ ವಿದ್ವಾಂಸ ಹಿ.ಚಿ. ಬೋರಲಿಂಗಯ್ಯ ತಿಳಿಸಿದರು.

ನಗರದಲ್ಲಿ ಶನಿವಾರ ನಡೆದ ಬಾನಂದೂರು ಕೆಂಪಯ್ಯ ಅವರ ಬದುಕು-ಹಾಡುಗಾರಿಕೆ ಕುರಿತ ‘ಬಾನಂದದ ಕಿನ್ನೂರಿ’ ಅಭಿನಂದನಾ ಗ್ರಂಥ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಹಂಪಿಯ ಚರಿತ್ರೆ ಅಂದ ಕೂಡಲೇ ಮುತ್ತು, ರತ್ನ ಬೀದಿಯಲ್ಲಿ ಮಾರಾಟ ಮಾಡಿರುವ ಬಗ್ಗೆ, ಅಲ್ಲಿನ ದೇವಸ್ಥಾನ, ರಾಜರ ಬಗ್ಗೆ ವಿವರ ಸಿಗುತ್ತದೆ. ಆದರೆ, ವಿಜಯ ವಿಠಲ ದೇವಸ್ಥಾನವನ್ನು ಕಟ್ಟಿದ ಶಿಲ್ಪಿ ಯಾರು? ಶಿಲ್ಪಿ ಜೊತೆಗೆ ಕೆಲಸ ಮಾಡಿದವರು ಯಾರು? ಎಷ್ಟು ಮಂದಿ ಜೀವ ಕಳೆದುಕೊಂಡಿದ್ದಾರೆ ಎಂಬ ವಿವರಗಳು ಸಿಗುವುದಿಲ್ಲ. ಶೂದ್ರರ, ಜನಸಾಮಾನ್ಯರ ಚರಿತ್ರೆ ಸಿಗುವುದಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು.

ಬಾನಂದೂರು ಕೆಂಪಯ್ಯ ಅವರು ದಶಕಗಳ ಹಿಂದೆಯೇ ಚರ್ಮ ವಾದ್ಯ ಸಮ್ಮೇಳನ ಮಾಡಿ ತೆರೆಮರೆಯಲ್ಲಿದ್ದ ಸಾವಿರಾರು ಕಲಾವಿದರಿಗೆ ವೇದಿಕೆ ಕಲ್ಪಿಸಿ ಗುರುತಿಸುವ ಕೆಲಸ ಮಾಡಿದರು. ಕೆಲವೇ ಜನಪ್ರಿಯ ಜನಪದ ಹಾಡುಗಳು ಪ್ರಚಲಿತದಲ್ಲಿವೆ. ನೂರಾರು ಜನಪದ ಹಾಡುಗಳು, ಧ್ವನಿಗಳ ಬಗ್ಗೆ ಯುವಪೀಳಿಗೆಗೆ ಅರಿವಿಲ್ಲ. ಅದನ್ನು ತಿಳಿಸಲು ಜನಪದ ಡಿಪ್ಲೊಮಾ ಕೋರ್ಸ್ ಆರಂಭಿಸುವ ಅಗತ್ಯ ಇದೆ ಎಂದರು.

ಪಿತಾಮಹ ಪ್ರಕಾಶನದ ಡಿ.ಎಸ್. ವೀರಯ್ಯ, ನಿವೃತ್ತ ಎಡಿಜಿಪಿ ಸುಭಾಷ್ ಭರಣಿ, ನಿವೃತ್ತ ಎಸ್‌ಪಿ ವೇಮಗಲ್ ನಾರಾಯಣ ಸ್ವಾಮಿ, ಜನಪದ ತಜ್ಞ ಮೀರಾಸಾಬಿಹಳ್ಳಿ ಶಿವಣ್ಣ ಮಾತನಾಡಿದರು. ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಬಾನಂದೂರು ಕೆಂಪಯ್ಯ-ಸುಚಿತ್ರಾ ದಂಪತಿಯನ್ನು ಸನ್ಮಾನಿಸಲಾಯಿತು.



ಬಾನಂದೂರು ಕೆಂಪಯ್ಯ ಅವರ ಬದುಕು-ಹಾಡುಗಾರಿಕೆ ಕುರಿತ ‘ಬಾನಂದದ ಕಿನ್ನೂರಿ’ ಅಭಿನಂದನಾ ಗ್ರಂಥವನ್ನು ನಗರದಲ್ಲಿ ಶನಿವಾರ ಜನಪದ ವಿದ್ವಾಂಸ ಹಿ.ಚಿ. ಬೋರಲಿಂಗಯ್ಯ ಬಿಡುಗಡೆ ಮಾಡಿದರು.

## ಕೃತಿ ಪರಿಚಯ

ಅಭಿನಂದನಾ ಗ್ರಂಥ: ಬಾನಂದದ ಕಿನ್ನೂರಿ
ಸಂಪಾದಕ: ಲಕ್ಷ್ಮಣ ಕೊಡಸೆ
ಪ್ರಕಾಶನ: ಪಿತಾಮಹ ಪ್ರಕಾಶನ
ಪುಟ: 408
ದರ: ₹450

SAMYUKTA KARNATAKA

ಸಂಯುಕ್ತ ಕರ್ನಾಟಕ

Oct 25, 2023

# ಸಾಹಿತ್ಯ ಲೋಕಕ್ಕೆ ವಚನಕಾರರ ಕೊಡುಗೆ ಅಪಾರ

ಬೆಂಗಳೂರು: ವಚನಗಳನ್ನು ಜನಸಾಮಾನ್ಯರು ಅರ್ಥ ಮಾಡಿಕೊಳ್ಳುವಂತೆ ರಚಿಸಿದಂತಹ ಕೀರ್ತಿ ಶರಣಾದಿ ಮಹಾಸಂತರಿಗೆ ಸಲ್ಲುತ್ತದೆ ಎಂದು ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯ ಡಾ.ಚಿತ್ತಯ್ಯ ಪೂಜಾರ್ ತಿಳಿಸಿದರು.

ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು-ಗಾಂಧಿ ಅಧ್ಯಯನ ಕೇಂದ್ರದ ವತಿಯಿಂದ ಹಮ್ಮಿಕೊಂಡಿದ್ದ ಸಾಹಿತ್ಯ ರತ್ನ ಶ್ರೀ ಅನ್ನದಾನಯ್ಯ ಪುರಾಣಿಕ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, 12ನೇ ಶತಮಾನದ ವಚನಕಾರರು ಕನ್ನಡ ಭಾಷೆಯನ್ನು ಅತ್ಯಂತ ಸರಳೀಕರಿಸುವ ಮೂಲಕ ಜನಸಾಮಾನ್ಯರಲ್ಲಿ ಸಾಹಿತ್ಯಾಭಿರುಚಿ ಮೂಡಿಸುವ ಕಾರ್ಯ ಮಾಡಿದರು.

ಸಾಹಿತ್ಯ ಲೋಕಕ್ಕೆ ವಚನಕಾರರು ನೀಡಿದ ಕೊಡುಗೆ ಅಪಾರ. ವಚನ ಸಾಹಿತ್ಯವು ಬದುಕಿಗೆ ಅಗತ್ಯವಿರುವ ಎಲ್ಲಾ ಮೌಲ್ಯಗಳನ್ನು ಕಟ್ಟಿಕೊಟ್ಟಿದ್ದಾರೆ. ಸಾಮಾಜಿಕ, ಆರ್ಥಿಕ ಮತ್ತು ಬೌದ್ಧಿಕ ಚಳವಳಿಗಳು ನಡೆದಿದ್ದು 12ನೇ ಶತಮಾನದಲ್ಲಿ. ಆ ಕಾಲಕ್ಕೆ ಅನುಭವ ಮಂಟಪ ನಿರ್ಮಾಣವಾಗಿದ್ದು, ವಚನಗಳ ಚರ್ಚೆ ನಡೆಸಲಾಗುತ್ತಿತ್ತು. ಶರಣರು ಕಾಯಕಕ್ಕೆ ಹೆಚ್ಚಿನ ಮಹತ್ವ ನೀಡುತ್ತಿದ್ದರಲ್ಲದೆ ಅಂದೇ ಆಯ್ದಕ್ಕಿ ಲಕ್ಕಮ್ಮನಂತವರಿಂದ ದಾಸೋಹದ ಕಲ್ಪನೆ ಜಾರಿಯಾಗಿತ್ತು ಎಂದು ಅಭಿಪ್ರಾಯಪಟ್ಟರು.

ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಮಾತನಾಡಿ, ವಚನಗಳ ಅತ್ಯುತ್ತಮ ಸಂದೇಶವನ್ನು ಜಗತ್ತಿಗೆ ನೀಡಿವೆ. ದಾಸೋಹದ



ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು-ಗಾಂಧಿ ಅಧ್ಯಯನ ಕೇಂದ್ರದ ವತಿಯಿಂದ ಸಾಹಿತ್ಯ ರತ್ನ ಶ್ರೀ ಅನ್ನದಾನಯ್ಯ ಪುರಾಣಿಕ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಪರಿಕಲ್ಪನೆಯನ್ನು ನೀಡಿದ ಹೆಗ್ಗಳಿಕೆ ವಚನಕಾರರಿಗೆ ಸಲ್ಲಬೇಕು. ಒಬ್ಬ ಮನುಷ್ಯ ಆತ್ಮ ಸಾಕ್ಷಾತ್ಕಾರದ ಬಗ್ಗೆ ಅರಿವು ಮೂಡಿಸುತ್ತವೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮತ್ತು ದತ್ತಿ ದಾನಿಗಳಾದ ಪ್ರೊ.ಚಂದ್ರಿಕಾ ಪುರಾಣಿಕ, ದೀಪ್ತಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ.ಸತ್ಯಮಂಗಲ ಮಹಾದೇವ ಜಂಟಿ ಕಾರ್ಯದರ್ಶಿ ಡಾ.ಎನ್.ಮಂಜುನಾಥ್, ಕಾಲೇಜಿನ ಪ್ರಾಂಶುಪಾಲ ಪ್ರೊ.ಎನ್.ಎಸ್.ಸತೀಶ್ ಉಪಸ್ಥಿತರಿದ್ದರು.

ಸುವರ್ಣ ಸಂಭ್ರಮ
# ಉದಯವಾಣಿ
1970ರಿಂದ
22/10/2023 ನಮ್ಮ ಹೃದಯವಾಣಿ • ನಮ್ಮ ಉದಯವಾಣಿ

## ವಿದ್ಯಾರ್ಥಿಗಳಿಗೆ ರಾಮಕೃಷ್ಣ ಆಶ್ರಮದ ತದ್ಯುಕ್ತಾನಂದ ಸ್ವಾಮೀಜಿ ಸಲಹೆ

# ಮೊಬೈಲ್ ಗೀಳು ಬಿಡಿ, ಅಧ್ಯಯನದಲ್ಲಿ ತೊಡಗಿ

ಕೆಂಗೇರಿ: ವಿದ್ಯಾರ್ಥಿಗಳಲ್ಲಿ ಸಂಯಮದ ಕೊರತೆ ಹೆಚ್ಚಾಗಿದ್ದು, ತಮ್ಮಲ್ಲಿರುವ ಬುದ್ಧಿಶಕ್ತಿಯನ್ನು ಬೆಳೆಸಲು ಅವಕಾಶವಿಲ್ಲದಂತಾಗಿದೆ ಎಂದು ಬೆಂಗಳೂರು ಬಸವನಗುಡಿಯ ರಾಮಕೃಷ್ಣ ಆಶ್ರಮದ ಸ್ವಾಮಿ ತದ್ಯುಕ್ತಾನಂದಜೀ ಮಹಾರಾಜ್ ವಿಷಾದಿಸಿದರು.

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಅಕಾಡೆಮಿ ಆಫ್ ಬ್ಯುಸಿನೆಸ್ ಸ್ಟಡೀಸ್ ನ ಆವರಣದಲ್ಲಿ ಕಾಲೇಜಿನ '12ನೇ ವರ್ಷದ ಎಸ್.ಎ.ಬಿ ಪ್ರತಿಭಾ ಪುರಸ್ಕಾರ ಸಮಾರಂಭ 2023 -24 ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಮೊಬೈಲ್ ಗೀಳಿನಲ್ಲಿ ಸಿಲುಕಿರುವ ವಿದ್ಯಾರ್ಥಿಗಳು ಆಧುನಿಕ ತಂತ್ರಜ್ಞಾನದ ಮೂಲಕ ಬೆರಳ ತುದಿಯಲ್ಲಿ ಸಿಗುವ ಮಾಹಿತಿಯ ಮೊರೆಹೋಗಿ ಅಧ್ಯಯನ ಮಾಡುವ ಪ್ರವೃತ್ತಿಯನ್ನು ಕಳೆದುಕೊಳ್ಳುತ್ತಿದ್ದಾರೆ. ನಮ್ಮಲ್ಲಿರುವ ಬುದ್ಧಿಶಕ್ತಿಯನ್ನು ಬಳಸಿಕೊಂಡು ಸಮಾಜಕ್ಕೆ ಉಪಯೋಗವಾಗುವ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕು ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಕಾಲೇಜಿನ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ತನ್ನದೇ ಆದ ಸಂಸ್ಕೃತಿಯನ್ನು ಬೆಳೆಸಿಕೊಂಡು ಬರುತ್ತಿದ್ದು, ಶಿಕ್ಷಣದ ಜತೆಗೆ ಎಲ್ಲಾ ರಂಗಗಳಲ್ಲೂ ವಿದ್ಯಾರ್ಥಿಗಳ ಬೆಳವಣಿಗೆಗೆ ಸಹಕಾರ ನೀಡುತ್ತಿದ್ದಾರೆ. ವಿಶ್ವಾಸದಂತೆ ನಮ್ಮ ಕಾಲೇಜಿನ ವಿದ್ಯಾರ್ಥಿಗಳು ಉನ್ನತ ಹುದ್ದೆ ಅಲಂಕರಿಸಿ ನಮ್ಮ ಕಾಲೇಜಿಗೆ ಹಾಗೂ ಪೋಷಕರಿಗೆ ಕೀರ್ತಿ ತಂದಿದ್ದಾರೆ ಎಂದು ಸಂತಸ ವ್ಯಕ್ತಪಡಿಸಿದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೆರವೇರಿಸಲಾಯಿತು.

ಶಿಕ್ಷಣ ದತ್ತಿಯ ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜು, ಕಾಲೇಜಿನ ಕಾರ್ಯಕಾರಿ ಸಮಿತಿ ಅಧ್ಯಕ್ಷ ಬಿ.ಎ.ಅನಂತರಾಮು, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಜಯರಾಮ್, ಪಿ.ಯು ಕಾಲೇಜಿನ ಪ್ರಾಂಶುಪಾಲ ಡಾ.ಮಂಜುನಾಥ್, ಐಕ್ಯೂಎಸಿ ಸಂಚಾಲಕಿ ಯು. ರೂಪಶ್ರೀ ಸೇರಿದಂತೆ ಬೋಧಕ, ಬೋಧಕೇತರ ಶಿಕ್ಷಕರು, ವಿದ್ಯಾರ್ಥಿಗಳು, ಪೋಷಕರು ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

## ಹಣಕಾಸು ಆಯೋಗದ ಕಚೇರಿ ಉದ್ಘಾಟಿಸಿದ ಸಚಿವ ಎಚ್.ಕೆ. ಪಾಟೀಲ್

# ರಾಜ್ಯಕ್ಕೆ ಮಾದರಿ ಆರ್ಥಿಕ ನೀತಿ ರೂಪಿಸಿ

■ **ವಿಕ ಸುದ್ದಿಲೋಕ** ಬೆಂಗಳೂರು

ಸ್ವಾತಂತ್ರ್ಯ ದೊರೆತು 75 ವರ್ಷಗಳಾದರೂ ಭಾರತದಲ್ಲಿ ಬಡತನ ಗುರುತಿಸಲು ಸೂಕ್ತ ಮಾನದಂಡ ರೂಪಿಸುವ ಕೆಲಸವಾಗಿಲ್ಲ ಎಂದು ಕಾನೂನು ಮತ್ತು ಸಂಸದೀಯ ಸಚಿವ ಎಚ್.ಕೆ. ಪಾಟೀಲ್ ಬೇಸರ ವ್ಯಕ್ತ ಪಡಿಸಿದರು.

ರೇಸ್‌ಕೋರ್ಸ್ ರಸ್ತೆಯ ಖನಿಜ ಭವನದ 2ನೇ ಮಹಡಿಯಲ್ಲಿ ಗುರುವಾರ ರಾಜ್ಯ ಸರಕಾರದ 5ನೇ ರಾಜ್ಯ ಹಣಕಾಸು ಆಯೋಗದ ಕಚೇರಿಯನ್ನು ಉದ್ಘಾಟಿಸಿ ಅವರು ಮಾತನಾಡಿ,''5ನೇ ಹಣಕಾಸು ಆಯೋಗ ಹೊಸ ರೂಪ ತಾಳಿ, ದೇಶಕ್ಕೆ ಮಾದರಿಯಾಗುವ ಶಿಫಾರಸುಗಳನ್ನು ಮಾಡಬೇಕು,'' ಎಂದರು.

''ರಾಜ್ಯ ಸರಕಾರವು ಆಯೋಗದಿಂದ ರಾಜ್ಯದಲ್ಲಿ ಬಡತನ, ಹಿಂದುಳಿದ ಪ್ರದೇಶವನ್ನು ಗುರುತಿಸಿ ಅಧ್ಯಯನ ಮಾಡಿ ಹೊಸ ಅಂಶಗಳನ್ನು ಸೇರಿಸಿಕೊಂಡ ಉತ್ತಮ ವರದಿಯನ್ನು ಅಪೇಕ್ಷಿಸುತ್ತದೆ. ಅದಕ್ಕಾಗಿ ವರ್ಷಗಟ್ಟಲೇ ಕಾಯಿಸದೇ ಛಲದಿಂದ ಕಾರ್ಯನಿರ್ವಹಿಸಿ ಕಾಲ ಕಾಲಕ್ಕೆ ವರದಿ ಸಲ್ಲಿಸಬೇಕು. ಹೀಗೆ ಪಂಚಾಯತ್‌ರಾಜ್ ವ್ಯವಸ್ಥೆಗೆ ಹೊಸ ರೂಪ ಕೊಡಬೇಕು,'' ಎಂದು ಮನವಿ ಮಾಡಿದರು.



ಬೆಂಗಳೂರಿನಲ್ಲಿ ಗುರುವಾರ 5ನೇ ರಾಜ್ಯ ಹಣಕಾಸು ಆಯೋಗದ ಕಚೇರಿಯನ್ನು ಸಚಿವ ಎಚ್.ಕೆ. ಪಾಟೀಲ್ ಉದ್ಘಾಟಿಸಿದರು. ಸಚಿವ ಕೆ.ಎಚ್. ಮುನಿಯಪ್ಪ, ಆಯೋಗದ ಅಧ್ಯಕ್ಷ ನಾರಾಯಣಸ್ವಾಮಿ ಹಾಜರಿದ್ದರು.

ಆಹಾರ ಮತ್ತು ನಾಗರಿಕ ಪೂರೈಕೆ ಇಲಾಖೆ ಸಚಿವ ಕೆ.ಎಚ್. ಮುನಿಯಪ್ಪ ಮಾತನಾಡಿ, ''ಬಲಿಷ್ಠ ಆರ್ಥಿಕ ನೀತಿ ಹೊಂದಿದಾಗ ಮಾತ್ರ ಬಲಿಷ್ಠ ಭಾರತ ಕಟ್ಟಲು ಸಾಧ್ಯವಿದೆ. ಈಗಾಗಲೇ ದೇಶಕ್ಕೆ ಮಾದರಿ ಕಾರ್ಯಗಳನ್ನು ನೀಡಿರುವ ಸಿ. ನಾರಾಯಣಸ್ವಾಮಿ ಅವರು 5ನೇ ಹಣಕಾಸು ಆಯೋಗಕ್ಕೆ ಅಧ್ಯಕ್ಷರಾಗಿ ಇತರೆ ರಾಜ್ಯಗಳಿಗೆ ಮಾದರಿಯಾಗುವ ಆರ್ಥಿಕ ನೀತಿ ಶಿಫಾರಸು ಮಾಡುತ್ತಾರೆಂಬ ನಂಬಿಕೆ ಇದೆ,'' ಎಂದು ವಿಶ್ವಾಸ ವ್ಯಕ್ತಪಡಿಸಿದರು.

**● ಮುಂದಿನ ದಿನಗಳಲ್ಲಿ ಎಲ್ಲರ ಸಲಹೆ ಹಾಗೂ ಮಾರ್ಗದರ್ಶನದಲ್ಲಿ ಉತ್ತಮ ಸೇವೆ ಮಾಡುತ್ತೇವೆ. ಗ್ರಾಮ, ತಾಲೂಕು, ಜಿಲ್ಲಾ ಪಂಚಾಯತಿಗಳು, ನಗರಸಭೆ, ಪುರಸಭೆ, ಪಟ್ಟಣ ಪಂಚಾಯತಿಗಳ ಆರ್ಥಿಕ ಸ್ಥಿತಿ ಪರಿಶೀಲಿಸಿ ಸರಕಾರಕ್ಕೆ ವರದಿ ಸಲ್ಲಿಸಲಾಗುವುದು.**

**-ಸಿ. ನಾರಾಯಣಸ್ವಾಮಿ** ನೂತನ ಅಧ್ಯಕ್ಷ, 5ನೇ ಹಣಕಾಸು ಆಯೋಗ

ಸಮಾರಂಭದಲ್ಲಿ ವೈದ್ಯಕೀಯ ಶಿಕ್ಷಣ ಸಚಿವ ಡಾ.ಶರಣಪ್ರಕಾಶ್ ಪಾಟೀಲ್, ರಾಜ್ಯ 5ನೇ ಹಣಕಾಸು ಆಯೋಗದ ಸದಸ್ಯ ಮೊಹಮ್ಮದ್ ಸನಾವುಲ್ಲಾ, ರಾಜ್ಯ ಲೆಕ್ಕಪತ್ರ ಇಲಾಖೆ ನಿವೃತ್ತ ನಿಯಂತ್ರಕ ಎಸ್.ಆರ್. ಪೋಂಡೆ, ರಾಜ್ಯ ಹಣಕಾಸು ಆಯೋಗದ ಕಾರ್ಯದರ್ಶಿ ಉಜ್ವಲ್ ಕುಮಾರ್ ಘೋಷ್, ಪ್ರಮೋದ್ ಹೆಗಡೆ ಉಪಸ್ಥಿತರಿದ್ದರು.

ಈ ಸಂಜೆ

Oct 19, 2023



ರೇಸ್‌ಕೋರ್ಸ್ ರಸ್ತೆಯ ಖನಿಜ ಭವನದಲ್ಲಿಂದು ಕರ್ನಾಟಕ ಸರ್ಕಾರದ ಐದನೆ ಹಣಕಾಸು ಆಯೋಗದ ಕಚೇರಿಯನ್ನು ಸಚಿವರಾದ ಎಚ್.ಕೆ.ಪಾಟೀಲ್, ಕೆ.ಎಚ್.ಮುನಿಯಪ್ಪ, ಶರಣಪ್ರಕಾಶ್ ಪಾಟೀಲ್ ಉದ್ಘಾಟಿಸಿದರು. ಮಾಜಿ ಸಂಸದ ಹಾಗೂ ಆಯೋಗದ ಅಧ್ಯಕ್ಷ ಸಿ.ನಾರಾಯಣಸ್ವಾಮಿ, ಸದಸ್ಯರಾದ ಮೊಹಮ್ಮದ್ ಸನಾವುಲ್ಲಾ, ಆರ್.ಎಸ್.ಪೋಂಡೆ, ಕಾರ್ಯದರ್ಶಿ ಉಜ್ವಲ್ ಕುಮಾರ್ ಘೋಷ್ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

ಸಂಜೆವಾಣಿ

Monday 16 October 2023



ರಂಗ ಸಂಸ್ಥಾನದ ಡಾ.ಬಂಡ್ಲಹಳ್ಳಿ ವಿಜಯ ಕುಮಾರ್ ಅವರ ನೇತೃತ್ವದಲ್ಲಿ 1116 ಗಾಯಕ-
ರಿಂದ ಸಾಮೂಹಿಕ ಗಾಯನ ಕಾರ್ಯಕ್ರಮ ಇಂದು ರವೀಂದ್ರ ಕಲಾಕ್ಷೇತ್ರ ಹಿಂಭಾಗ ಸಂಸ ಬಯಲು
ರಂಗಮಂದಿರದಲ್ಲಿ ಏರ್ಪಡಿಸಿದ್ದರು.ನವರಾತ್ರಿ ಮೊದಲ ದಿನ ನಡೆದ ಈ ಕಾರ್ಯಕ್ರಮದಲ್ಲಿ
ಒಂಬತ್ತು ಭಕ್ತಿ ಗೀತೆಗಳನ್ನು, 1116 ಗಾಯಕರಿಂದ ಸಾಮೂಹಿಕ ಗಾಯನ ನಡೆಯಿತು.
ಡಾ ವೂಡೇ ಕೃಷ್ಣ ಅವರು ಉದ್ಘಾಟಿಸಿದರು. ಪದ್ಮಾವತಿ ಅವರು ಇತರರು ಉಪಸ್ಥಿತರಿದ್ದರು.

# ಈ ಸಂಜೆ

Oct 16, 2023




ನವರಾತ್ರಿ ಅಂಗವಾಗಿ ರಂಗಸಂಸ್ಥಾನದ ಡಾ.ಬುಡ್ಲಹಳ್ಳಿ ವಿಜಯ್‌ಕುಮಾರ್ ಅವರ ನೇತೃತ್ವದಲ್ಲಿ ನಗರದ ಸಂಸ ಬಯಲು ರಂಗಮಂದಿರದಲ್ಲಿ ಆಯೋಜಿಸಿದ್ದ 1116 ಗಾಯಕರಿಂದ 9 ಭಕ್ತಿಗೀತೆಗಳ ಸಾಮೂಹಿಕ ಗಾಯನವನ್ನು ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಉದ್ಘಾಟಿಸಿದರು. ಮಾಜಿ ಮೇಯರ್ ಪದ್ಮಾವತಿ ಸೇರಿದಂತೆ ಮತ್ತಿತರರು ಹಾಜರಿದ್ದರು.

ವಿಜಯವಾಣಿ ನಂ 1

Oct 16, 2023

## ತಮ್ಮದೇ ವಾಸ್ತುಶಿಲ್ಪ ಹೊಂದಿರಬೇಕೆಂಬ ಉದ್ದೇಶ । ಕೆಂಗಲ್ ಪ್ರಶಸ್ತಿ ಪ್ರದಾನ

# ಬ್ರಿಟಿಷ್ ವ್ಯಕ್ತಿಯೊಬ್ಬರ ಮಾತಿಗೆ ವಿಧಾನಸೌಧ ನಿರ್ಮಾಣ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಬೆಂಗಳೂರೆಲ್ಲ ಸುತ್ತಿದ ಬಳಿಕ ನಗರದೆಲ್ಲೆಡೆ ಬ್ರಿಟಿಷ್ ವಾಸ್ತುಶಿಲ್ಪವನ್ನು ಹೊಂದಿರುವ ಕಟ್ಟಡಗಳೇ ಇವೆ ಎಂದು ಬ್ರಿಟಿಷ್ ವ್ಯಕ್ತಿಯೊಬ್ಬರು ಹೇಳಿದ ಪರಿಣಾಮ, ರಾಜ್ಯಕ್ಕೆ ತಮ್ಮದೇ ವಾಸ್ತುಶಿಲ್ಪ ಹೊಂದಿರುವ ಕಟ್ಟಡ ನಿರ್ಮಿಸಬೇಕೆಂಬ ಛಲದಿಂದ ಕೆಂಗಲ್ ಹನುಮಂತಯ್ಯ ಮೈಸೂರು ರಾಜ್ಯದ ಶೈಲಿಯಲ್ಲಿ ವಿಧಾನಸೌಧ ನಿರ್ಮಿಸಿದರು ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ತಿಳಿಸಿದರು.

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನವು ಭಾನುವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ 'ಕೆಂಗಲ್ ಹನುಮಂತಯ್ಯ' ರಾಜ್ಯ ಪ್ರಶಸ್ತಿ ಪ್ರದಾನ ಮಾಡಿ ಅವರು ಮಾತನಾಡಿದರು.

ಆಡಳಿತದಲ್ಲಿ ನಾಡು, ನುಡಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕೆಂಬ ಉದ್ದೇಶದಿಂದ ಕೆಂಗಲ್ ಅವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಹುಟ್ಟಿ ಹಾಕಿದರು. ಬಳಿಕ ಹಲವು ರಾಜ್ಯಗಳು ಇದನ್ನೇ ಅನುಸರಿಸಿದವು. ಕಲೆ, ಸಾಹಿತ್ಯ, ಸಂಸ್ಕೃತಿಗೆ ಹೆಚ್ಚಿನ ಮನ್ನಣೆ ನೀಡಬೇಕೆಂಬುದನ್ನು ತಿಳಿಸಿಕೊಟ್ಟರು ಎಂದರು.



**ಹಲವು ಕೊಡುಗೆ:** ಹುಬ್ಬಳ್ಳಿಗೆ ಹೋಗುತ್ತಿದ್ದ ರಾಜಧಾನಿಯನ್ನು ಬೆಂಗಳೂರಿಗೆ ತಂದಿದ್ದು, ಮೈಸೂರು ಶೈಲಿಯಲ್ಲಿ ವಿಧಾನಸೌಧ ನಿರ್ಮಾಣ, ರೈಲ್ವೆ ಸಚಿವರಾಗಿ ಸರಿಯಾದ ಸಮಯಕ್ಕೆ ರೈಲು ನಿಲ್ದಾಣಕ್ಕೆ ಬರುವಂತೆ ಮಾಡಿರುವುದು ಸೇರಿ ಕೆಂಗಲ್ ಹನುಮಂತಯ್ಯ ಅವರು ಅನೇಕ ಸಾಧನೆಗಳನ್ನು ಮಾಡಿದ್ದಾರೆ ಎಂದು ಸ್ಮರಿಸಿದರು.

**ವಿಧಾನಸೌಧ ಮೀರಿದ ವ್ಯಕ್ತಿತ್ವ:**

ಮಹಾತ್ಮ ಗಾಂಧೀಜಿ ಅವರು ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟಿದ್ದು ಒಂದು ಕಾರ್ಯವಷ್ಟೆ. ಅದಕ್ಕಿಂತ ಮಿಗಿಲಾಗಿ ಶಾಂತಿ ನೆಲಸಬೇಕೆಂದು ಹೋರಾಟ ಮಾಡಿದರು. ಕೆಂಗಲ್ ಹನುಮಂತಯ್ಯ ಅವರು ವಿಧಾನಸೌಧದಿಂದ ಜನಪ್ರಿಯತೆ ಗಳಿಸಿದ್ದರೂ ಅದಕ್ಕಿಂತ ಮಿಗಿಲಾದ ಆಡಳಿತ ನೀಡಿದ ವ್ಯಕ್ತಿತ್ವ ಹೊಂದಿದ್ದರು. ಡಿ.ವಿ.ಜಿ. ಅವರು ಮಂಕುತಿಮ್ಮನ ಕಗ್ಗವನ್ನು ಮೀರಿದ ಪಾಂಡಿತ್ಯವನ್ನು ಹೊಂದಿದ್ದರೆಂದು ಹೇಳಿದರು.

ರಮಣಶ್ರೀ ಸಂಸ್ಥೆಯ ಅಧ್ಯಕ್ಷ ಎಸ್. ಷಡಕ್ಷರಿ ಮಾತನಾಡಿ, ಹಿಂದೆಲ್ಲ ಎಲೆಮರೆ ಕಾಯಿಯಂತಿರುವ ಸಾಧಕರನ್ನು ರಾಜ-ಮಹಾರಾಜರು ಗುರುತಿಸಿ ಸನ್ಮಾನಿಸುತ್ತಿದ್ದರು. ಆದರೆ, ಈಗ ಸಾಧಕರನ್ನು ಗುರುತಿಸುವ ಹೊಣೆ ನಮ್ಮೆಲ್ಲರದಾಗಿದೆ. ನಾಡಹಬ್ಬ ದಸರಾ ಸಮಯದಲ್ಲಿ ಇವರ ಜತೆಗೆ ಮತ್ತಷ್ಟು ನಮ್ಮ ಸುತ್ತಲಿನ ಸಾಧಕರನ್ನು ಗುರುತಿಸುವ ಕೆಲಸ ಮಾಡೋಣವೆಂದು ಸಲಹೆ ನೀಡಿದರು.

**ದೇಶ ಗುರುವಿನ ಸ್ಥಾನದಲ್ಲಿರಬೇಕು:**

ಉದ್ಯಮಿ ಡಾ. ಆರ್.ಎಲ್. ರಮೇಶ್ ಬಾಬು ಮಾತನಾಡಿ, ದೇಶ-ವಿದೇಶಗಳಲ್ಲಿ ಪ್ರಸ್ತುತ ದಿನಗಳಲ್ಲಿನ ಜನರು ಎಷ್ಟೇ ಹಣ ಸಂಪಾದಿಸಿದರೂ ಅಂತಿಮವಾಗಿ ನೆಮ್ಮದಿಯಾಗಿರಬೇಕೆಂದು ಬಯಸುತ್ತಿದ್ದಾರೆ. ಎಲ್ಲರೂ ಆನಂದವಾಗಿರಬೇಕಾದರೆ, ಭಾರತ ಗುರುವಿನ ಸ್ಥಾನದಲ್ಲಿರಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದರು.

**40 ಗಣ್ಯರಿಗೆ ಸನ್ಮಾನ:** ಸಮಾಜ ಸೇವೆ, ಶಿಕ್ಷಣ, ಆರೋಗ್ಯ, ಪೊಲೀಸ್ ಇಲಾಖೆ ಸೇರಿ ವಿವಿಧ ಕ್ಷೇತ್ರಗಳಲ್ಲಿ ತಮ್ಮದೇ ಸೇವೆ ಸಲ್ಲಿಸಿರುವ 40 ಗಣ್ಯರನ್ನು ಸನ್ಮಾನಿಸಲಾಯಿತು.

ಕಾರ್ಯಕ್ರಮದಲ್ಲಿ ಆರ್ಯವೈಶ್ಯ ಅಧಿಕಾರಿಗಳ ಮತ್ತು ವೃತ್ತಿನಿರತರ ಸಂಘದ ಅಧ್ಯಕ್ಷ ಡಿ. ಸುಬ್ರಹ್ಮಣ್ಯ ಶೆಟ್ಟಿ, ಪ್ರತಿಷ್ಠಾನದ ಅಧ್ಯಕ್ಷ ಎಸ್.ಆರ್. ವಿಜಯ ಸಮರ್ಥ ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಸೋಮವಾರ 16 ಅಕ್ಟೋಬರ್ 2023
16 OCTOBER 2023

## ಕೆಂಗಲ್ ಹನುಮಂತಯ್ಯ ಸಾಧನೆ ಬಣ್ಣಿಸಿದ ಡಾ. ವೂಡೇ ಪಿ. ಕೃಷ್ಣ | ನಲವತ್ತು ಸಾಧಕರಿಗೆ ರಾಜ್ಯ ಪ್ರಶಸ್ತಿ ಪ್ರದಾನ

# ಬ್ರಿಟಿಷ್ ವಾಸ್ತುಶಿಲ್ಪ ಮೀರಿ ವಿಧಾನಸೌಧ ನಿರ್ಮಾಣ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ರಾಜಧಾನಿಯಲ್ಲಿ ಎಲ್ಲೆಡೆ ಬ್ರಿಟಿಷ್ ವಾಸ್ತುಶಿಲ್ಪವನ್ನು ಹೊಂದಿರುವ ಕಟ್ಟಡಗಳೇ ಇವೆ ಎಂದು ಬ್ರಿಟಿಷ್ ವ್ಯಕ್ತಿಯೊಬ್ಬರು ಹೇಳಿದ ಪರಿಣಾಮ, ನಮ್ಮತನ ಸಾರುವ ವಿಶಿಷ್ಟ ವಾಸ್ತುಶಿಲ್ಪ ಹೊಂದಿರುವ ಕಟ್ಟಡ ನಿರ್ಮಿಸಬೇಕೆಂಬ ಛಲದಿಂದ ಕೆಂಗಲ್ ಹನುಮಂತಯ್ಯ ವಿಧಾನಸೌಧ ನಿರ್ಮಿಸಿದರು ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಹೇಳಿದ್ದಾರೆ.

ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನವು ಭಾನುವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ 'ಕೆಂಗಲ್ ಹನುಮಂತಯ್ಯ ರಾಜ್ಯ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು. ಆಡಳಿತದಲ್ಲಿ ನಾಡು-ನುಡಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕೆಂಬ ಉದ್ದೇಶದಿಂದ ಕೆಂಗಲ್ ಅವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಹುಟ್ಟುಹಾಕಿದರು. ಬಳಿಕ ಹಲವು ರಾಜ್ಯಗಳು ಇದನ್ನೇ ಅನುಸರಿಸಿದವು ಎಂದು ತಿಳಿಸಿದರು.

**ಹಲವು ಕೊಡುಗೆ:** ಬೆಂಗಳೂರನ್ನು ರಾಜಧಾನಿಯಾಗಿಸಿದ್ದು, ಮೈಸೂರು ಶೈಲಿಯಲ್ಲಿ ವಿಧಾನಸೌಧ ನಿರ್ಮಾಣ, ರೈಲ್ವೆ ಸಚಿವರಾಗಿ ಸರಿಯಾದ ಸಮಯಕ್ಕೆ ನಿಲ್ದಾಣಕ್ಕೆ ರೈಲು ಬರುವಂತೆ ಮಾಡುವುದು ಸೇರಿ ಕೆಂಗಲ್ ಹನುಮಂತಯ್ಯ ರಾಜ್ಯಕ್ಕೆ ಹಲವು ಕೊಡುಗೆಗಳನ್ನು ನೀಡಿದ್ದಾರೆ ಎಂದು ಸ್ಮರಿಸಿದರು.

**ವಿಧಾನಸೌಧ ಮೀರಿದ ವ್ಯಕ್ತಿತ್ವ:** ಕೆಂಗಲ್ ಅವರು ವಿಧಾನಸೌಧ ನಿರ್ಮಾಣದಿಂದ ಮಾತ್ರವಲ್ಲ, ಜನಸ್ನೇಹಿ ಹಾಗೂ ಅಭಿವೃದ್ಧಿಪರ ಆಡಳಿತದ ಕಾರಣದಿಂದಲೂ ಮುಂಚೂಣಿಯಲ್ಲಿ ನಿಲ್ಲುತ್ತಾರೆ ಎಂದು ಹೇಳಿದರು.




ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಸಾಧಕರಿಗೆ 'ಕೆಂಗಲ್ ಹನುಮಂತಯ್ಯ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಡಾ. ವೂಡೇ ಪಿ. ಕೃಷ್ಣ, ಸುಬ್ರಮಣ್ಯ ಶೆಟ್ಟಿ, ಎಸ್.ಆರ್. ವಿಜಯ ಸಮರ್ಥ ಮತ್ತಿತರರಿದ್ದರು.

**40 ಗಣ್ಯರಿಗೆ ಸನ್ಮಾನ:** ಸಮಾಜ ಸೇವೆ, ಶಿಕ್ಷಣ, ಆರೋಗ್ಯ, ಪೊಲೀಸ್ ಇಲಾಖೆ ಸೇರಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ 40 ಗಣ್ಯರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಆರ್ಯವೈಶ್ಯ ಅಧಿಕಾರಿಗಳ ಮತ್ತು ವೃತ್ತಿನಿರತರ ಸಂಘದ ಅಧ್ಯಕ್ಷ ಡಿ. ಸುಬ್ರಮಣ್ಯ ಶೆಟ್ಟಿ, ಪ್ರತಿಷ್ಠಾನದ ಅಧ್ಯಕ್ಷ ಎಸ್.ಆರ್. ವಿಜಯ ಸಮರ್ಥ ಉಪಸ್ಥಿತರಿದ್ದರು.

### ಸಾಧಕರನ್ನು ಗುರುತಿಸೋಣ

ಹಿಂದೆಲ್ಲ ಎಲೆಮರೆಯ ಕಾಯಿಯಂತಿರುವ ಸಾಧಕರನ್ನು ರಾಜ-ಮಹಾರಾಜರು ಗುರುತಿಸಿ ಸನ್ಮಾನಿಸುತ್ತಿದ್ದರು. ಆದರೆ, ಈಗ ಸಾಧಕರನ್ನು ಗುರುತಿಸುವ ಹೊಣೆ ನಮ್ಮೆಲ್ಲರ ಕರ್ತವ್ಯವಾಗಿದೆ. ದಸರಾ ಸಮಯದಲ್ಲಿ ಇವರ ಜತೆಗೆ ಮತ್ತಷ್ಟು ನಮ್ಮ ಸುತ್ತಲಿನ ಸಾಧಕರನ್ನು ಗುರುತಿ ಸುವ ಕೆಲಸ ಮಾಡೋಣ ಎಂದು ರಮಣಶ್ರೀ ಸಂಸ್ಥೆಯ ಅಧ್ಯಕ್ಷ ಎಸ್. ಷಡಕ್ಷರಿ ಹೇಳಿದರು.

### ಗುರುವಿನ ಸ್ಥಾನದಲ್ಲಿರಬೇಕು

ದೇಶ-ವಿದೇಶಗಳಲ್ಲಿ ಪ್ರಸ್ತುತ ದಿನಗಳಲ್ಲಿನ ಜನರು ಎಷ್ಟೇ ಹಣ ಸಂಪಾದಿಸಿದರೂ ಅಂತಿಮವಾಗಿ ನೆಮ್ಮದಿಯಾಗಿರಬೇಕೆಂದು ಬಯಸುತ್ತಿದ್ದಾರೆ. ಎಲ್ಲರೂ ಆನಂದವಾಗಿರಬೇಕಾದರೆ ಭಾರತವು ಗುರುವಿನ ಸ್ಥಾನದಲ್ಲಿರಬೇಕೆಂದು ಎಂದು ಉದ್ಯಮಿ ಡಾ. ಆರ್.ಎಲ್. ರಮೇಶ್ ಬಾಬು ಹೇಳಿದರು.

> ಯಾವುದೇ ಸಾಧಕರು ಕೂಡ ಪ್ರಶಸ್ತಿಗಾಗಿ ಕೆಲಸ ಮಾಡಿಲ್ಲ. ಆದರೆ, ಅಂತಹವರಿಗೆ ಪ್ರಶಸ್ತಿ ನೀಡಿ ನಮ್ಮ ಗೌರವವನ್ನು ಹೆಚ್ಚಳ ಮಾಡಿಕೊಳ್ಳುತ್ತಿರುವುದಕ್ಕೆ ಹೆಮ್ಮೆ ಎನಿಸುತ್ತಿದೆ.
>
> | ಎಸ್.ಆರ್. ವಿಜಯ ಸಮರ್ಥ ಸಮರ್ಥ ಸಾಹಿತ್ಯ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನದ ಅಧ್ಯಕ್ಷ

ವಿಜಯ ಕರ್ನಾಟಕ

ಸೋಮವಾರ, 16 ಅಕ್ಟೋಬರ್ 2023



ರಂಗ ಸಂಸ್ಥಾನದ ಡಾ. ಬಂಡ್ಲಹಳ್ಳಿ ವಿಜಯಕುಮಾರ್ ನೇತೃತ್ವದಲ್ಲಿ 1116 ಗಾಯಕರಿಂದ ಸಾಮೂಹಿಕ ಗಾಯನ ಕಾರ್ಯಕ್ರಮ ಭಾನುವಾರ ರವೀಂದ್ರ ಕಲಾಕ್ಷೇತ್ರ ಹಿಂಭಾಗದ ಸಂಸ ಬಯಲು ರಂಗಮಂದಿರದಲ್ಲಿ ನಡೆಯಿತು. ನವರಾತ್ರಿ ಮೊದಲ ದಿನ ನಡೆದ ಈ ಕಾರ್ಯಕ್ರಮದಲ್ಲಿ ಒಂಬತ್ತು ಭಕ್ತಿ ಗೀತೆಗಳನ್ನು ಪ್ರಸ್ತುತಪಡಿಸಲಾಯಿತು. ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಅವರು ಉದ್ಘಾಟಿಸಿದರು.

ಪ್ರಜಾ ಪ್ರಗತಿ

Oct 11, 2023

# ಸಾಧನೆ ಮಾಡಲು ಇಚ್ಛಾಶಕ್ತಿ ಇರಬೇಕು

■ ಪ್ರಜಾಪ್ರಗತಿ.ಕಾಂ



ತುಮಕೂರು: ನಗರದ ಶೇಷಾದ್ರಿಪುರಂ ಪದವಿ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್ ಶಿಪ್ ವಿತರಿಸುವ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಹೊಸದಾಗಿ ಪಿಯುಸಿ, ಪದವಿಗೆ ಪ್ರವೇಶ ಪಡೆದಿರುವ, ಅತಿ ಹೆಚ್ಚು ಅಂಕಗಳಿಸಿರುವ 40 ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಮೆರಿಟ್ ಸ್ಕಾಲರ್ಶಿಪ್ ವಿತರಿಸಿ ಮಾತನಾಡಿದ ಆದಿಚುಂಚನಗಿರಿ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಡಾ.ಕೆ.ಸಿ. ಸುಬ್ಬರಾಯ ಸಾಧನೆ ಮಾಡಲು ಇಚ್ಛಾಶಕ್ತಿ ಬೇಕು. ಇಚ್ಛೆ ಇಲ್ಲದೆ ಏನು ಮಾಡಲು ಸಾಧ್ಯವಿಲ್ಲ, ವಿದ್ಯಾರ್ಥಿಗಳು ಸಾಧನೆಯ ಮಾರ್ಗದಲ್ಲಿ ತೊಡಗಿದಾಗ ಎಲ್ಲಾ ರೀತಿಯ ತ್ಯಾಗಕ್ಕೆ ಸಿದ್ಧರಿರಬೇಕು. ಶೇಷಾದ್ರಿಪುರಂ ಕಾಲೇಜು ಕಡಿಮೆ ಸಮಯದಲ್ಲಿ ಅಗಾಧ ಸಾಧನೆ ಮಾಡಿದೆ. ಪದವಿ ಜೊತೆಗೆ ಸ್ನಾತಕೋತ್ತರ ಪದವಿಗಳನ್ನು ತಂದಿರುವುದು ಸಂತೋಷದ ವಿಷಯ. ವೂಡೇ.ಪಿ.ಕೃಷ್ಣ ಮತ್ತು ಅವರ ಟೀಮ್ ಸಂಸ್ಥೆಯನ್ನು ಕಟ್ಟುವಲ್ಲಿ ಯಶಸ್ವಿಯಾಗಿದ್ದಾರೆ ಎಂದು ಹೇಳಿದರು.

ನಾಡೋಜ ಡಾ.ವೂಡೇ.ಪಿ.ಕೃಷ್ಣ ಮಾತನಾಡಿ ಪ್ರತಿ ವರ್ಷ ನಮ್ಮ ಶಿಕ್ಷಣ ಸಂಸ್ಥೆ ಅತಿ ಹೆಚ್ಚು ಅಂಕ ಬಂದ ವಿದ್ಯಾರ್ಥಿಗಳಿಗೆ ಸ್ಕಾಲರ್ ಶಿಪ್ ಕೊಡುತ್ತಾ ಬಂದಿದೆ. ಗಾಂಧಿಜಿ ಹೇಳುವಂತೆ ಶಿಕ್ಷಣ ಎಂದರೆ ಎಲ್ಲಾ ದಾಸ್ಯಗಳಿಂದಬಿಡುಗಡೆಗೊಳ್ಳುವುದು ಎಂದು, ವಿದ್ಯಾರ್ಥಿಗಳು ಈ ನಿಟ್ಟಿನಲ್ಲಿ ಯೋಚನೆ ಮಾಡಿ ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು. ನಮ್ಮ ಸಂಸ್ಥೆಯಲ್ಲಿ ಒಳ್ಳೆಯ ಪ್ರಾಂಶುಪಾಲರು ಮತ್ತು ಉತ್ತಮ ಅಧ್ಯಾಪಕರು ಇದ್ದಾರೆ ಎಂದು ಶ್ಲಾಘಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಸದಸ್ಯರಾದ ಕೃಷ್ಣಸ್ವಾಮಿ, ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷರಾದ ಡಬ್ಲ್ಯೂ ಡಿ.ಅಶೋಕ್, ಶಾಂತಕುಮಾರಿ, ಚಿಕ್ಕಮಗಳೂರು ಕಾಲೇಜಿನ ಪ್ರಾಂಶುಪಾಲರಾದ ಡಾ.ಪ್ರಕಾಶ್ ರಾವ್ , ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲರಾದ ಡಾ.ಜಗದೀಶ ಜಿ.ಟಿ. ಕಾರ್ಯಕ್ರಮದ ಸಂಚಾಲಕರಾದ ಪ್ರೊ.ನಳಿನ, ಪ್ರೊ.ಮಾನಸ, ಪ್ರೊ ಜ್ಯೋತಿ ಹಾಗೂ ಅಧ್ಯಾಪಕರು ವಿದ್ಯಾರ್ಥಿಗಳು ಭಾಗವಹಿಸಿದ್ದರು.

ವಾಣಿ
03 Oct 2023 - Page 1

# 'ಗಾಂಧೀಜಿ ಅವರಷ್ಟು ಸರಳ ಜೀವನ ನಡೆಸಿದ ವ್ಯಕ್ತಿ ಯಾರು ಇಲ್ಲ'

ಬೆಂಗಳೂರು

ಮಹಾತ್ಮಾ ಗಾಂಧೀಜಿ ಅವರಷ್ಟು ಸರಳ ಜೀವನವನ್ನು ಅಳವಡಿಸಿಕೊಂಡು ಬದುಕು ನಡೆಸಿದವರು ಭಾರತ ದೇಶದಲ್ಲೇ ಯಾರು ಇಲ್ಲ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಅಭಿಪ್ರಾಯಪಟ್ಟರು.

ಅವರು ಇಂದು ಗಾಂಧಿ ಭವನದ ಮಹಾದೇವ ದೇಸಾಯಿ ಸಭಾಂಗಣದಲ್ಲಿ ಏರ್ಪಡಿಸಿದ್ದ ಮಹಾತ್ಮ ಗಾಂಧೀಜಿ ಅವರ ಜನ್ಮ ದಿನಾಚರಣೆಯನ್ನು ಉದ್ಘಾಟಿಸಿ ಮಾತನಾಡಿ, ಗಾಂಧೀಜಿ ಅವರು ಹೇಳಿದಂತೆ ನಡೆದವರು. ನಾವೆಲ್ಲರೂ ಅವರಂತೆಯೇ ನಡೆಯಲು ಸಾಧ್ಯವಾಗದಿದ್ದರೂ ಅಲ್ಪ ಸ್ವಲ್ಪವಾದರೂ ಅವರ ದಾರಿಯಲ್ಲಿ ಸಾಗಲು ಪ್ರಯತ್ನ ಮಾಡಬೇಕು. ಆಗಲೇ ನಾವುಗಳು ಅವರಿಗೆ ಗೌರವ ಸಲ್ಲಿಸಿದಂತೆ ಎಂದು ತಿಳಿಸಿದರು.

ದಕ್ಷಿಣ ಆಫ್ರಿಕಾಗೆ ವಕೀಲಿ ವೃತ್ತಿ ಮಾಡಲು ಹೋದ ಗಾಂಧೀಜಿ ಅವರು ಅಲ್ಲಿಯೂ ಕೂಡ ಅಸಮಾನತೆ ವಿರುದ್ಧ ಹೋರಾಟ ಮಾಡಿ ಸೆರೆಮನೆ ವಾಸ ಅನುಭವಿಸಿದರು. ಗೋಪಾಲಕೃಷ್ಣ ಗೋಖಲೆ ಅವರು ಬ್ರಿಟೀಷರಿಂದ ಭಾರತದೇಶವನ್ನು ಬಿಡುಗಡೆಗೊಳಿಸುವ ಹೋರಾಟದ ನಾಯಕತ್ವವನ್ನು ವಹಿಸಿಕೊಳ್ಳುವಂತೆ ಹೇಳಿ ಗಾಂಧಿ ಅವರನ್ನು ಭಾರತಕ್ಕೆ ಕರೆಸಿಕೊಂಡರು. ಗೋಖಲೆ ಅವರ ಅಣತಿಯಂತೆ ಸ್ವಾತಂತ್ರ್ಯ ಹೋರಾಟದ ನಾಯಕತ್ವವನ್ನು ವಹಿಸಿಕೊಂಡ ಗಾಂಧಿ ಅವರು ಅಹಿಂಸಾ ಮಾರ್ಗದಲ್ಲಿ ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಗಾಂಧೀಜಿ ಅವರು ಸ್ವಾತಂತ್ರ್ಯ ಹೋರಾಟದ ನಾಯಕತ್ವವನ್ನು ವಹಿಸದೇ ಇದ್ದಿದ್ದರೆ ನಾವು ಬ್ರಿಟೀಷರ ಗುಲಾಮಗಿರಿಯಿಂದ ಹೊರಗೆ ಬರಲು ಸಾಧ್ಯವಾಗುತ್ತಿರಲಿಲ್ಲ ಎಂದು ಮುಖ್ಯಮಂತ್ರಿಗಳು ಅಭಿಪ್ರಾಯಪಟ್ಟರು.

ಹಳ್ಳಿಗಳು ಉದ್ಧಾರವಾದರೆ ಮಾತ್ರ ದೇಶ ಉದ್ಧಾರವಾಗಲಿದೆ ಎಂಬ ಗಾಂಧಿ ಅವರ ಆಶಯ ದೇಶಕ್ಕೆ ಸ್ವಾತಂತ್ರ್ಯ ಬಂದು 76 ವರ್ಷ ಕಳೆದರೂ ಕೂಡ ಸಾಧ್ಯವಾಗಿಲ್ಲ. ಆಗಿನ ಕಾಲದಲ್ಲಿ ಇಷ್ಟು ತಂತ್ರಜ್ಞಾನ ಅಭಿವೃದ್ಧಿಯಾಗದಿದ್ದರೂ ಕೂಡ ಗಾಂಧೀಜಿ ಅವರು ಮಾಡಿದ ಭಾಷಣ ದೇಶದ ಮೂಲೆ ಮೂಲೆಗೂ ತಲುಪುತಿತ್ತು. ಇದು ಜನರು ಅವರ ಭಾಷಣ ಕೇಳಲು ಎಷ್ಟು ಉತ್ಸುಕರಾಗಿದ್ದರು ಎಂಬುದನ್ನು ತಿಳಿಸುತ್ತದೆ. ಸತ್ಯ ಅಹಿಂಸಾ ಮಾರ್ಗದಲ್ಲಿ ನಡೆದ ಗಾಂಧಿ ಅವರ ಮಾರ್ಗದಲ್ಲಿ ನಾವೆಲ್ಲರೂ ನಡೆಯಬೇಕು. ನಮ್ಮ ಸರ್ಕಾರ ಕೂಡ ಗಾಂಧೀಜಿ ಅವರ ಚಿಂತನೆಯಡಿಯಲ್ಲಿಯೇ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ ಎಂದರು.

ಇದೇ ದಿನ ಮತ್ತೊಬ್ಬ ಸ್ವಾತಂತ್ರ್ಯ ಹೋರಾಟಗಾರರಾದ ಲಾಲ್ ಬಹದ್ದೂರ್ ಶಾಸ್ತ್ರಿ ಅವರ ಜನ್ಮ ದಿನ ಎಂದು ಲಾಲ್ ಬಹದ್ದೂರ್ ಶಾಸ್ತ್ರಿ ಅವರನ್ನು ನೆನೆದ ಮುಖ್ಯಮಂತ್ರಿ ಅವರು, ಶಾಸ್ತ್ರಿ ಅವರು ಗಾಂಧಿ ಅವರ ಅನುಯಾಯಿಯಾಗಿದ್ದರು. ಅವರು ದೇಶ ಕಂಡ ಒಬ್ಬ ಪ್ರಾಮಾಣಿಕ ರಾಜಕಾರಣಿ. ಅವರು ಬಿಟ್ಟು ಹೋಗಿರುವ ಮೌಲ್ಯಗಳನ್ನು ರಾಜಕಾರಣಿಗಳು ಅಳವಡಿಸಿಕೊಳ್ಳಬೇಕೆಂದರು.

ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಾದ ಹೆಚ್.ಕೆ.ಪಾಟೀಲ್ ಅವರು ಈ ಸಂದರ್ಭದಲ್ಲಿ ಗಾಂಧಿ ಭವನದಲ್ಲಿ ಇರುವ ಗಾಂಧಿ ಕುರಿತ ಪುಸ್ತಕಗಳನ್ನು ಯುವ ಜನರಿಗೆ ಆನ್‌ಲೈನ್‌ನಲ್ಲಿ ಓದುವ ಅವಕಾಶ ಒದಗಿಸಿಕೊಡುವ ನಿಟ್ಟಿನಲ್ಲಿ ಆರಂಭಿಸಲಾಗಿರುವ ಜಾಲತಾಣಕ್ಕೆ ಅವರು ಚಾಲನೆ ನೀಡಿದರು. ಪ್ರಾಸ್ತಾವಿಕ ಭಾಷಣದಲ್ಲಿ ಗಾಂಧೀಜಿ ಅವರ ಕುರಿತು ಸಾಮಾಜಿಕ ಜಾಲತಾಣಗಳಲ್ಲಿ ಅವಹೇಳನಕಾರಿ ಸಂಗತಿಗಳನ್ನು ಹಾಕುತ್ತಿರುವ ಕುರಿತು ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ವ್ಯಕ್ತಪಡಿಸಿದ ವಿಷಾದಕ್ಕೆ ಪ್ರತಿಕ್ರಿಯೆ ನೀಡಿದ ಸಚಿವರಾದ ಹೆಚ್.ಕೆ. ಪಾಟೀಲ್ ಅವರು ದೇಶದ ಮೇಲೆ ಅಭಿಮಾನ ಇಲ್ಲದವರು ಈ ಕೆಲಸ ಮಾಡುತ್ತಾರೆ. ಭಾರತ ಬೇರೆ ಅಲ್ಲ, ಗಾಂಧಿ ಬೇರೆ ಅಲ್ಲ. ಜನರ ಮನಸ್ಸಿನಲ್ಲಿ ಗೊಂದಲ ಹುಟ್ಟುಹಾಕುವ ಮತ್ತು ಗಾಂಧೀಜಿ ಅವರಿಗೆ ಅವಮಾನ ಆಗುವಂತೆ ಪ್ರಚಾರ ಮಾಡುವವರ ವಿರುದ್ಧ ಕಾನೂನು ಕ್ರಮ ಜರುಗಿಸುವ ವಿಚಾರದಲ್ಲಿ ಸರ್ಕಾರ ಚಿಂತಿಸಲಿದೆ ಎಂದು ಹೇಳಿದರು. ಗಾಂಧೀಜಿ ಅವರನ್ನು ಅನುಸರಿಸುವುದು ಕಷ್ಟವೇನು ಇಲ್ಲ. ಸತ್ಯ ಹೇಳುವುದು, ಸರಳವಾಗಿರುವುದು, ಯಾರಿಗೂ ಹಿಂಸೆ ಮಾಡದಿರುವುದು, ಎಲ್ಲರನ್ನೂ ಸಮಾನರಾಗಿ ಕಾಣುವುದು ಇವುಗಳನ್ನು ಎಲ್ಲರೂ ಅನುಸರಿಸಬಹುದು ಎಂದು ಸಚಿವರು ತಿಳಿಸಿದರು.




)))) 2ನೇ ಪುಟಕ್ಕೆ...

ವಾಣಿ
03 Oct 2023 - Page 1

# 'ಮಹಾತ್ಮ ಗಾಂಧೀಜಿಯವರ ವಿಚಾರಧಾರೆ ಎಲ್ಲ ಕಾಲಕ್ಕೂ ಪ್ರಸ್ತುತ'

ಮುಖಪುಟದಿಂದ..

ಅಹಿಂಸಾ ಹಾದಿಯಲ್ಲಿ ನಡೆದು ಸ್ವಾತಂತ್ರ್ಯ ಪಡೆಯಲು ಹೋರಟ ದೇಶವೆಂದರೆ ಭಾರತ. ಗಾಂಧಿಜೀಯವರು ದೊಡ್ಡ ಮಾನವತಾವಾದಿ. ಮನುಷ್ಯ ಮನುಷ್ಯನನ್ನು ಪ್ರೀತಿಸುವ ಸ್ವಾಭಾವವನ್ನು ಬೆಳೆಸಿಕೊಳ್ಳುವ ಮೂಲಕ ಗಾಂಧೀಜಿಯವರಿಗೆ ನಿಜವಾದ ಗೌರವ ಅರ್ಪಿಸಿದಂತಾಗುತ್ತದೆ. ಅವರು ನಡೆದ ದಾರಿಯಲ್ಲಿ ನಡೆಯುವ ಪ್ರಮಾಣಿಕ ಪ್ರಯತ್ನದಿಂದ ನಾವೆಲ್ಲರೂ ಸಂಕಲ್ಪ ಮಾಡಬೇಕು. ಅವರನ್ನು ಮಹಾತ್ಮಾ ಎಂದು ಬಿರುದು ನೀಡಿದವರು ರವೀಂದ್ರನಾಥ ಟ್ಯಾಗೋರ್, ಸುಭಾಷ್ ಚಂದ್ರ ಬೋಸ್ ಅವರು ರಾಷ್ಟ್ರಪಿತ ಎಂದು ಕರೆದರು. ದೇಶದಲ್ಲಿ ಶಾಂತಿ, ಸೌಹಾರ್ದತೆಯನ್ನು ಕಾಪಾಡಲು ಕೊನೆಯವರೆಗೂ ಶ್ರಮಿಸಿದ್ದರು. ಆದರೆ ನಾಥೂರಾಂ ಗೋಡ್ಸೆಯವರ ಮತಾಂಧತೆಯಿಂದ ಅವರು ಅಸುನೀಗಿದರು. ನಾಥೂರಾಂ ಅವರನ್ನು ಪೂಜಿಸುವವರು ಈ ದೇಶದಲ್ಲಿರುವುದು ವಿಷಾದನೀಯ. ಇಂತಹವರ ಬಗ್ಗೆ ನಾವು ಜಾಗೃತರಾಗಿರಬೇಕು ಎಂದರು.

## ಮಹಿಳಾ ಸಬಲೀಕರಣಕ್ಕೆ ಆದ್ಯತೆ:

ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಸ್ವಾವಲಂಬನೆಯಿಂದ ಮಾತ್ರ ದೇಶ ಅಭಿವೃದ್ಧಿಯಾಗಲು ಸಾಧ್ಯ. ನಮ್ಮ ದೇಶಕ್ಕೆ ದೊಡ್ಡ ಕೈಗಾರಿಕೆಗಳ ಬದಲು ಗುಡಿ ಕೈಗಾರಿಕೆಗಳು ಬರಬೇಕು. ಅವರು ಹೇಳಿದ ಪಂಚಾಯತ್ ರಾಜ್ ವ್ಯವಸ್ಥೆಯಂತೆ ಅಧಿಕಾರ ಹಳ್ಳಿಯಿಂದ ದಿಲ್ಲಿಗೆ ಹೋಗಬೇಕೆ ಹೊರತು, ದಿಲ್ಲಿಯಿಂದ ಹಳ್ಳಿಗೆ ಬರಬಾರದು ಎಂದಿದ್ದರು. ಅಧಿಕಾರ ವಿಕೇಂದ್ರೀಕರಣ, ದೇಶ, ರಾಜ್ಯ, ಜಿಲ್ಲೆ, ಹಳ್ಳಿ ನಾಲ್ಕು ಹಂತದಲ್ಲಿ ಅಧಿಕಾರದ ವಿಕೇಂದ್ರೀಕರಣದಿಂದ . ಜನರ ಪಾಲ್ಗೊಳ್ಳುವಿಕೆಯಿಂದ ಜನತಂತ್ರದ ವಿಕೇಂದ್ರೀಕರಣ ಸಾಧ್ಯ. ನಮ್ಮ ಸರ್ಕಾರದ ಜನಪರ ಕಾರ್ಯಕ್ರಮಗಳಿಗೆ ಗಾಂಧೀಜಿವರ ಚಿಂತನೆಗಳೇ ಪ್ರೇರಣೆ. ಮಹಿಳಾ ಸ್ವಾತಂತ್ರ್ಯ ಹಾಗೂ ಸಬಲೀಕರಣದ ಬಗ್ಗೆ ಅಪಾರವಾದ ಬದ್ಧತೆ ಹೊಂದಿದ್ದರು. ಮಹಿಳೆಯವರ ಅಭಿವೃದ್ಧಿಯಿಂದ ನಾಡು, ದೇಶದ ಅಭಿವೃದ್ಧಿ ಸಾಧ್ಯ. ಸರ್ಕಾರ ಮಹಿಳಾ ಸಬಲೀಕರಣಕ್ಕೆ ಆದ್ಯತೆ ನೀಡಿದೆ. ಶಕ್ತಿ ಯೋಜನೆ ಹಾಗೂ ಗೃಹಲಕ್ಷ್ಮಿ ಯೋಜನೆಗಳ ಮೂಲಕ ಮಹಿಳೆಯರ ಆರ್ಥಿಕ ಸಬಲೀಕರಣ ಹಾಗೂ ಅನ್ನಭಾಗ್ಯ ಯೋಜನೆಗೆ ಗಾಂಧಿ ತತ್ವಗಳನ್ನು ಅವಲಂಬಿಸಿವೆ ಎಂದರು.

ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಗಳ ಮಾಧ್ಯಮ ಸಲಹೆಗಾರ ಕೆ.ವಿ. ಪ್ರಭಾಕರ್, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಕಾರ್ಯದರ್ಶಿ ಎನ್. ಜಯರಾಂ, ಇಲಾಖೆ ಆಯುಕ್ತ ಹೇಮಂತ್ ನಿಂಬಾಳ್ಕರ್ ಮತ್ತು ಹಿರಿಯ ಅಧಿಕಾರಿಗಳು ಉಪಸ್ಥಿತರಿದ್ದರು.

ವಾಣಿ

03 Oct 2023 - Page 1



ರಾಜರಾಜೇಶ್ವರಿ ನಗರ ವಿಧಾನಸಭಾ ಕ್ಷೇತ್ರದ ಶಾಸಕ ಮುನಿರತ್ನ ಅವರು ಸೋಮವಾರ ಬೆಂಗಳೂರಿನ ಕೊಟ್ಟಿಗೆಪಾಳ್ಯ ವಾರ್ಡ್ ನಂ.73 ಗಾಂಧಿ ಪಾರ್ಕ್‌ನಲ್ಲಿ ಗಾಂಧಿ ವಾಯು ವಿಹಾರಿ ಕ್ಷೇಮಾಭಿವೃದ್ಧಿ ಸಂಘದ ವತಿಯಿಂದ ಆಯೋಜಿಸಲಾಗಿದ್ದ ಗಾಂಧಿ ಪ್ರತಿಮೆ ಅನಾವರಣ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

# ರಾಷ್ಟ್ರಪಿತ ಕಂಡ ಕನಸು ಇನ್ನೂ ಸಾಕಾರವಾಗಿಲ್ಲ

**ಬೆಂಗಳೂರು:** ಮಹಾತ್ಮ ಗಾಂಧಿ ಅವರು ದೇಶದ ಬಗ್ಗೆ ಕಂಡಿದ್ದ ಕನಸು ಇಂದಿಗೂ ಸಾಕಾರವಾಗಿಲ್ಲ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಬೇಸರ ವ್ಯಕ್ತಪಡಿಸಿದ್ದಾರೆ.

ಗಾಂಧಿ ಭವನದಲ್ಲಿ ಸೋಮವಾರ ಹಲವು ಇಲಾಖೆಗಳ ಸಹಯೋಗದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

**» ಮುಖ್ಯಮಂತ್ರಿ ಸಿದ್ದರಾಮಯ್ಯ ಬೇಸರ**

ಹಳ್ಳಿಗಳ ಸ್ವಾವಲಂಬನೆ, ಉದ್ಧಾರಕ್ಕೆ ಸರಳ ಆರ್ಥಿಕ ನೀತಿಯನ್ನು ಗಾಂಧಿ ತಿಳಿಸಿಕೊಟ್ಟಿದ್ದರು. ಆದರೆ, ಆ ದಾರಿಯಲ್ಲಿ ನಡೆಯುವ ಪ್ರಯತ್ನ ಸಂಪೂರ್ಣವಾಗಿ ಸಾಧ್ಯವಾಗಿಲ್ಲ ಎಂಬ ಸತ್ಯವನ್ನು ಹೇಳಲೇಬೇಕಿದೆ ಎಂದರು.

ಗಾಂಧಿ ಅವರ ಚಿಂತನೆಗಳನ್ನು ಅಳವಡಿಸಿಕೊಳ್ಳುವ ಮೂಲಕ ಅವರನ್ನು ಗೌರವಿಸಬೇಕಿದೆ. ಈ ಹಿನ್ನೆಲೆಯಲ್ಲಿ ನಮ್ಮ ಸರ್ಕಾರ ಗಾಂಧಿ ಅವರ ಚಿಂತನೆಗಳ ಮೇಲೆ ಯೋಜನೆಗಳನ್ನು ರೂಪಿಸಿದೆ ಎಂದು ಹೇಳಿದರು.

ಸ್ವಾತಂತ್ರ್ಯಪೂರ್ವದಲ್ಲಿ ಇಂದಿನಷ್ಟು ಪ್ರಚಾರದ ತಂತ್ರಜ್ಞಾನ ಅಭಿವೃದ್ಧಿಯಾಗಿರಲಿಲ್ಲ. ಆದರೂ ಗಾಂಧಿ ಅವರು ಮಾತನಾಡಿದರೆ ಇಡೀ ದೇಶದ ಮೂಲೆ ಮೂಲೆಗೆ ತಲುಪುತ್ತಿತ್ತು. ಈ ಕಾರಣ ದಿಂದಲೇ ನೆಹರು ಅವರು 'ಗಾಂಧೀಜಿ ಎಲ್ಲಿರುತ್ತಾರೋ ಅದೇ ದೇವಾಲಯ, ತಿರುಗಾಡುವ ಸ್ಥಳವೇ ಪುಣ್ಯಭೂಮಿ' ಎಂದು ಬಣ್ಣಿಸಿದ್ದರು ಎಂದು ಸಿದ್ದರಾಮಯ್ಯ ತಿಳಿಸಿದರು. ಕಾನೂನು ಸಚಿವ ಎಚ್.ಕೆ. ಪಾಟೀಲ್ ಇತರ ಗಣ್ಯರಿದ್ದರು.



ಗಾಂಧಿ ಭವನದಲ್ಲಿ ಗಾಂಧಿ ಪ್ರತಿಮೆಗೆ ಸಿಎಂ ಸಿದ್ದರಾಮಯ್ಯ ಪುಷ್ಪಾರ್ಚನೆ ಮಾಡಿದರು. ಸಚಿವ ಎಚ್.ಕೆ. ಪಾಟೀಲ್, ಶಿಕ್ಷಣತಜ್ಞ ಡಾ.ವೂಡೇ ಪಿ. ಕೃಷ್ಣ ಇತರರಿದ್ದರು.

ಲಾಲ್ ಬಹಾದೂರ್ ಶಾಸ್ತ್ರಿ ಕೂಡ ಸ್ವಾತಂತ್ರ್ಯ ಹೋರಾಟಗಾರರು, ಗಾಂಧೀಜಿ ಅನುಯಾಯಿ, ದೇಶ ಕಂಡ ಪ್ರಾಮಾಣಿಕ ರಾಜಕಾರಣಿ. ಅವರು ಬಿಟ್ಟು ಹೋಗಿರುವ ಮೌಲ್ಯವನ್ನು ಅಳವಡಿಸಿಕೊಳ್ಳಲು ಪ್ರಯತ್ನ ಮಾಡಿದರೆ ಅವರಿಗೆ ಗೌರವ ಸಲ್ಲಿಸಿದಂತಾಗುತ್ತದೆ.

| ಸಿದ್ದರಾಮಯ್ಯ
ಮುಖ್ಯಮಂತ್ರಿ

## ಅವಹೇಳನಕಾರರ ವಿರುದ್ಧ ಕ್ರಮಕ್ಕೆ ಒತ್ತಾಯ

ಗಾಂಧಿ ಕುರಿತು ಸಾಮಾಜಿಕ ತಾಣಗಳಲ್ಲಿ ಕೆಲವು ಕುತಂತ್ರಿಗಳು ಅವಹೇಳನ ಮಾಡುತ್ತಿದ್ದಾರೆ. ಇಂತಹವರ ಮೇಲೆ ಸರ್ಕಾರ ಕಠಿಣ ಕ್ರಮ ಕೈಗೊಳ್ಳಬೇಕು ಎಂದು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಸರ್ಕಾರವನ್ನು ಒತ್ತಾಯಿಸಿದರು. ಹಿಂದಿನ ಬಾರಿ ಸಿದ್ದರಾಮಯ್ಯ ಅವರು ಸಿಎಂ ಆಗಿದ್ದ ಅವಧಿಯಲ್ಲಿ ನೀಡಿದ್ದ ಭರವಸೆಯಂತೆ ಪ್ರತಿ ಜಿಲ್ಲೆಗಳಲ್ಲಿ ಗಾಂಧಿ ಭವನ ನಿರ್ಮಾಣ ಕಾರ್ಯ ನಡೆಯುತ್ತಿದೆ. ಸದ್ಯ 24 ಜಿಲ್ಲೆಗಳಲ್ಲಿ ಪೂರ್ಣಗೊಂಡಿದ್ದು, ಉಳಿದ 7 ಜಿಲ್ಲೆಗಳಲ್ಲಿ ಭವನ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಬೇಕು ಎಂದು ಮನವಿ ಮಾಡಿದರು.

ಕನ್ನಡಪ್ರಭ
ಮಂಗಳವಾರ 3.10.2023

# ಗಾಂಧೀಜಿ ಚಿಂತನೆಯಂತೆ ನಮ್ಮ ಸರ್ಕಾರ: ಸಿಎಂ

## ಸರಳ ಆರ್ಥಿಕ ನೀತಿ ರೂಪಿಸಿದ್ದ ಗಾಂಧೀಜಿ । ಸರ್ಕಾರದಿಂದ ಆಯೋಜಿಸಿದ್ದ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಹೇಳಿಕೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮಹಾತ್ಮ ಗಾಂಧೀಜಿ ಅವರ ಚಿಂತನೆಗಳನ್ನು ಆಧಾರವಾಗಿಟ್ಟುಕೊಂಡು ರಾಜ್ಯ ಸರ್ಕಾರ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುತ್ತಿದೆ. ಆ ಮೂಲಕ ಮಹಾತ್ಮ ಗಾಂಧಿ ಅವರ ಚಿಂತನೆಗಳಿಗೆ ಗೌರವ ನೀಡುವ ಕೆಲಸ ಮಾಡಲಾಗುತ್ತಿದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಗಾಂಧಿ ಸ್ಮಾರಕ ನಿಧಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸೇರಿದಂತೆ ಇನ್ನಿತರ ಇಲಾಖೆ, ಸಂಸ್ಥೆಗಳ ಸಹಯೋಗದಲ್ಲಿ ಸೋಮವಾರ ಗಾಂಧಿ ಭವನದಲ್ಲಿ ಏರ್ಪಡಿಸಲಾಗಿದ್ದ ಮಹಾತ್ಮ ಗಾಂಧಿ ಜಯಂತಿ ಕಾರ್ಯಕ್ರಮದಲ್ಲಿ ಮಾತನಾಡಿದರು.

ಮಹಾತ್ಮ ಗಾಂಧಿ ಅವರು ಹಳ್ಳಿಗಳ ಅಭಿವೃದ್ಧಿಯಿಂದಷ್ಟೇ ದೇಶದ ಅಭಿವೃದ್ಧಿ ಸಾಧ್ಯ ಎಂದು ಬಲವಾಗಿ ನಂಬಿದ್ದರು. ಅದಕ್ಕಾಗಿಯೇ ದೇಶಕ್ಕಾಗಿ ಸರಳ ಆರ್ಥಿಕ ನೀತಿಯನ್ನು ಅವರು ಪ್ರತಿಪಾದಿಸಿ, ಹಳ್ಳಿಗಳ ಬೆಳವಣಿಗೆ ಬಗ್ಗೆ ತಿಳಿಸಿದ್ದರು. ಮಹಾತ್ಮ ಗಾಂಧೀಜಿ ಅವರು ಹಾಕಿಕೊಟ್ಟ ಮಾರ್ಗ ಹಾಗೂ ಅವರ ಚಿಂತನೆಯಂತೆ ಈಗ ರಾಜ್ಯ ಸರ್ಕಾರ ಕೆಲಸ ಮಾಡುತ್ತಿದೆ. ರಾಜ್ಯದ ಎಲ್ಲ ವಲಯ, ಪ್ರದೇಶ ಅಭಿವೃದ್ಧಿ ಆಗುವಂತಹ ಕಾರ್ಯವನ್ನು ಮಾಡುತ್ತಿದೆ. ಸರ್ಕಾರದ ಕಾರ್ಯಕ್ರಮಗಳು ಗಾಂಧೀಜಿ ಅವರ ಚಿಂತನೆಯಂತೆಯೇ ರೂಪಿಸಿ; ಅನುಷ್ಠಾನಗೊಳಿಸಲಾಗುತ್ತಿದೆ. ಆ ಮೂಲಕ ಮಹಾತ್ಮ ಗಾಂಧಿಗೆ ಗೌರವ ಸೂಚಿಸಲಾಗುತ್ತಿದೆ ಎಂದರು.



ನಗರದ ಗಾಂಧಿಭವನದಲ್ಲಿ ನಡೆದ ಮಹಾತ್ಮ ಗಾಂಧಿ ಜಯಂತಿ ಕಾರ್ಯಕ್ರಮಕ್ಕೆ ಸಿಎಂ ಸಿದ್ದರಾಮಯ್ಯ ಚಾಲನೆ ನೀಡಿದರು. ಈ ವೇಳೆ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ.ಪಾಟೀಲ್ ಇದ್ದರು.

ಗಾಂಧೀಜಿ ಅವರ ಜೀವನಶೈಲಿ, ಚಿಂತನೆಗಳಿಂದಾಗಿ ರವೀಂದ್ರನಾಥ ಟಾಗೋರ್ ಅವರು ಗಾಂಧಿ ಅವರನ್ನು ಮಹಾತ್ಮ ಎಂದು ಕರೆದರೆ, ಸುಭಾಷಚಂದ್ರ ಬೋಸ್ ಅವರು ರಾಷ್ಟ್ರಪಿತ ಎಂದು ಸಂಬೋಧಿಸಿದ್ದರು. ದೇಶಕ್ಕೆ ಸ್ವಾತಂತ್ರ್ಯ ಬಂದಾಗಲೂ ಅದನ್ನು ಸಂಭ್ರಮಿಸದೆ ದೇಶ ವಿಭಜನೆಯಿಂದ ಉಂಟಾದ ಸಮಸ್ಯೆಗಳನ್ನು ನಿವಾರಿಸುವಲ್ಲಿ ಗಾಂಧೀಜಿ ಮಗ್ನರಾಗಿದ್ದರು. ಹೀಗಾಗಿ ದೇಶಕ್ಕೆ ಗಾಂಧಿ ಮಾತ್ರ ಮಹಾತ್ಮ, ರಾಷ್ಟ್ರಪಿತ ಎಂಬುದನ್ನು ಎಲ್ಲರೂ ತಿಳಿಯಬೇಕು. ಗಾಂಧೀಜಿ ಅವರು ಬದುಕಿದ ರೀತಿಯಲ್ಲಿ ಬದುಕಲು ಸಾಧ್ಯವಾಗದಿದ್ದರೂ, ಅವರ ಚಿಂತನೆ; ಹಾಕಿಕೊಟ್ಟ ದಾರಿಯಲ್ಲಿ ಸಾಗುವಂತಹ ಪ್ರಯತ್ನ ನಾವೆಲ್ಲರೂ ಮಾಡಬೇಕು. ಆ ಮೂಲಕ ಅವರಿಗೆ ಗೌರವ ನೀಡಲು ಪ್ರತಿಯೊಬ್ಬರೂ ಮುಂದಾಗಬೇಕು ಎಂದು ಹೇಳಿದರು.

ಗಾಂಧೀಜಿ ಅವರಂತೆ ದೇಶ ಕಂಡ ಮತ್ತೊಬ್ಬ ಸರಳ ವ್ಯಕ್ತಿತ್ವ ಎಂದರೆ ಮಾಜಿ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಅವರದ್ದು. ದೇಶ ಕಂಡ ಅತ್ಯಂತ ಪ್ರಾಮಾಣಿಕ ರಾಜಕಾರಣಿ. ಅವರು ಬಿಟ್ಟು ಹೋಗಿರುವ ಮೌಲ್ಯಗಳನ್ನು ನಾವೆಲ್ಲರೂ ಅಳವಡಿಸಿಕೊಳ್ಳಬೇಕು. ಆ ಮೂಲಕ ದೇಶದಲ್ಲಿ ಪ್ರಾಮಾಣಿಕತೆ ನೆಲೆ ನಿಲ್ಲುವಂತೆ ಮಾಡಬೇಕು ಎಂದು ಅಭಿಪ್ರಾಯಪಟ್ಟರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ದೇಶಕ್ಕೆ ತಮ್ಮ ಜೀವನವನ್ನೇ ತ್ಯಾಗ ಮಾಡಿದ ಮಹಾತ್ಮ ಗಾಂಧೀಜಿ ಅವರ ಮಹತ್ವವನ್ನು ನಾವೆಲ್ಲರೂ ಅರಿಯಬೇಕು. ಆದರೆ, ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಜಾಲತಾಣಗಳಲ್ಲಿ ಮಹಾತ್ಮ ಗಾಂಧಿ ಕುರಿತಂತೆ ತಪ್ಪು ಮಾಹಿತಿ ಹರಡುತ್ತಾ, ಅವರಿಗೆ ಅವಹೇಳನ ಮಾಡಲಾಗುತ್ತಿದೆ. ಗಾಂಧಿ ಅವರಿಗೆ ಅಪಮಾನ ಮಾಡುವ ಕುತಂತ್ರಿಗಳನ್ನು ಪತ್ತೆ ಶಿಕ್ಷಿಸುವ ಕೆಲಸವನ್ನು ರಾಜ್ಯ ಸರ್ಕಾರ ಮಾಡಬೇಕು ಎಂದರು.

ಕಾರ್ಯಕ್ರಮದಲ್ಲಿ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್, ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ನಸೀರ್ ಅಹಮದ್, ಗಾಂಧಿ ಸ್ಮಾರಕ ನಿಧಿ ಉಪಾಧ್ಯಕ್ಷ ವಿಶು ಕುಮಾರ್ ಸೇರಿದಂತೆ ಇತರರಿದ್ದರು.

ಸಂಯುಕ್ತ ಕರ್ನಾಟಕ

ಮಂಗಳವಾರ 3 ಅಕ್ಟೋಬರ್ 2023

ಬೆಂಗಳೂರು । BENGALURU



# ಸರಳ ಬದುಕಿಗೆ ಗಾಂಧೀಜಿ ಆದರ್ಶ

ಬೆಂಗಳೂರು: ಅತಿ ಸರಳ ರೀತಿಯಲ್ಲಿ ಬದುಕಿ ಎಲ್ಲರಿಗೂ ಆದರ್ಶವಾದವರು ಮಹಾತ್ಮ ಗಾಂಧೀಜಿ ಎಂದು ಮುಖ್ಯಮಂತ್ರಿ ಸಿದ್ಧರಾಮಯ್ಯ ಹೇಳಿದರು.

ನಗರದ ಗಾಂಧಿ ಭವನದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಹಲವು ಇಲಾಖೆ ಸಂಘ, ಸಂಸ್ಥೆಗಳ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ಮಹಾತ್ಮ ಗಾಂಧೀಜಿ ಅವರ ಜನ್ಮ ದಿನಾಚರಣೆಯಲ್ಲಿ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು..

> ಯಾವುದೇ ಪ್ರಚಾರದ ಸಾಮಗ್ರಿ, ತಂತ್ರಜ್ಞಾನ ಇಲ್ಲದೆ ಕೇವಲ ಅಹಿಂಸೆ ಮತ್ತು ತಮ್ಮ ಬದುಕಿನ ಸರಳತೆಯಿಂದಲೇ ಮಹಾತ್ಮ ಗಾಂಧಿ ವಿಶ್ವದ ಮೂಲೆ ಮೂಲೆಗೆ ತಲುಪಿದರು. ದೇಶವಷ್ಟೇ ಅಲ್ಲ, ಪ್ರಪಂಚವೂ ಗಾಂಧಿಯವರ ತತ್ವ, ಆದರ್ಶ, ಮೌಲ್ಯಗಳನ್ನು ಇಂದಿಗೂ ಗೌರವ ಭಾವನೆಯಿಂದ ಕಾಣುತ್ತಾ ಬಂದಿದೆ. ಹಾಗಾಗಿ ದೇಶಕ್ಕೆ ಒಬ್ಬರೇ ಮಹಾತ್ಮ ಹಾಗೂ ಪಿತಾಮಹ ಎಂಬುದನ್ನು ನಾವು ಮರೆಯುವಂತಿಲ್ಲ.
>
> ಸಿದ್ಧರಾಮಯ್ಯ
> ಮುಖ್ಯಮಂತ್ರಿ

ದಕ್ಷಿಣ ಆಫ್ರಿಕಾಗೆ ವಕೀಲಿ ವೃತ್ತಿ ಮಾಡಲು ಹೋದ ಗಾಂಧೀಜಿ ಅಸಮಾನತೆ ವಿರುದ್ಧ ಹೋರಾಟ ಮಾಡಿ ಸೆರೆಮನೆ ವಾಸ ಅನುಭವಿಸಿದರು. ಬ್ರಿಟಿಷರಿಂದ ಭಾರತವನ್ನು ಬಿಡುಗಡೆಗೊಳಿಸುವ ಹೋರಾಟದ ನಾಯಕತ್ವವನ್ನು ವಹಿಸಿಕೊಳ್ಳಲು ಗಾಂಧೀಜಿ ಅವರನ್ನು ಗೋಪಾಲಕೃಷ್ಣ ಗೋಖಲೆ ಭಾರತಕ್ಕೆ ಕರೆಸಿಕೊಂಡರು. ಗೋಖಲೆ ಆಣತಿಯಂತೆ ಸ್ವಾತಂತ್ರ್ಯ ಹೋರಾಟದ ನಾಯಕತ್ವವನ್ನು ವಹಿಸಿಕೊಂಡ ಗಾಂಧಿ, ಅಹಿಂಸಾ ಮಾರ್ಗದಲ್ಲಿ ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಗಾಂಧೀಜಿ ಸ್ವಾತಂತ್ರ್ಯ ಹೋರಾಟದ ನಾಯಕತ್ವವನ್ನು ವಹಿಸದೇ ಇದ್ದಿದ್ದರೆ ನಾವು ಬ್ರಿಟಿಷರ ಗುಲಾಮಗಿರಿಯಿಂದ ಹೊರಗೆ ಬರಲು ಸಾಧ್ಯವಾಗುತ್ತಿರಲಿಲ್ಲ ಎಂದು ಅಭಿಪ್ರಾಯಪಟ್ಟರು.



ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ ಗಾಂಧಿ ಜಯಂತಿಯಲ್ಲಿ ಗಾಂಧೀಜಿಯವರ ಪುತ್ಥಳಿಗೆ ಮುಖ್ಯಮಂತ್ರಿ ಸಿದ್ಧರಾಮಯ್ಯ ಪುಷ್ಪ ನಮನ ಸಲ್ಲಿಸಿದರು. ಕಾನೂನು-ಸಂಸದೀಯ ವ್ಯವಹಾರಗಳ ಸಚಿವ ಹೆಚ್.ಕೆ.ಪಾಟೀಲ್ ಮತ್ತಿತರರಿದ್ದಾರೆ.

ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವ ಹೆಚ್.ಕೆ. ಪಾಟೀಲ್ ಅವರು ಗಾಂಧಿ ಕುರಿತ ಪುಸ್ತಕಗಳನ್ನು ಯುವ ಜನರಿಗೆ ಆನ್‌ಲೈನ್‌ನಲ್ಲಿ ಓದುವ ಅವಕಾಶ ಒದಗಿಸಿಕೊಡುವ ನಿಟ್ಟಿನಲ್ಲಿ ಆರಂಭಿಸಲಾಗಿರುವ ಜಾಲತಾಣಕ್ಕೆ ಚಾಲನೆ ನೀಡಿದರು. ಗಾಂಧೀಜಿ ಅವರಿಗೆ ಅವಮಾನ ಆಗುವಂತೆ ಪ್ರಚಾರ ಮಾಡುವವರ ವಿರುದ್ಧ ಕಾನೂನು ಕ್ರಮ ಜರುಗಿಸುವ ವಿಚಾರದಲ್ಲಿ ಸರ್ಕಾರ ಚಿಂತಿಸಲಿದೆ ಎಂದವರು ಹೇಳಿದರು. ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಅಮೆರಿಕದ ಕಾರ್ಲ್ ಮಲಾಮಡ್, ನವದೆಹಲಿ ಲಾರೆನ್ಸ್ ಲಿಯಾಂಗ್ ಹಾಗೂ ಇತರರು ಉಪಸ್ಥಿತರಿದ್ದರು.

### ಗಾಂಧಿ ಮಾರ್ಗ ಅನುಸರಿಸಲು ಸಿಎಂ ಸಿದ್ದರಾಮಯ್ಯ ಕರೆ | ಸದ್ಭಾವನಾ ಯಾತ್ರೆಯಲ್ಲಿ ಹಲವರು ಭಾಗಿ

# ನಗರದೆಲ್ಲೆಡೆ ಬಾಪೂ, ಶಾಸ್ತ್ರೀಜಿ, ಸ್ಮರಣೆ

■ **ವಿಕ ಸುದ್ದಿಲೋಕ** ಬೆಂಗಳೂರು

ವಿಶ್ವಕ್ಕೆ ಶಾಂತಿ ಮಂತ್ರ ಬೋಧಿಸಿದ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ 154ನೇ ಹಾಗೂ ದೇಶ ಕಂಡ ಅಪ್ರತಿಮ ನಾಯಕ ಲಾಲ್ ಬಹದ್ದೂರ್ ಶಾಸ್ತ್ರಿಯವರ 119ನೇ ಜಯಂತಿಯನ್ನು ನಗರದಲ್ಲಿ ಸೋಮವಾರ ಅರ್ಥಪೂರ್ಣವಾಗಿ ಆಚರಿಸಲಾಯಿತು. ಶಾಲಾ-ಕಾಲೇಜುಗಳು, ಸಂಘ-ಸಂಸ್ಥೆ, ವಿವಿಧ ಇಲಾಖೆಗಳಲ್ಲಿ ಗಾಂಧೀಜಿ ಲಾಲ್ ಬಹದ್ದೂರ್ ಶಾಸ್ತ್ರಿ ಜಪ ಜೋರಾಗಿತ್ತು.

**ಗಾಂಧಿ ಕುರಿತ ಪುಸ್ತಕಗಳ ಜಾಲತಾಣಕ್ಕೆ ಚಾಲನೆ**

ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ವಿಧಾನಸೌಧ ಹಾಗೂ ವಿಕಾಸಸೌಧದ ನಡುವೆ ಇರುವ ಮಹಾತ್ಮ ಗಾಂಧಿ ಪ್ರತಿಮೆಗೆ ಮಾಲಾರ್ಪಣೆ ಮಾಡುವ ಮೂಲಕ ಗೌರವ ನಮನ ಸಲ್ಲಿಸಿದರು. ಸಮಾಜ ಕಲ್ಯಾಣ ಸಚಿವ ಎಚ್.ಸಿ. ಮಹದೇವಪ್ಪ, ಮುಖ್ಯಮಂತ್ರಿಗಳ ರಾಜಕೀಯ ಕಾರ್ಯದರ್ಶಿ ನಸೀರ್ ಅಹಮದ್, ಮುಖ್ಯ ಕಾರ್ಯದರ್ಶಿ ವಂದಿತಾ ಶರ್ಮ ಉಪಸ್ಥಿತರಿದ್ದರು.



ಸಿಎಂ ಸಿದ್ದರಾಮಯ್ಯ ಅವರು ಗಾಂಧಿ ಭವನದಲ್ಲಿ ಬಾಪೂಜಿ ಪುತ್ಥಳಿಗೆ ಪುಷ್ಪಾರ್ಚನೆ ಮಾಡಿದರು.

ಗಾಂಧಿ ಜಯಂತಿ ಅಂಗವಾಗಿ ಹಮ್ಮಿಕೊಂಡಿದ್ದ ಸದ್ಭಾವನಾ ಯಾತ್ರೆಗೆ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಎನ್‌ಎಸ್‌ಎಸ್‌ನ ಅಧಿಕಾರಿ ಪ್ರತಾಪ್ ಲಿಂಗಯ್ಯ ಬೆಳಗ್ಗೆ 9.30ಕ್ಕೆ ಆನಂದರಾವ್ ವೃತ್ತದ ಬಳಿಯ ಗಾಂಧಿ ಪ್ರತಿಮೆಗೆ ಪುಷ್ಪಾರ್ಚನೆ ಮಾಡಿ, ಚಾಲನೆ ನೀಡಿದರು. ಯಾತ್ರೆಯಲ್ಲಿ ಎನ್. ಆರ್. ವಿಶುಕುಮಾರ್, ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಸೇರಿ ಅನೇಕ ಗಣ್ಯರು, ಕಾಲೇಜಿನ ವಿದ್ಯಾರ್ಥಿಗಳು ಗಾಂಧೀಜಿಯವರ ಸಂದೇಶ ಇರುವ ಫಲಕಗಳನ್ನು ಹಿಡಿದು ಗಾಂಧಿ ಸ್ಮಾರಕ ಭವನದವರೆಗೂ ಸಾಗಿದರು.

ನಂತರ ಗಾಂಧಿ ಭವನದ ಮಹಾದೇವ ದೇಸಾಯಿ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಜಯಂತಿ ಕಾರ್ಯಕ್ರಮ ಉದ್ಘಾಟಿಸಿದ ಸಿಎಂ ಸಿದ್ದರಾಮಯ್ಯ, ''ಭಾರತದಲ್ಲಿ ಮಹಾತ್ಮ ಗಾಂಧೀಜಿಯವರಷ್ಟು ಸರಳ ಜೀವನ ಅಳವಡಿಸಿಕೊಂಡು ಬದುಕು ಸಾಗಿಸಿದವರು ಮತ್ತೊಬ್ಬರಿಲ್ಲ,'' ಎಂದು ಅಭಿಪ್ರಾಯಪಟ್ಟರು. ''ಗಾಂಧೀಜಿ ನುಡಿದಂತೆ ನಡೆದವರು. ನಾವೆಲ್ಲ ಅವರಂತೆ ಆಗದಿದ್ದರೂ ಸ್ವಲ್ಪಮಟ್ಟಿಗಾದರೂ ಅವರ ದಾರಿಯಲ್ಲಿ ಸಾಗಿ ಅವರಿಗೆ ಗೌರವ ಸಲ್ಲಿಸಬೇಕು,'' ಎಂದರು.

''ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಲಾಲ್ ಬಹದ್ದೂರ್ ಶಾಸ್ತ್ರಿ, ದೇಶ ಕಂಡ ಒಬ್ಬ ಪ್ರಾಮಾಣಿಕ ರಾಜಕಾರಣಿ. ರಾಜಕಾರಣಿಗಳು ಅವರ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕು,'' ಎಂದರು.

ಇದೇ ವೇಳೆ ಯುವ ಜನರಿಗೆ ಗಾಂಧಿ ಕುರಿತು ಪುಸ್ತಕಗಳನ್ನು ಓದುವ ಅವಕಾಶ ಒದಗಿಸಲು ಆರಂಭಿಸಲಾದ ಜಾಲತಾಣಕ್ಕೆ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್ ಚಾಲನೆ ನೀಡಿದರು.

ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಅಮೆರಿಕದ ಪಬ್ಲಿಕ್ ರಿಸೋರ್ಸ್‌ನ ಸಂಸ್ಥಾಪಕ ಅಧ್ಯಕ್ಷ ಕಾರ್ಲ್ ಮಲಾಮಡ್, ಹೊಸದಿಲ್ಲಿಯ ಡಾ.ಬಿ.ಆರ್. ಅಂಬೇಡ್ಕರ್ ವಿಶ್ವವಿದ್ಯಾಲಯದ ಡೀನ್ ಲಾರೆನ್ಸ್ ಲಿಯಾಂಗ್, ಶಶಿಕೃಷ್ಣ, ಎಚ್.ಬಿ. ಉಪಸ್ಥಿತರಿದ್ದರು.

ಪ್ರಜಾವಾಣಿ

ಮಂಗಳವಾರ • ಅಕ್ಟೋಬರ್ 3, 2023

## ಪುಸ್ತಕಗಳ ಜಾಲತಾಣಕ್ಕೆ ಸಚಿವ ಎಚ್‌.ಕೆ. ಪಾಟೀಲ ಚಾಲನೆ

# 'ಅಹಿಂಸೆಯಿಂದ ವಿಶ್ವವ್ಯಾಪಿಸಿದ ಗಾಂಧೀಜಿ'

ಪ್ರಜಾವಾಣಿ ವಾರ್ತೆ

**ಬೆಂಗಳೂರು:** ಸರಳ ಜೀವನ, ಸತ್ಯ ಮತ್ತು ಅಹಿಂಸೆ ಮಾರ್ಗದ ಮೂಲಕ ವಿಶ್ವದ ಮೂಲೆ ಮೂಲೆ ತಲುಪಿದವರು ಮಹಾತ್ಮ ಗಾಂಧೀಜಿ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಬಣ್ಣಿಸಿದರು.

ಗಾಂಧಿಭವನದಲ್ಲಿ ನಡೆದ ಗಾಂಧಿ ಜಯಂತಿ ಉದ್ಘಾಟಿಸಿ ಅವರು ಮಾತನಾಡಿ, 'ದೇಶಕ್ಕೆ ಗಾಂಧಿ ಒಬ್ಬರೇ ಮಹಾತ್ಮ ಮತ್ತು ಪಿತಾಮಹ. ಯಾವುದೇ ಪ್ರಚಾರದ ಸಾಮಗ್ರಿ,



**ಗಾಂಧೀಜಿ ಬಗ್ಗೆ ಜನರ ಮನಸ್ಸಲ್ಲಿ ಗೊಂದಲ ಹುಟ್ಟು ಹಾಕುವರ ಮತ್ತು ಅವರನ್ನು ಅವಮಾನಿಸುವವರ ವಿರುದ್ಧ ಕ್ರಮ ಜರುಗಿಸಲು ಸರ್ಕಾರ ಚಿಂತನೆ ನಡೆಸಿದೆ**

**ಎಚ್‌.ಕೆ. ಪಾಟೀಲ,** ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವ

ತಂತ್ರಜ್ಞಾನ ಇಲ್ಲದೆಯೇ ಜನರ ಮನಸ್ಸುಗಳನ್ನು ಮುಟ್ಟಿದ್ದರು' ಎಂದು ನೆನಪು ಮಾಡಿಕೊಂಡರು.

ನುಡಿದಂತೆ ನಡೆದವರು ಗಾಂಧೀಜಿ. ಅವರ ದಾರಿಯಲ್ಲಿ ಸ್ವಲ್ಪವಾದರೂ ನಾವು ಸಾಗಲು ಪ್ರಯತ್ನಿಸಬೇಕು. ಅದೇ ಗಾಂಧೀಜಿಗೆ ಸಲ್ಲಿಸುವ ಗೌರವ ಎಂದರು.

ಗಾಂಧಿ ಭವನದಲ್ಲಿ ಇರುವ ಗಾಂಧಿ ಕುರಿತ ಪುಸ್ತಕಗಳನ್ನು ಯುವ ಜನರಿಗೆ ಆನ್‌ಲೈನ್‌ನಲ್ಲಿ ಓದುವ ಅವಕಾಶ ಒದಗಿಸಿಕೊಡುವ ನಿಟ್ಟಿನಲ್ಲಿ ಆರಂಭಿಸಲಾಗಿರುವ ಜಾಲತಾಣಕ್ಕೆ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವ ಎಚ್‌.ಕೆ. ಪಾಟೀಲ ಚಾಲನೆ ನೀಡಿದರು.

ಕನ್ನಡ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಎಂ ಮುರಿಗೆಪ್ಪ ಅವರ 'ಅಹಿಂಸಾ ಪ್ರತಿಪಾದಕ ಹುತಾತ್ಮ ಮೈಲಾರ ಮಹಾದೇವ' ಕೃತಿಗೆ ಜಯಲಕ್ಷ್ಮಿ ಶ್ರೀನಿವಾಸಯ್ಯ ದತ್ತಿ ಸಾಹಿತ್ಯ ಪುರಸ್ಕಾರವನ್ನು ನೀಡಿ ಗೌರವಿಸಲಾಯಿತು. ಸ್ವಾತಂತ್ರ್ಯ ಹೋರಾಟಗಾರರಾದ ಕೆ.ಸಿ. ನಾರಾಯಣಪ್ಪ, ಎಸ್‌.ವಿ.ಟಿ. ಗುಪ್ತ, ಎಚ್‌.ಎಸ್‌. ಹನುಮಂತರಾವ್ ಮತ್ತು ರಘುನಾಥ್ ರಾವ್ ಎನ್‌. ಅವರುಗಳನ್ನು ಸನ್ಮಾನಿಸಲಾಯಿತು. ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ ಪ್ರಾಸ್ತಾವಿಕವಾಗಿ ಮಾತನಾಡಿದರು.

ಉದಯವಾಣಿ ಬೆಂಗಳೂರು ಮಂಗಳವಾರ, ಅಕ್ಟೋಬರ್ 3, 2023

# ಗಾಂಧಿಗೆ ಅವಹೇಳನ ಮಾಡಲು ಸರ್ಕಾರ ಬಿಡಲ್ಲ

## ಕಟ್ಟ ಕಡೆಯ ವ್ಯಕ್ತಿಗೂ ಬದುಕುವ ಅವಕಾಶ ಸೃಷ್ಟಿಸುವುದು ನಮ್ಮ ಗುರಿ: ಸಿದ್ದರಾಮಯ್ಯ

**ಬೆಂಗಳೂರು:** ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರಿಗೆ ಅವಹೇಳನ ಮಾಡಲು ಸರ್ಕಾರ ಬಿಡುವುದಿಲ್ಲ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇನ್ನಿತರ ಸಂಘ ಸಂಸ್ಥೆಯ ಆಶ್ರಯದಲ್ಲಿ ಸೋಮವಾರ ಗಾಂಧಿ ಭವನದಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಷ್ಟ್ರಪಿತನ ಜಯಂತಿಯಲ್ಲಿ ಮಾತನಾಡಿದರು.

ನಮ್ಮ ಸರ್ಕಾರ ರೂಪಿಸುತ್ತಿರುವ ಕಾರ್ಯಕ್ರಮಗಳಲ್ಲಿ ಗಾಂಧೀಜಿ ಅವರ ಆಶಯಗಳು ಸೇರಿವೆ. ಅದರಂತೆ ಕಟ್ಟ ಕಡೆಯ ವ್ಯಕ್ತಿಗೂ ಬದುಕುವ ಅವಕಾಶಗಳನ್ನು ಸೃಷ್ಟಿಸುವುದು ನಮ್ಮ ಸರ್ಕಾರದ ಗುರಿಯಾಗಿದೆ. ಹಳ್ಳಿಗಳು ಉದ್ಧಾರವಾದರೆ ದೇಶದ ಪ್ರಗತಿ ಸಾಧ್ಯ ಎಂದು ಗಾಂಧೀಜಿ ಹೇಳುತ್ತಿದ್ದರು. ಅವರ ಚಿಂತೆಯಂತೆ ಸರ್ಕಾರ ನಡೆಯಲಿದೆ ಎಂದು ನುಡಿದರು.

ಒಮ್ಮೆ ರೈಲಿನಲ್ಲಿ ಮೂರನೇ ದರ್ಜೆಯಲ್ಲಿ ಪ್ರಯಾಣಿಸುತ್ತಿದ್ದರು. ಸಹ ಪ್ರಯಾಣಿಕರು 'ಏಕೆ ಮೂರನೇ ದರ್ಜೆ ಸೀಟಿನಲ್ಲಿ ಪ್ರಯಾಣಿಸುತ್ತಿದ್ದೀರಿ' ಎಂದು ಪ್ರಶ್ನಿಸಿದರು. ಇದಕ್ಕೆ ಉತ್ತರಿಸಿದ ಗಾಂಧಿ ಅವರು, 'ನಾಲ್ಕನೇ ದರ್ಜೆ ರೈಲಿನಲ್ಲಿ ಇಲ್ಲ, ಇದ್ದಿದ್ದರೆ ಅಲ್ಲೇ ಪ್ರಯಾಣಿಸುತ್ತಿದ್ದೆ ಎಂದು ಹೇಳಿದ್ದರು. ಅಷ್ಟು ಸರಳವಾದ ವ್ಯಕ್ತಿತ್ವ ಗಾಂಧಿಯವರದ್ದಾಗಿತ್ತು ಎಂದು ಸ್ಮರಿಸಿದರು.



■ ಗಾಂಧಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸಿಎಂ ಸಿದ್ದರಾಮಯ್ಯ ಭಾಗಿ

### ಗಾಂಧಿ ಅವಹೇಳನ: ಕ್ರಮಕ್ಕೆ ಮನವಿ

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಜಾಲತಾಣಗಳಲ್ಲಿ ಕೆಲವರು ಗಾಂಧೀಜಿ ಅವರ ಬಗ್ಗೆ ಅವಹೇಳನ ಮಾಡುತ್ತಿದ್ದಾರೆ. ಅಗೌರವ ತೋರುತ್ತಿದ್ದಾರೆ. ಈ ಬಗ್ಗೆ ಸರ್ಕಾರ ಕ್ರಮ ಕೈಗೊಳ್ಳಬೇಕು ಎಂದು ಮುಖ್ಯಮಂತ್ರಿಗಳಲ್ಲಿ ಮನವಿ ಮಾಡಿದರು. ಗಾಂಧೀಜಿ ಅವರಿಗೆ ಅಗೌರವ ತೋರುವುದು ಸರಿಯಲ್ಲ, ಭಾರತ ಬಿಟ್ಟು ಗಾಂಧೀಜಿ ಇಲ್ಲ, ಗಾಂಧೀಜಿ ಬಿಟ್ಟು ಭಾರತವಿಲ್ಲ, ಜಾಲತಾಣಗಳಲ್ಲಿ ಗಾಂಧೀಜಿ ಅವರಿಗೆ ಮಾಡುತ್ತಿರುವ ಅವಮಾನಗಳನ್ನು ಸಹಿಸಿಕೊಳ್ಳಲಾಗದು ಎಂದು ಹೇಳಿದರು.

**ಶಾಸ್ತ್ರಿ ಅಪ್ರತಿಮ ರಾಜಕಾರಣಿ:** ಅ.2ರಂದು ಗಾಂಧಿ ಜಯಂತಿ ಜತೆಗೆ ಮಾಜಿ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಜನ್ಮದಿನವನ್ನೂ ಆಚರಿಸಲಾಗುತ್ತಿದೆ. ಮಾಜಿ ಪ್ರಧಾನಿ ವಿ.ಲಾಲ್ ಬಹದ್ದೂರ್ ಶಾಸ್ತ್ರಿ ಅವರು ಮಹಾತ್ಮ ಗಾಂಧಿ ಅವರ ಅನುಯಾಯಿ ಕೂಡ ಆಗಿದ್ದರು. ಶಾಸ್ತ್ರಿ ಈ ದೇಶ ಕಂಡ ಅಪ್ರತಿಮ ರಾಜಕಾರಣಿ ಎಂದು ಸಿಎಂ ಬಣ್ಣಿಸಿದರು.

ಕಾನೂನು ಸಚಿವ ಎಚ್.ಕೆ.ಪಾಟೀಲ್, ಅಮೆರಿಕಾದ ಪಬ್ಲಿಕ್ ಸೋರ್ಸ್‌ನ ಅಧ್ಯಕ್ಷ ಕಾರ್ಲ್ ಮಾಲಾಮುಡ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಉಪಾಧ್ಯಕ್ಷ ಎನ್. ಆರ್.ವಿಶುಕುಮಾರ್ ಉಪಸ್ಥಿತರಿದ್ದರು.

ಗಾಂಧೀಜಿ ಅವರು ನಾಯಕತ್ವ ವಹಿಸದಿದ್ದರೆ ಸ್ವಾತಂತ್ರ್ಯ ಸಿಗುತ್ತಿರಲಿಲ್ಲ | 76 ವರ್ಷವಾದರೂ ಗಾಂಧಿ ಕನಸಿನ ಭಾರತ ನಿರ್ಮಾಣವಾಗಿಲ್ಲ

# ಗಾಂಧಿ ವಿರುದ್ಧ ಅವಹೇಳನಕಾರಿ ಹೇಳಿಕೆ ಕೊಟ್ಟರೆ ಕಠಿಣ ಕ್ರಮ

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದ ಮಹಾತ್ಮ ಗಾಂಧೀಜಿ ಅವರ ವಿರುದ್ಧ ಅವಹೇಳನಕ್ಕೆ ನಮ್ಮ ಸರಕಾರ ಅವಕಾಶ ನೀಡುವುದಿಲ್ಲ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಎಚ್ಚರಿಕೆ ನೀಡಿದ್ದಾರೆ.

ಗಾಂಧಿ ಭವನದಲ್ಲಿ ನಡೆದ ಮಹಾತ್ಮ ಗಾಂಧಿ ಜಯಂತಿ ಉದ್ಘಾಟಿಸಿ ಮಾತನಾಡಿ, ಗಾಂಧೀಜಿ ಅವರ ವಿರುದ್ಧ ಅವಹೇಳನಕ್ಕೆ ಸರಕಾರ ಅವಕಾಶ ನೀಡುವುದಿಲ್ಲ. ಒಂದು ವೇಳೆ ಯಾರಾದರೂ ಅವಹೇಳನ ಮಾಡಲು ಮುಂದಾದರೆ, ಅಂತಹವರ ವಿರುದ್ಧ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲಾಗುತ್ತದೆ ಎಂದು ಎಚ್ಚರಿಕೆ ನೀಡಿದರು.

ಗಾಂಧೀಜಿ ಜನ್ಮದಿನ ಆಚರಣೆ ನಮ್ಮೆಲ್ಲರಿಗೂ ಗೌರವದ ಸಂಗತಿ. ಗಾಂಧೀಜಿ ಈ ದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ನಾಯಕತ್ವ ವಹಿಸದಿದ್ದರೆ ನಾವು ಗುಲಾಮಗಿರಿಯಿಂದ ಹೊರಗೆ ಬರಲು ಬಹಳ ಕಷ್ಟವಾಗುತ್ತಿತ್ತು. ಗಾಂಧಿ ವಕೀಲರಾಗಿ ದಕ್ಷಿಣ ಆಫ್ರಿಕಾಗೆ ಹೋದವರು. ಅಲ್ಲಿಯೂ ಕೂಡ ಹೋರಾಟ ಮಾಡಲು ಆರಂಭಿಸಿ ಜೈಲುವಾಸ ಅನುಭವಿಸಿದರು. ಗೋಪಾಲಕೃಷ್ಣ ಗೋಖಲೆ ಅವರ ಆಹ್ವಾನದ ಮೇರೆಗೆ ಭಾರತಕ್ಕೆ ವಾಪಸಾಗಿ, ಬ್ರಿಟೀಷರ ಕಪಿಮುಷ್ಟಿಯಿಂದ ಭಾರತವನ್ನು ಬಿಡುಗಡೆಗೆ ಹೋರಾಟ ಆರಂಭಿಸಿದರು. ಸಮಾಜದ ಎಲ್ಲ ವರ್ಗದ ಜನರನ್ನು ಭೇಟಿ ಮಾಡಿದರು. ಸಮಾಜ, ಜನ ಗೊತ್ತಿರಬೇಕು, ಜನರ ಬದುಕು ಗೊತ್ತಿರಬೇಕು ಎಂದು ದೇಶ ಪ್ರವಾಸ ಮಾಡಿದರು ಎಂದರು.




ಗಾಂಧಿ ಭವನದಲ್ಲಿ ನಡೆದ ಮಹಾತ್ಮ ಗಾಂಧಿ ಜಯಂತಿ ಉದ್ಘಾಟಿಸಿದ ಸಿಎಂ ಸಿದ್ದರಾಮಯ್ಯ ಗಾಂಧೀ ಕುರಿತ ಪುಸ್ತಕ ಪ್ರದರ್ಶಿಸಿದರು. ಸಚಿವ ಎಚ್.ಕೆ.ಪಾಟೀಲ್ ಮತ್ತಿತರರು ಇದ್ದರು.

**ಸರಳ ಜೀವನದ ಪ್ರತೀಕ:** ಗಾಂಧೀಜಿ ಅವರು ಸರಳ ಜೀವನ ಅಳವಡಿಸಿಕೊಂಡಿದ್ದರು. ಅವರಷ್ಟು ಸರಳ ಜೀವನ ಮಾಡಿದವರು ಬೇರೊಬ್ಬರಿಲ್ಲ. ಒಮ್ಮೆ ರೈಲಿನಲ್ಲಿ ಮೂರನೇ ದರ್ಜೆಯಲ್ಲಿ ಪ್ರಯಾಣಿಸುತ್ತಿದ್ದರು. ಸಹ ಪ್ರಯಾಣಿಕರು ಏಕೆ ಮೂರನೇ ದರ್ಜೆ ಸೀಟಿನಲ್ಲಿ ಪ್ರಯಾಣಿಸುತ್ತಿದ್ದೀರಿ ಎಂದು ಪ್ರಶ್ನಿಸಿದರು. ಇದಕ್ಕೆ ಉತ್ತರಿಸಿದ ಗಾಂಧಿ ಅವರು, ನಾಲ್ಕನೇ ದರ್ಜೆ ರೈಲಿನಲ್ಲಿಲ್ಲ. ಇದ್ದಿದ್ದರೆ ಅಲ್ಲೇ ಪ್ರಯಾಣಿಸುತ್ತಿದ್ದೆ. ಅದು ಇಲ್ಲದ್ದರಿಂದ ಮೂರನೇ ದರ್ಜೆಯಲ್ಲಿ ಪ್ರಯಾಣಿಸುತ್ತಿದ್ದೇನೆ ಎಂದರು. ಇಷ್ಟು ಸರಳವಾದ ವ್ಯಕ್ತಿತ್ವ ಗಾಂಧಿಯ ವರದ್ದಾಗಿತ್ತು ಎಂದು ನೆನಪಿಸಿಕೊಂಡರು.

ಗಾಂಧೀಜಿ ಮಾತಿನಂತೆ ನಡೆದುಕೊಳ್ಳುತ್ತಿದ್ದರು. ಬಸವಾದಿ ಶರಣರಂತೆ ನುಡಿದಂತೆ ನಡೆದರು. ಅವರು ಸ್ವಾತಂತ್ರ್ಯ ಪಡೆಯಲು ಬಳಸಿದ ಮಾರ್ಗ ಅಹಿಂಸಾ ಮಾರ್ಗವಾಗಿತ್ತು. ಅಹಿಂಸಾ ಮಾರ್ಗದ ಮೂಲಕ ದೇಶದಲ್ಲಿ ಲಕ್ಷಾಂತರ ಜನರನ್ನು ತಲುಪುತ್ತಿದ್ದರು. ಪ್ರಚಾರದ ತಂತ್ರಜ್ಞಾನಯಿಲ್ಲದಿದ್ದರೂ ದೇಶದ ಮೂಲೆ ಮೂಲೆಗೆ ತಲುಪುವಷ್ಟು ಜನಪ್ರಿಯರಾಗಿದ್ದರು. ಗಾಂಧಿ ಭಾಷಣಕ್ಕೆ ಎಲ್ಲ ಕಡೆಯಿಂದ ಜನರು ಹರಿದುಬರುತ್ತಿದ್ದರು. ಗಾಂಧೀಜಿ ಎಲ್ಲಿ ಇರುತ್ತಾರೋ ಅದೇ ದೇವಾಲಯ. ಅವರು ಎಲ್ಲಿ ತಿರುಗಾಡುತ್ತಾರೋ ಅದೇ ಪುಣ್ಯಭೂಮಿ ಎಂದು ನೆಹರೂ ಹೇಳಿದ್ದರು ಎಂದು ಸ್ಮರಿಸಿದರು.

## ಗಾಂಧಿ ಕಂಡ ಕನಸು ಇನ್ನೂ ನನಸಾಗಿಲ್ಲ

ನಾವೆಲ್ಲಾ ಗಾಂಧಿ ನಡೆದ ದಾರಿಯಲ್ಲಿ ನಡೆಯುವ ಪ್ರಯತ್ನ ಮಾಡಬೇಕು. ಗಾಂಧಿ ಕನಸು ಕಂಡ ದೇಶ ಇನ್ನೂ ನಿರ್ಮಾಣವಾಗಿಲ್ಲ. ಸ್ವಾತಂತ್ರ್ಯ ಬಂದು 76 ವರ್ಷವಾದರೂ ಗಾಂಧಿ ಕನಸಿನ ಭಾರತ ನೋಡಲು ಸಾಧ್ಯವಾಗಿಲ್ಲ. ಹಳ್ಳಿಗಳ ಉದ್ಧಾರವಾಗದೇ ದೇಶದ ಅಭಿವೃದ್ಧಿ ಅಸಾಧ್ಯ ಎಂದಿದ್ದರು. ಗಾಂಧಿ ನಡೆದ ದಾರಿಯಲ್ಲಿ ನಡೆದರೂ ಅದು ಪೂರ್ಣಗೊಂಡಿಲ್ಲ. ಹಾಗಾಗಿ ಗಾಂಧಿ ಕನಸಿನ ಭಾರತ ಇನ್ನೂ ಕಾಣಲು ಆಗಿಲ್ಲ ಎಂದು ವಿಷಾದಿಸಿದರು. ನಮ್ಮ ಸರಕಾರದ ಅನೇಕ ಕಾರ್ಯಕ್ರಮಗಳ ಹಿಂದೆ ಗಾಂಧೀಜಿ ಚಿಂತನೆಯಿದೆ. ನಮ್ಮ ಸರಕಾರ ರೂಪಿಸುತ್ತಿರುವ ಕಾರ್ಯಕ್ರಮಗಳಲ್ಲಿ ಮಹಾತ್ಮಗಾಂಧಿ ಅವರ ಆಶಯಗಳು ಸೇರಿವೆ. ಗಾಂಧಿ ಅವರ ಆಶಯದಂತೆ ಕಟ್ಟ ಕಡೆಯ ವ್ಯಕ್ತಿಗೂ ಬದುಕುವ ಅವಕಾಶಗಳನ್ನು ಸೃಷ್ಟಿಸುವುದು ನಮ್ಮ ಸರಕಾರದ ಗುರಿ ಎಂದರು.

ಗಾಂಧಿ ಸ್ವಾತಂತ್ರ್ಯ ತಂದುಕೊಟ್ಟರು. ಆದರೆ, ಗಾಂಧಿ ಅವರ ಸಂಭ್ರಮ ಅನುಭವಿಸಲಿಲ್ಲ, ನಾವು ಸಂಭ್ರಮಿಸುತ್ತಿದ್ದಾಗ ಗಾಂಧಿ ಬಂಗಾಳದಲ್ಲಿ ಶಾಂತಿಗಾಗಿ ಸತ್ಯಾಗ್ರಹ ಮಾಡುತ್ತಿದ್ದರು. ಠಾಗೋರ್ ಅವರು ಗಾಂಧಿಗೆ ಮಹಾತ್ಮ ಎಂದು ಕರೆದರು. 1944 ರಲ್ಲಿ ಗಾಂಧಿಗೆ ಮಹಾತ್ಮ ಎಂಬ ಬಿರುದು ಬಂತು. ದೇಶಕ್ಕೆ ಇನ್ನೊಬ್ಬ ಮಹಾತ್ಮ ಇಲ್ಲ, ಗಾಂಧಿ ಒಬ್ಬರೇ ಎಂದು ಸುಭಾಷ್ ಚಂದ್ರ ಬೋಸ್ ಗಾಂಧೀಜಿಯನ್ನು ಪಿತಾಮಹ ಎಂದು ಕರೆದಿದ್ದರು

**– ಸಿದ್ದರಾಮಯ್ಯ, ಮುಖ್ಯಮಂತ್ರಿ**

ಸಾಮಾಜಿಕ ಜಾಲತಾಣದಲ್ಲಿ ಮಹಾತ್ಮ ಗಾಂಧೀಜಿಯವರ ಅವಹೇಳನ ಮಾಡಲಾಗುತ್ತಿರುವ ಘಟನೆಗಳು ನಡೆಯುತ್ತಿವೆ. ಇದನ್ನು ಸಹಿಸಲು ಸಾಧ್ಯವಿಲ್ಲ. ಈ ರೀತಿ ಪೋಸ್ಟ್ ಮಾಡುವವರ ವಿರುದ್ಧ ಕ್ರಮ ಜರುಗಿಸಬೇಕು.

**– ಡಾ.ವೂಡೇ ಪಿ.ಕೃಷ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ**

ಪ್ರಜಾ ಪ್ರಗತಿ

Oct 3, 2023

# ಗಾಂಧೀಜಿ ವಿಚಾರಧಾರೆ ಸದಾ ಪ್ರಸ್ತುತ

## ಸರ್ಕಾರದ ಕಾರ್ಯಕ್ರಮಗಳಿಗೆ ಗಾಂಧೀಜಿ ಚಿಂತನೆಗಳೇ ಪ್ರೇರಣೆ: ಸಿಎಂ

■ ಪ್ರಜಾಪ್ರಗತಿ.ಕಾಂ

**ಬೆಂಗಳೂರು:** ಮಹಾತ್ಮ ಗಾಂಧೀಜಿಯವರ ವಿಚಾರಧಾರೆ ಎಲ್ಲ ಕಾಲಕ್ಕೂ ಪ್ರಸ್ತುತ. ಸರ್ಕಾರದ ಜನಪರ ಯೋಜನೆಗಳಿಗೆ ಮಹಾತ್ಮಾ ಗಾಂಧೀಜಿವರ ಚಿಂತನೆಗಳೇ ಪ್ರೇರಣೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ತಿಳಿಸಿದರು.

ಅವರು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ, ಗಾಂಧೀ ಸ್ಮಾರಕ ನಿಧಿ ವತಿಯಿಂದ ಆಯೋಜಿಸಲಾಗಿದ್ದ ರಾಷ್ಟಪಿತ ಮಹಾತ್ಮ ಗಾಂಧಿ ಅವರ ಜನ್ಮ ದಿನಾಚರಣೆಯ ಅಂಗವಾಗಿ ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿ 2023ರ ಪ್ರದಾನ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದರು.

■ ಗಾಂಧಿಜೀಯವರ ತತ್ವಗಳಲ್ಲಿ ಸಂಬಿಕೆಯಿಟ್ಟ ಗರಗ ಕ್ಷೇತ್ರಿಯ ಸೇವಾ ಸಂಘ :

### ಗೋಡ್ಸೆ ಪೂಜಿಸುವವರ ಬಗ್ಗೆ ಜಾಗೃತರಾಗಿರಬೇಕು

ರಾಷ್ಟ್ರಪಿತ ಮಹಾತ್ಮ ಗಾಂಧಿ ಅವರನ್ನು ಹತ್ಯೆ ಮಾಡಿದ ನಾಥೂರಾಂ ಗೋಡ್ಸೆ ಪೂಜಿಸುವವರ ಬಗ್ಗೆ ನಾವು ಜಾಗೃತರಾಗಿರಬೇಕು ಮಹಾತ್ಮ ಗಾಂಧಿ ದೇಶದಲ್ಲಿ ಶಾಂತಿ, ಸೌಹಾರ್ದತೆ ಕಾಪಾಡಲು ಕೊನೆಯವರೆಗೂ ಶ್ರಮಿಸಿದ್ದರು. ಆದರೆ ನಾಥೂರಾಂ ಗೋಡ್ಸೆಯ ಮತಾಂಧತೆಯಿಂದ ಅಸುನೀಗಿದರು. ನಾಥೂರಾಂ ಗೋಡ್ಸೆ ಪೂಜಿಸುವವರು ಈ ದೇಶದಲ್ಲಿರುವುದು ವಿಷಾದನೀಯ. ಇಂತಹವರ ಬಗ್ಗೆ ನಾವು ಜಾಗೃತರಾಗಿರಬೇಕು.

■ ಸಿದ್ದರಾಮಯ್ಯ, ಸಿಎಂ.



### ಗ್ರಾಮ ನ್ಯಾಯಾಲಯಗಳ ಚಿಂತನೆ: ಸಿಎಂ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಬ್ಯಾಂಕ್ವೆಟ್ ಹಾಲ್ ನಲ್ಲಿ ಆಯೋಜಿಸಿದ 2023 ನೇ ಸಾಲಿನ ಗಾಂಧಿ ಗ್ರಾಮ ಪುರಸ್ಕಾರ ಪ್ರಶಸ್ತಿ ಪ್ರದಾನ ಹಾಗೂ ಸ್ವಚ್ಛ ಸರ್ವೇಕ್ಷಣಾ ಗ್ರಾಮೀಣ ರಾಜ್ಯ ಮಟ್ಟದ ಪ್ರಶಸ್ತಿ ವಿತರಣಾ ಕಾರ್ಯಕ್ರಮದಲ್ಲಿ ಮಾತನಾಡಿದ ಸಿಎಂ ಸಿದ್ದರಾಮಯ್ಯ ಗ್ರಾಮಗಳ ವ್ಯಾಜ್ಯಗಳು ಗ್ರಾಮಗಳಲ್ಲೇ ಬಗೆಹರಿಯಬೇಕು ಎನ್ನುವ ಮಹತ್ವಾಕಾಂಕ್ಷೆಯಿಂದ ಗ್ರಾಮ ನ್ಯಾಯಾಲಯಗಳನ್ನು ಸ್ಥಾಪಿಸುವ ಬಗ್ಗೆ ಸರ್ಕಾರ ಗಂಭೀರ ಚಿಂತನೆ ನಡೆಸಿದೆ. ಮಹಾತ್ಮಗಾಂಧಿ ಮತ್ತು ರಾಜೀವ್ ಗಾಂಧಿ ಅವರ ಗ್ರಾಮ ಸ್ವರಾಜ್ಯ ಮತ್ತು ಅಧಿಕಾರ ವಿಕೇಂದ್ರೀಕರಣ ಆಶಯದಂತೆ ಗ್ರಾಮ ನ್ಯಾಯಾಲಯಗಳ ಸ್ಥಾಪನೆಯಾದರೆ ಗ್ರಾಮಸ್ಥರಿಗೆ ಬಹಳ ಅನುಕೂಲ ಆಗುತ್ತದೆ ಎಂದರು.

2014ರಲ್ಲಿ ನಾನು ಮುಖ್ಯಮಂತ್ರಿಯಾಗಿದ್ದಾಗ, ಮಹಾತ್ಮಾ ಗಾಂಧೀಜಿಯವರ ಜಯಂತಿಯಂದು ಗಾಂಧಿ ಪ್ರಶಸ್ತಿಯನ್ನು ನೀಡಲು ತೀರ್ಮಾನಿಸಿ, ಗಾಂಧಿ ಜೀಯವರ ತತ್ವಾದರ್ಶಗಳ ಹಾದಿಯಲ್ಲಿ ನಡೆಯುವ ವ್ಯಕ್ತಿ ಅಥವಾ ಸಂಘಸಂಸ್ಥೆಗಳಿಗೆ ಗಾಂಧಿ ಪ್ರಶಸ್ತಿಯನ್ನು ನೀಡಬೇಕೆಂದು ಆದೇಶ ಹೊರಡಿಸಲಾಯಿತು. ಪ್ರಶಸ್ತಿಗೆ ಅರ್ಹರಾಗುವವರು ಗಾಂಧಿಜೀಯವರ ತತ್ವಗಳಲ್ಲಿ ನಂಬಿಕೆಯಿಟ್ಟುವವರಾಗಿರಬೇಕು. ಧಾರವಾಡದ ಗರಗ ಕ್ಷೇತ್ರಿಯ ಸೇವಾ ಸಂಘ ಖಾದಿ ಉತ್ಪನ್ನ ಮತ್ತು ಮಾರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಭಾರತದ ರಾಷ್ಟ್ರಧ್ವಜ ತಯಾರಾಗಿದ್ದಾರೆ. ಇಲ್ಲಿ ತಯಾರಾಗುವ ರಾಷ್ಟ್ರಧ್ವಜವನ್ನು ಇಡೀ ದೇಶಕ್ಕೆ ಸರಬರಾಜು ಮಾಡಲಾಗುತ್ತದೆ. ಮಹಾತ್ಮಾ ಗಾಂಧಿ ಸೇವಾ ಪ್ರಶಸ್ತಿಗೆ ಭಾಜನರಾದ ಈ ಸಂಸ್ಥೆಯ ಎಲ್ಲರಿಗೂ ಅಭಿನಂದನೆಗಳನ್ನು ಸಲ್ಲಿಸಿದರು ಹಾಗೂ ಪ್ರಶಸ್ತಿಯ ಆಯ್ಕೆ

2

## ಗಾಂಧೀಜಿ ವಿಚಾರಧಾರೆ ಸದಾ ಪ್ರಸ್ತುತ

»»1ನೇ ಪುಟದಿಂದ ಸಮಿತಿಗೆ ಧನ್ಯವಾದಗಳನ್ನರ್ಪಿಸಿದರು.

■ ಸರಳ ಜೀವಿ :

ಮಹಾತ್ಮ ಗಾಂಧೀಜಿಯವರ ವಿಚಾರಧಾರೆ ಎಲ್ಲ ಕಾಲಕ್ಕೂ ಪ್ರಸ್ತುತ. ವಕೀಲ ವೃತ್ತಿಯಲ್ಲಿದ್ದ ಗಾಂಧಿಯವರು ದಕ್ಷಿಣಾ ಆಫ್ರಿಕಾದಲ್ಲಿ ವರ್ಣಬೇಧದಿಂದ ಅವಮಾನಿತರಾದರು. ಆ ದೇಶದಲ್ಲಿ ವರ್ಣಬೇಧದ ವಿರುದ್ಧ ಹೋರಾಟ ನಡೆಸಿದರು. ಗೋಪಾಲಕೃಷ್ಣ ಗೋಖಲೆ ಕಾಂಗ್ರೆಸ್ ನ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಗಾಂಧೀಜಿಯವರ ಇವರ ಹೋರಾಟದ ಹಾದಿಯನ್ನು ನೋಡಿ, ಭಾರತದಲ್ಲಿನ ಬ್ರಿಟೀಷರ ದಾಸ್ಯದಿಂದ ತಪ್ಪಿಸಲು ಗಾಂಧೀಜಿಯವರು ನೇತೃತ್ವವನ್ನು ವಹಿಸಲು ಕೋರಿದರು.1915 ರಲ್ಲಿ ಗಾಂಧೀಜಿ ಭಾರತಕ್ಕೆ ಬಂದರು. ಭಾರತದ ಸಮಾಜಿಕ ವ್ಯವಸ್ಥೆ ಜನರ ಬದುಕನ್ನು ಅರಿಯಲು ರೈಲಿನಲ್ಲಿ 3 ನೇ ದರ್ಜೆಯಲ್ಲಿಯೇ ಪ್ರಯಾಣ ಮಾಡಿ ಇಡೀ ಭಾರತವನ್ನು ಸುತ್ತಿದ್ದ ಅತ್ಯಂತ ಸರಳ ಜೀವಿ ಎಂದರು.

■ ಅಹಿಂಸಾ ಹಾದಿಯಲ್ಲಿ ನಡೆದು ಸ್ವಾತಂತ್ರ್ಯ ಪಡೆದ ಭಾರತ :

ಗಾಂಧೀಜಿಯವರ ಮಾತು ಹಾಗೂ ಕೃತಿಯಲ್ಲಿ ವ್ಯತ್ಯಾಸವಿರಲಿಲ್ಲ, ಸ್ವಾತಂತ್ರ್ಯ ಹೋರಾಟದ ನೇತೃತ್ವ ವಹಿಸಿ, ಸತ್ಯ ಮತ್ತು ಅಹಿಂಸೆಯ ಮಾರ್ಗವನ್ನು ಅನುಸರಿಸಿದರು. ಅಹಿಂಸಾ ಹಾದಿಯಲ್ಲಿ ನಡೆದು ಸ್ವಾತಂತ್ರ್ಯ ಪಡೆಯಲು ಹೊರಟ ದೇಶವೆಂದರೆ ಭಾರತ. ಗಾಂಧಿಜೀಯವರು ದೊಡ್ಡ ಮಾನವತಾವಾದಿ. ಎಂದರು.

■ ಮಹಿಳಾ ಸಬಲೀಕರಣಕ್ಕೆ ಆದ್ಯತೆ :

ಭಾರತ ಹಳ್ಳಿಗಳ ದೇಶ. ಹಳ್ಳಿಗಳ ಸ್ವಾವಲಂಬನೆಯಿಂದ ಮಾತ್ರ ದೇಶ ಅಭಿವೃದ್ಧಿಯಾಗಲು ಸಾಧ್ಯ. ನಮ್ಮ ದೇಶಕ್ಕೆ ದೊಡ್ಡ ಕೈಗಾರಿಕೆಗಳ ಬದಲು ಗುಡಿ ಕೈಗಾರಿಕೆಗಳು ಬರಬೇಕು. ಅವರು ಹೇಳಿದ ಪಂಚಾಯತ್ ರಾಜ್ ವ್ಯವಸ್ಥೆಯಂತೆ ಅಧಿಕಾರ ಹಳ್ಳಿಯಿಂದ ದಿಲ್ಲಿಗೆ ಹೋಗಬೇಕೆ ಹೊರತು, ದಿಲ್ಲಿಯಿಂದ ಹಳ್ಳಿಗೆ ಬರಬಾರದು ಎಂದಿದ್ದರು. ಅಧಿಕಾರ ವಿಕೇಂದ್ರೀಕರಣ, ದೇಶ, ರಾಜ್ಯ, ಜಿಲ್ಲೆ, ಹಳ್ಳಿ ನಾಲ್ಕು ಹಂತದಲ್ಲಿ ಅಧಿಕಾರದ ವಿಕೇಂದ್ರೀಕರಣದಿಂದ . ಜನರ ಪಾಲ್ಗೊಳ್ಳುವಿಕೆಯಿದ ಜನತಂತ್ರದ ವಿಕೇಂದ್ರೀಕರಣ ಸಾಧ್ಯ. ನಮ್ಮ ಸರ್ಕಾರದ ಜನಪರ ಕಾರ್ಯಕ್ರಮಗಳಿಗೆ ಗಾಂಧೀಜಿವರ ಚಿಂತನೆಗಳೇ ಪ್ರೇರಣೆ. ಮಹಿಳಾ ಸ್ವಾತಂತ್ರ್ಯ ಹಾಗೂ ಸಬಲೀಕರಣದ ಬಗ್ಗೆ ಅಪಾರವಾದ ಬದ್ಧತೆ ಹೊಂದಿದ್ದರು. ಮಹಿಳೆಯವರ ಅಭಿವೃದ್ಧಿಯಿಂದ ನಾಡು, ದೇಶದ ಅಭಿವೃದ್ಧಿ ಸಾಧ್ಯ. ಸರ್ಕಾರ ಮಹಿಳಾ ಸಬಲೀಕರಣಕ್ಕೆ ಆದ್ಯತೆ ನೀಡಿದೆ. ಶಕ್ತಿ ಯೋಜನೆ ಹಾಗೂ ಗೃಹಲಕ್ಷ್ಮಿ ಯೋಜನೆಗಳ ಮೂಲಕ ಮಹಿಳೆಯರ ಆರ್ಥಿಕ ಸಬಲೀಕರಣ ಹಾಗೂ ಅನ್ನಭಾಗ್ಯ ಯೋಜನೆಗೆ ಗಾಂಧಿ ತತ್ವಗಳನ್ನು ಅವಲಂಬಿಸಿವೆ ಎಂದರು.

ಇದೇವೇಳೆ ಕಾನೂನು ಸಚಿವ ಹೆಚ್.ಕೆ.ಪಾಟೀಲ್, ಗಾಂಧಿಸ್ಮಾರಕ ನಿಧಿ ಕಾರ್ಯದರ್ಶಿ ವೂಡೇ ಪಿ ಕೃಷ್ಣ, ಇಂದಿರಾ ಕೃಷ್ಣಪ್ಪ ಮತ್ತಿತರರು ಇದ್ದರು.

ಈ ಸಂಜೆ

Oct 2, 2023



ಗಾಂಧಿ ಜಯಂತಿ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನಾ ಇಲಾಖೆ ಸಂಯುಕ್ತಾಶ್ರಯದಲ್ಲಿ ಆನಂದರಾವ್ ವೃತ್ತದ ಬಳಿ ಹಮ್ಮಿಕೊಂಡಿದ್ದ ಸದ್ಭಾವನಾ ಪಾದಯಾತ್ರೆಯಲ್ಲಿ ಎನ್ ಎಸ್ ಎಸ್ ರಾಜ್ಯಾಧಿಕಾರಿ ಪ್ರತಾಪ್ ಲಿಂಗಯ್ಯ ಚಾಲನೆ ನೀಡಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಇಂದಿರಾ ಕೃಷ್ಣಪ್ಪ ಸೇರಿದಂತೆ ವಿದ್ಯಾರ್ಥಿಗಳು ಪಾಲ್ಗೊಂಡಿದರು.

V.K
ವಿಜಯ
ಶನಿವಾರ
30 ಸೆಪ್ಟೆಂಬರ್ 2023
02

# ಬೆಂಗಳೂರಿನ ಸಾಧಕರು



ಇಬ್ಬರು ಅಕ್ಷರಸ್ಥ ಮಹಿಳೆಯರು ಬಡ ಮತ್ತು ಮಧ್ಯಮ ವರ್ಗದವರಿಗೆ ಶಿಕ್ಷಣ ಕಲಿಸಿಕೊಡಬೇಕೆಂಬ ಉದ್ದೇಶ ಇಟ್ಟುಕೊಂಡು ರೂಪಿಸಿದ ಸಂಸ್ಥೆಯೇ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ. ಆರಂಭದಲ್ಲಿ ಕೇವಲ ಎರಡು ಕೊಠಡಿಯಲ್ಲಿ 20 ವಿದ್ಯಾರ್ಥಿಗಳೊಂದಿಗೆ ಆರಂಭವಾದ ಶಿಕ್ಷಣ ಸಂಸ್ಥೆಯಲ್ಲಿಂದು, 24 ಸಾವಿರ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಶೇಷಾದ್ರಿಪುರ ಶಿಕ್ಷಣ ಟ್ರಸ್ಟ್‌ನ ಗೌರವ ಪ್ರಧಾನ ಕಾರ್ಯದರ್ಶಿಯಾಗಿ ಕಳೆದ ಎರಡು ದಶಕದಿಂದ ವೂಡೇ ಪಿ.ಕೃಷ್ಣ ಅವರು ಕಾರ್ಯನಿರ್ವಹಿಸುತ್ತಿದ್ದು, ಟ್ರಸ್ಟ್‌ನ ಬೆಳವಣಿಗೆಗೆ ಶ್ರಮಿಸುತ್ತಿದ್ದಾರೆ.



## ಶಿಕ್ಷಣ ಕ್ರಾಂತಿಯ ಹರಿಕಾರ ವೂಡೇ ಪಿ.ಕೃಷ್ಣ

ಕಡಿಮೆ ಶುಲ್ಕದೊಂದಿಗೆ ಗುಣಮಟ್ಟದ ಶಿಕ್ಷಣಕ್ಕೆ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ಹೆಸರಾಗಿದೆ. ಬಡ, ಮಧ್ಯಮ ವರ್ಗದ ಅದೆಷ್ಟೋ ಕುಟುಂಬದ ವಿದ್ಯಾರ್ಥಿಗಳಿಗೆ ದಾರಿ ತೋರುತ್ತಿರುವ ಶಿಕ್ಷಣ ಸಂಸ್ಥೆಯ ಹಿಂದಿನ ಶಕ್ತಿ ವೂಡೇ ಪಿ. ಕೃಷ್ಣ. ಎರಡು ದಶಕಗಳ ಕಾಲ ಸಂಸ್ಥೆಯನ್ನು ಮುನ್ನಡೆಸಿ ಬೃಹತ್ ಶಿಕ್ಷಣ ಸಂಸ್ಥೆಯನ್ನಾಗಿ ರೂಪಿಸಿದ ಗರಿಮೆ ಇವರದು.

ಬೆಂಗಳೂರಿನ ಹೃದಯಭಾಗವಾದ ಶೇಷಾದ್ರಿಪುರ ದಲ್ಲಿ ಅನಂದಮ್ಮ ಮತ್ತು ಸೀತಮ್ಮ ಎಂಬ ಇಬ್ಬರು ಮಹಿಳೆಯರು ಸೇರಿ ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಅನ್ನು 1930ರಲ್ಲಿ ಆರಂಭಿಸಿದರು. ಆ ವೇಳೆ ಎರಡು ಕೊಠಡಿಯಲ್ಲಿ 20 ಮಕ್ಕಳೊಂದಿಗೆ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಅನಂತರ ಮೈಸೂರಿನ ಮಹಾರಾಜರು 2.5 ಎಕರೆ ಪ್ರದೇಶವನ್ನು ಟ್ರಸ್ಟ್ ಹೆಸರಿಗೆ ಬರೆದುಕೊಟ್ಟರು. ಕಾಲಕ್ರಮೇಣ ಶಿಕ್ಷಣ ಸಂಸ್ಥೆಯು ತನ್ನ ವಿಸ್ತರಣಾ ಕಾರ್ಯ ಆರಂಭಿಸಿತು. ಇದರ ಪರಿಣಾಮ ಬೆಂಗಳೂರಿನಲ್ಲಿ ಮಾತ್ರವಲ್ಲ, ಮಂಡ್ಯ, ಮೈಸೂರು, ತುಮಕೂರು ಜಿಲ್ಲೆಗಳಲ್ಲೂ ಶಿಕ್ಷಣ ಸಂಸ್ಥೆ ಸ್ಥಾಪಿಸಿತು. ಎಲ್‌ಕೆಜಿಯಿಂದ ಹಿಡಿದು ಪಿಎಚ್‌ಡಿವರೆಗೆ ವ್ಯಾಸಂಗಕ್ಕೆ ಸೌಲಭ್ಯ ಕಲ್ಪಿಸುವ ಶಿಕ್ಷಣ ಸಂಸ್ಥೆಯಾಗಿ ಬೆಳೆದಿದೆ.

ಶಿಕ್ಷಣ ಸಂಸ್ಥೆಯು 'ಸಾಮಾನ್ಯ ಶಿಕ್ಷಣ'ಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುತ್ತಾ ಬಂದಿದ್ದು, ಮುಂದಿನ ದಿನಗಳಲ್ಲಿ ಎಂಜಿನಿಯರಿಂಗ್ ಕೋರ್ಸ್ ಆರಂಭಿಸುವ ದೂರದೃಷ್ಟಿಯನ್ನು ಇಟ್ಟುಕೊಂಡಿದೆ. ವೂಡೇ ಪಿ.ಕೃಷ್ಣ ಅವರು ಈ 2001ರಿಂದ ಟ್ರಸ್ಟ್‌ನ ಗೌರವ ಕಾರ್ಯದರ್ಶಿಯಾಗಿ ಸಂಸ್ಥೆಯ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಸ್ವಾತಂತ್ರ್ಯ ಹೋರಾಟಗಾರರ ಮನೆತದಿಂದ ಬಂದಿರುವ ವೂಡೇ ಪಿ.ಕೃಷ್ಣ ಅವರು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ರೂವಾರಿ ಕೂಡ ಹೌದು.

**ಕಡಿಮೆ ಬೆಲೆ ಆಧುನಿಕ ಶಿಕ್ಷಣ:** ಬಡ ಮತ್ತು ಮಧ್ಯಮ ವರ್ಗದವರಿಗೆ ಕಡಿಮೆ ಬಜೆಟ್‌ನಲ್ಲಿ ಶಿಕ್ಷಣ ಕಲ್ಪಿಸಿಕೊಡಬೇಕೆಂಬ ಉದ್ದೇಶದಿಂದ ಸಂಸ್ಥೆಯು ಕಾಲೇಜನ್ನು ಮುನ್ನಡೆಸುತ್ತಿದೆ. ಇಲ್ಲಿ ಇತರೆ ಖಾಸಗಿ ಕಾಲೇಜುಗಳಂತೆಯೇ ಪಿಯು ವಿಜ್ಞಾನ ವಿಷಯದ ವಿದ್ಯಾರ್ಥಿಗಳಿಗೆ ಜೆಇಇ, ನೀಟ್, ಸಿಇಟಿ ಕೋಚಿಂಗ್ ನೀಡಲಾಗುತ್ತಿದೆ. ಇದು ಕಡ್ಡಾಯವೇನಲ್ಲ, ಆಸಕ್ತರು ಮಾತ್ರ ಪಡೆಯಬಹುದು. ಇದೇ ರೀತಿ ವಾಣಿಜ್ಯ ವಿಭಾಗದ ವಿದ್ಯಾರ್ಥಿಗಳಿಗೆ ಸಿಎ ಕೋಚಿಂಗ್ ನೀಡುತ್ತಿದೆ.

**ನೈತಿಕ ಶಿಕ್ಷಣ:** ವಿದ್ಯಾರ್ಥಿಗಳಿಗೆ ಸಾಮಾನ್ಯ ಶಿಕ್ಷಣದ ಜತೆಗೆ ನೈತಿಕ ಶಿಕ್ಷಣವನ್ನು ನೀಡುವ ಉದ್ದೇಶದಿಂದ 'ಶಾಲೆ ಕಡೆಗೆ ಗಾಂಧಿ' ಎಂಬ ವಿಶೇಷ ಕಾರ್ಯಕ್ರಮ ಆಯೋಜಿಸಿ ಶಾಲಾ ಮಕ್ಕಳಿಗೆ ಗಾಂಧಿಯ ವಿಚಾರಧಾರೆಗಳನ್ನು ತಿಳಿಸಿಕೊಡುತ್ತಿದೆ. ಅಲ್ಲದೆ, ಡಾ.ಬಿ.ಆರ್. ಅಂಬೇಡ್ಕರ್, ಬಸವ, ವಿವೇಕಾನಂದ, ಗಾಂಧೀಜೀ ಇವರ ಹೆಸರಿನಲ್ಲಿ ಅಧ್ಯಯನ ಕೇಂದ್ರಗಳನ್ನು ತೆರೆದು ಪದವಿ ವಿದ್ಯಾರ್ಥಿಗಳಿಗೆ ನೈತಿಕ ಶಿಕ್ಷಣವನ್ನು ನೀಡಲಾಗುತ್ತಿದೆ.



- ಈ ವರ್ಷದಿಂದ ಎರಡು ಡಿಗ್ರಿ ಕಾಲೇಜುಗಳಲ್ಲಿ ಎಂಬಿಎ ಮತ್ತು ಎಂಸಿಎ ಕೋರ್ಸ್‌ಗಳು ಆರಂಭ
- ಸಂಜೆ ಕಾಲೇಜು
- ಎನ್‌ಸಿಸಿ, ಎನ್‌ಎಸ್‌ಎಸ್, ಯೂತ್ ರೆಡ್ ಕ್ರಾಸ್
- ನ್ಯಾಕ್‌ನಿಂದ ಎ ಪ್ಲಸ್ ಪ್ಲಸ್ ಶ್ರೇಣಿ
- ಧರ್ಮಸ್ಥಳದ ವೀರೇಂದ್ರ ಹೆಗ್ಗಡೆ, ವಿಜ್ಞಾನಿ ವಿ.ಕೆ.ಆತ್ರೆ, ಮಾಜಿ ಸಚಿವ ರಾಮಚಂದ್ರಗೌಡ ಇತರರು ಹಳೆ ವಿದ್ಯಾರ್ಥಿಗಳು

ಶಿಕ್ಷಣ ಖಾಸಗೀಕರಣಗೊಂಡ ನಂತರ ವಾಣಿಜ್ಯೋದ್ಯಮವಾಗಿ ಬೆಳೆಯುತ್ತಿದೆ. ಇದರ ಮಧ್ಯೆ ಕಡಿಮೆ ವೆಚ್ಚದಲ್ಲಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ಕಲ್ಪಿಸಿ, ಅವರನ್ನು ಸಮಾಜದಲ್ಲಿ ಆದರ್ಶ ವ್ಯಕ್ತಿಗಳಾಗಿ ರೂಪಿಸುವುದು ನಮ್ಮ ಧ್ಯೇಯವಾಗಿದೆ.

– ಡಾ.ವೂಡೇ ಪಿ.ಕೃಷ್ಣ
ಗೌರವ ಪ್ರಧಾನ ಕಾರ್ಯದರ್ಶಿ,
ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ

### ಸ್ವಾತಂತ್ರ್ಯ ಹೋರಾಟಗಾರರ ಮನೆತನ

1963ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಡಾ.ಕೃಷ್ಣ ಅವರು ಸ್ವಾತಂತ್ರ್ಯ ಹೋರಾಟಗಾರರ ಮನೆತನದಿಂದ ಬಂದವರು. ಮೈಸೂರಿನ ಹಾರ್ಡಿಂಜ್ ರಾಮಕೃಷ್ಣ ವಿದ್ಯಾಶಾಲೆಯಲ್ಲಿ ವ್ಯಾಸಂಗ ಮಾಡಿದ ನಂತರ ಎಂಜಿನಿಯರಿಂಗ್ ಹಾಗೂ ಕಾನೂನು ಸ್ನಾತಕೋತ್ತರ ಪದವಿಗಳೊಂದಿಗೆ ನಿರ್ವಹಣಾ ಶಾಸ್ತ್ರದಲ್ಲಿ ಪಿಎಚ್‌ಡಿ ಪದವಿ ಪಡೆದಿದ್ದಾರೆ. ವೃತ್ತಿಯಲ್ಲಿ ಚಾರ್ಟರ್ಡ್ ಎಂಜಿನಿಯರ್ ಆಗಿರುವ ಇವರು ಕೈಗಾರಿಕಾ ಸ್ವತ್ತುಗಳ ಮೌಲ್ಯಮಾಪನದಲ್ಲಿ ಪರಿಣತರು. ಕರ್ನಾಟಕ ರಾಜ್ಯ ವಿದ್ಯುತ್ ನಿರ್ವಹಣಾ ಪ್ರಾಧಿಕಾರದ ಸದಸ್ಯರಾಗಿ ರಾಜ್ಯ ಸಚಿವ ದರ್ಜೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಭಾರತೀಯ ಎಂಜಿನಿಯರುಗಳ ಸಂಸ್ಥೆಯ ಕರ್ನಾಟಕ ರಾಜ್ಯ ಕೇಂದ್ರದ ಅಧ್ಯಕ್ಷರಾಗಿಯೂ ಕರ್ತವ್ಯ ನಿರ್ವಹಿಸಿದ್ದಾರೆ. ಇಂಗ್ಲೆಂಡಿನ ಎಂಜಿನಿಯರಿಂಗ್ ಹಾಗೂ ಟೆಕ್ನಾಲಜಿ ಸಂಸ್ಥೆಯ ಅತ್ಯುನ್ನತ ಅಂತಾರಾಷ್ಟ್ರೀಯ ಮಟ್ಟದ ಫೆಲೋ ಗೌರವ ಪಡೆದಿರುವ ಭಾರತೀಯ ಎಂಬ ಕೀರ್ತಿಗೂ ಪಾತ್ರರಾಗಿದ್ದಾರೆ. ಕೆನಡಾದ ವಿಶ್ವ ಉತ್ಪಾದನಾ ವಿಜ್ಞಾನ ಅಕಾಡೆಮಿ ಇವರಿಗೆ ಫೆಲೋಶಿಪ್ ನೀಡಿ ಗೌರವಿಸಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯಿಂದ ಪುರಸ್ಕೃತರಾಗಿದ್ದಾರೆ. ಹಂಪಿ ಕನ್ನಡ ವಿವಿಯು ಗೌರವ ಡಾಕ್ಟರೇಟ್ ಹಾಗೂ ನಾಡೋಜ ಪ್ರಶಸ್ತಿ ನೀಡಿ ಪುರಸ್ಕರಿಸಿದೆ.

- ಸಂಪರ್ಕ: 080-22955354
ವೆಬ್‌ಸೈಟ್: pg.spmcollege.ac.in

ಮಂಥನ ಕನ್ನಡ ಮಾಸಿಕ





# ನನ್ನ ಓದು

ರು.ಬಸಪ್ಪ, ಹಿರಿಯ ಪತ್ರಕರ್ತರು

## ನಾಲ್ಕು ಪುಸ್ತಕಗಳು ನಾಡೋಜ ಡಾ. ವೂಡೇಪಿ.ಕೃಷ್ಣ ಅವರ ವ್ಯಕ್ತಿತ್ವದ ಸುತ್ತಾ. . .









20–8–2023ರಂದು ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆದ ಸುಂದರ ಬೆಳಗಿನ ಸಮಾರಂಭದಲ್ಲಿ ನಡೋಜ ಡಾ. ವೂಡೇಪಿ.ಕೃಷ್ಣ ಅವರು ಅಂಬೇಡ್ಕರ್ ಕುರಿತ ಚಿಂತನೆಗಳ ಬಗೆಗೆ ರಚಿಸಿರುವ "ಅಂಬೇಡ್ಕರ್ ಅನುಸಂಧಾನ", ವಿನಯ ಭಟ್ ಅವರು "ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರೊಡನೆ ಸಂದರ್ಶನ ನಡೆಸಿ ಅವರ ಅಂತರಂಗ ದರ್ಶನ ಮಾಡಿಸಿರುವ "ನಾಡೋಜ ಡಾ. ವೂಡೇ ಪಿ.ಕೃಷ್ಣ ಮುಖಾಮುಖಿ", ಶತಾಯುಶಿ, ಮಹಾನ್‌ಗಾಂಧಿ ತತ್ವಾನುಯಾಯಿ ಎಸ್.ವಿ.ಮಂಜುನಾಥ್ ಅವರ ಮಹಾನ್ ಚಿಂತನೆಗಳನ್ನು ಕ್ರೋಢೀಕರಿಸಿ ಡಾ. ವೂಡೇ ಪಿ.ಕೃಷ್ಣ ಅವರು ಸಂಪಾದಿಸಿರುವ "ನೂರು ನೆನಪು:ಶತಾಯುಶಿ ಎಸ್.ವಿ.ಮಂಜುನಾಥ್" ಹಾಗೂ ಡಾ. ಕೆ.ವಿ.ಮುದ್ದವೀರಪ್ಪ ಮತ್ತು ಪ್ರೊ.ಎಂ.ಜೆ.ರಂಗಸ್ವಾಮಿ ಅವರು ಡಾ. ವೂಡೇ ಪಿ.ಕೃಷ್ಣ ಅವರ ಸಂಕ್ಷಿಪ್ತ ಜೀವನ ಚಿತ್ರ ನೀಡುವ "ಶಿಕ್ಷಣ ಶಿಲ್ಪಿ" –ಈ ನಾಲ್ಕು ಪುಸ್ತಕಗಳನ್ನು ಲೋಕಾರ್ಪಣೆಗೊಳಿಸಲಾಯಿತು.

ಈ ನಾಲ್ಕು ಸಾಹಿತ್ಯ ಕೃತಿಗಳು ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರ ಉನ್ನತ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ಸಾಹಿತಿಗಳಾದ ಅಗ್ರಹಾರ ಕೃಷ್ಣಮೂರ್ತಿ, ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್, ಡಾ. ಭೈರಮಂಗಲ ರಾಮೇಗೌಡ, ಮೀರಸಾಬಿಹಳ್ಳಿ ಶಿವಣ್ಣ, ಡಾ.ಸತ್ಯಮಂಗಲ ಮಹಾದೇವ್, ಡಾ. ಎಸ್.ರಾಮಲಿಂಗೇಶ್ವರ (ಸಿಸಿರಾ)ಡಾ. ಎಚ್.ಎಲ್.ಪುಷ್ಪ, ನಾಡೋಜ ಎಸ್.ಷಡಕ್ಷರಿ ಮೊದಲಾದವರು ಉಪಸ್ಥಿತರಿದ್ದ ಈ ಸಮಾರಂಭದಲ್ಲಿ ಡಾ.ವೂಡೇ ಪಿ. ಅವರ ಅಭಿಮಾನಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಅನೇಕರಿಗೆ ಸಭಾಂಗಣದಲ್ಲಿ ಆಸನಗಳು ಸಿಗದೆ, ಸಭಾಂಗಣದ ಹೊರಗಡೆಯೇ ನಿಂತು ಉಪನ್ಯಾಸಗಳನ್ನು ಆಲಿಸಿದರು.

ನಾನು ನಾಲ್ಕೂ ಪುಸ್ತಕಗಳನ್ನು ಓದಿದ್ದೇನೆ, ಸರಳಗನ್ನಡದಲ್ಲಿದ್ದು ಸುಲಭವಾಗಿ ಓದಿಸಿಕೊಂಡು ಹೋಗುತ್ತವೆ.

ಕನ್ನಡಪ್ರಭ
Sep 23, 2021

# ವೀರಣ್ಣಗೌಡರ ಕೊಡುಗೆ ಅಪಾರ

## ಹೊನ್ನಕಳಸ ಅಭಿನಂದನಾ ಗ್ರಂಥ, ರೆಮಿನಿಸೆನ್ಸ್ ಆಫ್ ಲೈಫ್ ಕೃತಿಗಳ ಬಿಡುಗಡೆ

• ಕನ್ನಡಪ್ರಭ ವಾರ್ತೆ ಚನ್ನಪಟ್ಟಣ

ಪ್ರಸ್ತುತದುರಾಸೆತುಂಬಿದಸಮಾಜನಿರ್ಮಾಣವಾಗಿದೆ. ಇಂತಹ ಪರಿಸ್ಥಿತಿಗೆ ಸಮಾಜ ಕಾರಣ ಎಂದು ವಿಶ್ರಾಂತ ಲೋಕಾಯುಕ್ತ ಎನ್.ಸಂತೋಷ್ ಹೆಗ್ಡೆ ಅಭಿಪ್ರಾಯಪಟ್ಟರು.

ತಾಲೂಕಿನ ಶಿಶಿರ ಹೋಂಸ್ಟೇನಲ್ಲಿ ಡಾ.ಎಚ್.ಕೆ. ಮರಿಯಪ್ಪ ಅಭಿನಂದನಾ ಸಮಿತಿ ಹಮ್ಮಿಕೊಂಡಿದ್ದ ಹೊನ್ನಕಳಸ ಅಭಿನಂದನಾ ಗ್ರಂಥ ಹಾಗೂ ರೆಮಿನಿಸೆನ್ಸ್ ಆಫ್ ಲೈಫ್ (ಮೆಮೋರಿಸ್ ಆಫ್ ಎಚ್.ಕೆ.ವೀರಣ್ಣಗೌಡ) ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಹೊನ್ನಕಳಸ ಅಭಿನಂದನಾ ಗ್ರಂಥ ಬಿಡುಗಡೆ ಮಾಡಿ ಅವರು ಮಾತನಾಡಿದರು.

ಈ ಹಿಂದೆ ತಪ್ಪು ಮಾಡಿದವರನ್ನು ಸಮಾಜದಿಂದ ಬಹಿಷ್ಕರಿಸುವ ಪರಿಪಾಠವಿತ್ತು. ಆದರೆ, ಇಂದು ಅಧಿಕಾರ ಹಾಗೂ ಹಣ ಇರುವವರನ್ನು ಪ್ರೀತಿಸುವ ಸಮಾಜ ನಿರ್ಮಾಣವಾಗಿದೆ. ಅಧಿಕಾರ, ಹಣಬಲ ಇರುವವರಿಗೆ ಸಲಾಂ ಹೊಡೆಯುವ ಮಂದಿ ಹೆಚ್ಚಾಗುತ್ತಿದ್ದಾರೆ. ಇಂತಹ ಸಮಾಜದಲ್ಲಿ ಶಾಂತಿ ಸೌಹಾರ್ದತೆ ಹೇಗೆ ಸಾಧ್ಯ ಎಂದು ಬೇಸರ ವ್ಯಕ್ತಪಡಿಸಿದರು.

ದುರಾಸೆಯನ್ನೇ ಮೈಗೂಡಿಸಿಕೊಂಡಿರುವ ಸಮಾಜದಲ್ಲಿ ಸಮಾಜದಿಂದ ಏನನ್ನೂ ಬಯಸದೇ ಸಮಾಜಕ್ಕೆ ಏನಾದರೂ ಕೊಡುಗೆ ನೀಡಬೇಕು ಎಂಬ ಮನಸ್ಥಿತಿ ಇರುವ ಎಚ್.ಕೆ.ಮರಿಯಪ್ಪ ಅಪರೂಪದ ವ್ಯಕ್ತಿಯಾಗಿದ್ದಾರೆ. ಚಿಕ್ಕ ಗ್ರಾಮದಲ್ಲಿ ಹುಟ್ಟಿ, ಅಮೆರಿಕಾದಂತಹ ದೇಶದಲ್ಲಿ ಖ್ಯಾತ ವೈದ್ಯರಾಗಿ ಹೆಸರು ಗಳಿಸಿರುವ ಅವರ ಶ್ರಮ ಶ್ಲಾಘನೀಯ. ಅವರು ಹಾಗೂ ಅವರ ಪತ್ನಿ ವಿದ್ಯಾಕ್ಷೇತ್ರಕ್ಕೆ ನೀಡಿರುವ ಕೊಡುಗೆ ಅಪಾರ. ಹುಟ್ಟು ಸಾವಿನ ಮಧ್ಯೆ ಮಾನವೀಯತೆ ತೋರಬೇಕು ಎಂದರು.

ಆದಿಚುಂಚನಗಿರಿ ಮಠಾಧೀಶ ಡಾ.ನಿರ್ಮಲಾನಂದನಾಥ ಸ್ವಾಮೀಜಿ ಆಶೀರ್ವಚನ ನೀಡಿ, ನಿಜವಾದಸಾಧಕರುಪ್ರಚಾರಬಯಸುವುದಿಲ್ಲ. ಅಂತವರ ಸಾಲಿನಲ್ಲಿ ಡಾ.ಎಚ್.ಕೆ.ಮರಿಯಪ್ಪ ನಿಲ್ಲುತ್ತಾರೆ. ದಿವಂಗತ ಎಚ್.ಕೆ.ವೀರಣ್ಣಗೌಡ ಹಾಗೂ ಎಚ್.ಕೆ.ಮರಿಯಪ್ಪನವರ ಸೇವೆ ಸಮಾಜಕ್ಕೆ ಅಮೂಲ್ಯವಾದದ್ದು. ಶ್ರೀಮಠಕ್ಕೂ ಇವರಿಗೂ ಅವಿನಾಭಾವ ಸಂಬಂಧವಿತ್ತು. ನಮ್ಮ ಬದುಕು ಹೊನ್ನಾಗಬೇಕು ಎಂದರೆ, ಬದುಕುವ ರೀತಿ ಬದಲಾಗಬೇಕು. ನಮಗಾಗಿ ಬದುಕಿದರಷ್ಟೇ ಸಾಲದು ಸಮಾಜಕ್ಕಾಗಿಯೂ ಬದುಕಬೇಕು. ಈ ಬದುಕು ಎಚ್.ಕೆ.ಮರಿಯಪ್ಪನವರದ್ದಾಗಿದೆ. ಈ ಇಬ್ಬರು ಮಹನೀಯರ ಪುಸ್ತಕಗಳು ಯುವಸಮುದಾಯಕ್ಕೆ ದಾರಿದೀಪವಾಗಲಿ ಎಂದು ಆಶಿಸಿದರು.



ಚನ್ನಪಟ್ಟಣದಲ್ಲಿ ಎಚ್.ಕೆ. ಮರಿಯಪ್ಪ ಅಭಿನಂದನಾ ಸಮಿತಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಹೊನ್ನಕಳಸ ಅಭಿನಂದನಾ ಗ್ರಂಥ ಹಾಗೂ ರೆಮಿನಿಸೆನ್ಸ್ ಆಫ್ ಲೈಫ್, ಮೆಮೋರಿಸ್ ಆಫ್ ಎಚ್.ಕೆ.ವೀರಣ್ಣಗೌಡ ಕೃತಿಗಳನ್ನು ವಿಶ್ರಾಂತ ಲೋಕಾಯುಕ್ತ ಸಂತೋಷ್ ಹೆಗ್ಡೆ, ಡಾ.ನಿರ್ಮಲಾನಂದನಾಥ ಸ್ವಾಮೀಜಿ ಬಿಡುಗಡೆ ಮಾಡಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ.ಕೃಷ್ಣ ರೆಮಿನಿಸೆನ್ಸ್ ಆಫ್ ಲೈಫ್ ಕೃತಿ ಬಿಡುಗಡೆ ಮಾಡಿ ಮಾತನಾಡಿ, ಮೂವತ್ತರ ದಶಕದಿಂದ ಎಪ್ಪತ್ತರ ದಶಕದವರೆಗೆ ಹಳೇ ಮೈಸೂರು ಭಾಗದಲ್ಲಿ ರೈತಪರ ಚಳವಳಿ ಮೂಲಕ ತಮ್ಮ ಹೆಜ್ಜೆಗುರುತುಗಳನ್ನು ಮೂಡಿಸಿದ ಧೀಮಂತ ರಾಜಕಾರಣಿ ದಿ. ಎಚ್.ಕೆ.ವೀರಣ್ಣಗೌಡ. ಅವರ ಸಹೋದರ ಎಚ್.ಕೆ.ಮರಿಯಪ್ಪ ಅವರಲ್ಲೂ ಅಂತಹ ಹೋರಾಟದ ಮನೋಭಾವ ಹಾಗೂ ಸೇವಾ ಗುಣ ಇದೆ. ಆಗಿನ ಕಾಂಗ್ರೆಸ್ ಪಕ್ಷವನ್ನು ಕಟ್ಟುವಲ್ಲಿ ಎಚ್.ಕೆ.ವೀರಣ್ಣಗೌಡರ ಪಾತ್ರ ದೊಡ್ಡದು ಎಂದರು.

ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಡಾ.ಬೈರಮಂಗಲ ರಾಮೇಗೌಡ ಅಭಿನಂದನಾ ನುಡಿಗಳನ್ನಾಡಿದರು. ಅಭಿನಂದನಾ ಗ್ರಂಥದ ಸಂಪಾದಕ ಡಾ.ಕೂಡ್ಲೂರು ವೆಂಕಟಪ್ಪ ಹಾಗೂ ಅಭಿನಂದನಾ ಸಮಿತಿ ಅಧ್ಯಕ್ಷ ಎಂ.ಎಲ್.ಮಾದಯ್ಯ ಹಾಗೂ ಅಭಿನಂದಿತ ಎಚ್.ಕೆ.ಮರಿಯಪ್ಪ ಮಾತನಾಡಿದರು.

ಕಾರ್ಯಕ್ರಮದಲ್ಲಿ ನ್ಯಾಯಮೂರ್ತಿ ಎ.ಜೆ. ಸದಾಶಿವ, ಆದಿಚುಂಚನಗಿರಿ ಶಾಖಾ ಮಠದ ಅನ್ನದಾನೇಶ್ವರ ಸ್ವಾಮೀಜಿ, ಮದ್ದೂರಿನ ಎಂ.ಎಚ್.ಚನ್ನೇಗೌಡ ವಿದ್ಯಾಸಂಸ್ಥೆ ಗೌರವಾಧ್ಯಕ್ಷ ಕೆ.ಟಿ.ಚಂದು, ಡಾ.ಎಂ.ಜಿ.ನಾಗರಾಜು, ಯುಎಸ್ ಎ ಹೃದ್ರೋಗ ತಜ್ಞ ಡಾ.ಎಚ್.ಜಿ.ಏಕನಾಥ್, ಗೀತಾ ಏಕನಾಥ್, ಅಭಿನಂದನಾ ಸಮಿತಿ ಸದಸ್ಯರಾದ ಹಣ್ಣೆದೊಡ್ಡಿ ಆನಂದ್, ಬಿ.ಟಿ.ಜಯಮುದ್ದಪ್ಪ, ಸಿ.ಅಪೂರ್ವ ಚಂದ್ರ, ಡಾ.ಎನ್.ಗೋಪಾಲಕೃಷ್ಣ, ಎಸ್.ನಾಗಭೂಷಣ, ಮುಕುಂದರಾವ್ ಲೋಖಂಡೆ, ತ್ಯಾಗರಾಜು, ಬಿ.ಟಿ.ಚಿಕ್ಕಪುಟ್ಟೇಗೌಡ, ಮರಿಮಲ್ಲಯ್ಯ, ಎಚ್.ಪಿ.ಹರೀಶ್ ಗೌಡ ಇತರರು ಭಾಗವಹಿಸಿದ್ದರು.




ಸ್ವಪ್ನಾಬುಕ್ ವತಿಯಿಂದ ಏರ್ಪಡಿಸಿದ್ದ ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಅಂಜನಾತನಯ ಚೊಚ್ಚಲ ಕೃತಿ ಶ್ರೀ ಥೇನ್ಮೋಟಿ ಕೈಸನ್ ಪುಸ್ತಕವನ್ನು ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್‌ನ ಪ್ರಧಾನ ಕಾರ್ಯದರ್ಶಿ ನಾಡೋಜ, ಡಾ. ವೂಡೆ ಪಿ ಕೃಷ್ಣ ಬಿಡುಗಡೆ ಮಾಡಿದರು. ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ವಿದ್ಯೋದಯ ಫೌಂಡೇಷನ್‌ನ ಸಿಇಓ ಪ್ರೊ. ಕೆ. ಚಂದ್ರಣ್ಣ, ಕನ್ನಡ ಹಿತ ಚಿಂತಕ ಶ್ರೀ ರಾ.ನಂ ಚಂದ್ರಶೇಖರ್, ಸ್ವಪ್ನಾಬುಕ್ ಹೌಸ್ ಕನ್ನಡ ವಿಭಾಗ ಮುಖ್ಯಸ್ಥ ಆರ್. ದೊಡ್ಡೇಗೌಡ, ಕೆ.ಬಿ ಪರಶಿವಪ್ಪ, ಲಯನ್ಸ್ ಕ್ಲಬ್‌ನ ವಿಜಯಕುಮಾರ್, ಗ್ರಂಥಕರ್ತೃ ನಾಗೇಶ್ ಗೋಪಾಲಯ್ಯ ಇದ್ದಾರೆ.

ಉದಯವಾಣಿ

ಶುಕ್ರವಾರ, ಸೆಪ್ಟೆಂಬರ್ 22, 2023

# ಎಚ್.ಕೆ.ಮರಿಯಪ್ಪ ಬದುಕು, ಸಾಧನೆ ಅನುಕರಣೀಯ

## 'ಮೆಮೋರೀಸ್ ಆಫ್ ಎಚ್.ಕೆ.ವೀರಣ್ಣಗೌಡ' ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಗಣ್ಯರ ಪ್ರತಿಪಾದನೆ

ಚನ್ನಪಟ್ಟಣ: ತಾನುಂಟು ತಮ್ಮ ಪರಿವಾರ ಉಂಟು ಎಂಬ ಸ್ವಾರ್ಥವೇ ತುಂಬಿ ತುಳುಕುವ ಇವತ್ತಿನ ಸಮಾಜದಲ್ಲಿ ರಾಜಕೀಯ ಮುತ್ಸದ್ದಿ ಎಚ್.ಕೆ.ವೀರಣ್ಣಗೌಡ ಹಾಗೂ ಅವರ ಸಹೋದರ ಸಮಾಜಮುಖಿ ವೈದ್ಯ, ಶಿಕ್ಷಣ ಪ್ರೇಮಿ ಡಾ.ಎಚ್.ಕೆ.ಮರಿಯಪ್ಪ ಅವರು ಬಹಳ ಭಿನ್ನವಾಗಿ ನಿಲ್ಲುತ್ತಾರೆ ಎಂದು ವಿಶ್ರಾಂತ ಲೋಕಾಯುಕ್ತ ನ್ಯಾಯಮೂರ್ತಿ ಎನ್.ಸಂತೋಷ್ ಹೆಗ್ಡೆ ಅವರು ಅಭಿಪ್ರಾಯಪಟ್ಟರು.

ತಾಲೂಕಿನ ಕೂಡ್ಲೂರು ಬಳಿಯ ಶಿಶಿರ ಹೋಂ ಸ್ಟೇ ಫಾರ್ಮ್ ಹೌಸ್ ನಲ್ಲಿ ಗುರುವಾರ ಹಮ್ಮಿಕೊಂಡಿದ್ದ ಡಾ.ಎಚ್.ಕೆ.ಮರಿಯಪ್ಪ ಕುರಿತ 'ಹೊನ್ನಕಳಸ' ಅಭಿನಂದನಾ ಗ್ರಂಥ ಹಾಗೂ ರೆಮಿನಿಸೆನ್ಸ್ ಆಫ್ ಲೈಫ್ (ಮೆಮೋರೀಸ್ ಆಫ್ ಎಚ್.ಕೆ.ವೀರಣ್ಣಗೌಡ) ಪುಸ್ತಕ ಬಿಡುಗಡೆ, ಕಾರ್ಯಕ್ರಮದಲ್ಲಿ ಈ ಎರಡು ಗ್ರಂಥಗಳನ್ನು ಲೋಕಾರ್ಪಣೆ ಮಾಡಿ ಮಾತನಾಡಿದರು. ಮರಾಸಮೀನ್ನೇ ಮೈಗೂಡಿಸಿಕೊಂಡಿರುವ ಎಚ್.ಕೆ.ವೀರಣ್ಣಗೌಡ ಸೋದರ ಡಾ. ಎಚ್.ಕೆ.ಮರಿಯಪ್ಪ ಅಪರಂತಪರು ಅಪರೂಪದ ವ್ಯಕ್ತಿಯಾಗಿದ್ದಾರೆ.



ಕಾರ್ಯಕ್ರಮದಲ್ಲಿ ಡಾ.ಎಚ್.ಕೆ.ಮರಿಯಪ್ಪ ಅವರನ್ನು ಅಭಿನಂದಿಸಲಾಯಿತು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಮಾತನಾಡಿ, ಮೂವತ್ತರ ದಶಕದಿಂದ ಎಪ್ಪತ್ತರ ದಶಕದವರೆಗೆ ಹಳೇ ಮೈಸೂರು ಭಾಗದಲ್ಲಿ ರೈತಪರ ಚಳವಳಿ ಮೂಲಕ ತಮ್ಮ ಹೆಜ್ಜೆಗುರುತುಗಳನ್ನು ಮೂಡಿಸಿದ ಧೀಮಂತ ರಾಜಕಾರಣಿ ದಿ.ಎಚ್.ಕೆ.ವೀರಣ್ಣಗೌಡ ಅವರು ಎಂದರು. ಸಾಹಿತಿ ಡಾ.ಕೂಡ್ಲೂರು ವೆಂಕಟಪ್ಪ ಮಾತನಾಡಿ, ತೊಂಬತ್ತು ವಸಂತ ಪೂರೈಸಿದ ಡಾ.ಎಚ್.ಕೆ. ಮರಿಯಪ್ಪ ಅವರ ಕುರಿತಂತೆ ಹೊರ ತಂದಿರುವ ಹೊನ್ನಕಳಸ ಮುತ್ಸದ್ದಿ ಗ್ರಂಥ. ಅಭಿನಂದನಾ ನುಡಿಗಳನ್ನಾಡಿದ ಬಿವಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ, ಪ್ರಖ್ಯಾತ ಸಾಹಿತಿ ಡಾ.ಬೈರಮಂಗಲ ರಾಮೇಗೌಡ, ಡಾ.ಎಚ್.ಕೆ.ಮರಿಯಪ್ಪ, ಎಂ.ಎಲ್.ಮಾದಯ್ಯ, ಡಾ.ಸಿ. ನಾಗಣ್ಣ, ಎ.ಜಿ. ಸದಾಶಿವ, ಕೆ.ಟಿ.ಚಂದು, ಡಾ.ಎಂ.ಜಿ.ನಾಗರಾಜು, ಡಾ.ಎಚ್.ಜಿ.ಏಕನಾಥ್, ಗೀತಾ ಏಕನಾಥ್, ಆನಂದ್, ಬಿ.ಟಿ.ಜಯಮುದ್ದಪ್ಪ ಭಾಗವಹಿಸಿದ್ದರು.

ಪ್ರಜಾವಾಣಿ ಶನಿವಾರ • ಸೆಪ್ಟೆಂಬರ್ 16, 2023



# ಅಪಾಯಕ್ಕೆ ಸಿಲುಕುತ್ತಿದೆ ಪ್ರಜಾಪ್ರಭುತ್ವ

## ದತ್ತಿ ಉಪನ್ಯಾಸದಲ್ಲಿ ರಾಜ್ಯಸಭಾ ಸದಸ್ಯ ಎಲ್.ಹನುಮಂತಯ್ಯ ಅಭಿಪ್ರಾಯ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಕ್ರಿಮಿನಲ್ ಅಪರಾಧದ ಹಿನ್ನೆಲೆ ಇರುವವರು ಅಧಿಕ ಸಂಖ್ಯೆಯಲ್ಲಿ ಶಾಸನ ಸಭೆ ಪ್ರವೇಶಿಸುತ್ತಿದ್ದಾರೆ. ಇದೇ ಸ್ಥಿತಿ ಮುಂದುವರಿದರೆ ಭಾರತದ ಪ್ರಜಾಪ್ರಭುತ್ವ ಅಪಾಯಕ್ಕೆ ಸಿಲುಕುತ್ತದೆ ಎಂದು ರಾಜ್ಯಸಭಾ ಸದಸ್ಯ ಎಲ್. ಹನುಮಂತಯ್ಯ ಹೇಳಿದರು.

ನಗರದಲ್ಲಿ ಗುರುವಾರ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಎಂವಿಆರ್ ಫೌಂಡೇಶನ್‌ನಿಂದ ಎಂ.ವಿ.ರಾಜಶೇಖರನ್ ಜನ್ಮದಿನದ ಪ್ರಯುಕ್ತ ಹಮ್ಮಿಕೊಂಡಿದ್ದ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ 'ಮಹಾತ್ಮಗಾಂಧಿ ಮತ್ತು ಬಿ.ಆರ್.ಅಂಬೇಡ್ಕರ್ ಅವರ ಆಶಯದ ಸಂವಿಧಾನ ಮತ್ತು ಪ್ರಜಾಪ್ರಭುತ್ವ' ವಿಷಯ ಕುರಿತು ಅವರು ಮಾತನಾಡಿದರು.

ಗಾಂಧಿ ಮತ್ತು ಅಂಬೇಡ್ಕರ್ ಅವರ ಮಧ್ಯೆ ಭಿನ್ನಾಭಿಪ್ರಾಯಗಳಿದ್ದರೂ,




ನಗರದಲ್ಲಿ ಗುರುವಾರ ಎಂ.ವಿ. ರಾಜಶೇಖರನ್ ಅವರ ಜನ್ಮದಿನಾಚರಣೆ ಪ್ರಯುಕ್ತ ಹಮ್ಮಿಕೊಂಡಿದ್ದ ದತ್ತಿ ಉಪನ್ಯಾಸದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ , ರಾಜ್ಯಸಭಾ ಸದಸ್ಯ ಎಲ್‌ಹನುಮಂತಯ್ಯ ಚರ್ಚೆಯಲ್ಲಿ ತೊಡಗಿದ್ದರು. ಎಚ್ ಹನುಮಂತಪ್ಪ, ಲೀಲಾದೇವಿ ಆರ್ ಪ್ರಸಾದ್ ಇದ್ದರು —ಪ್ರಜಾವಾಣಿ ಚಿತ್ರ

ಇಬ್ಬರ ಆಶಯಗಳೂ ಒಂದೇ ಆಗಿದ್ದವು. ಗಾಂಧೀಜಿ ಭಾರತ ಸ್ವಾತಂತ್ರ್ಯದ ನೇತೃತ್ವ ವಹಿಸಿದರೆ, ಅಂಬೇಡ್ಕರ್ ಸ್ವಾತಂತ್ರ್ಯ ನಂತರದ ಭಾರತದ ರೂಪುರೇಷೆ ಸಿದ್ಧಪಡಿಸಿದರು. ಅದರ ಫಲವಾಗಿ ಅಲ್ಪ ಅವಧಿಯಲ್ಲೇ ಭಾರತ ವಿಶ್ವದ ಅಗ್ರಗಣ್ಯ ರಾಷ್ಟ್ರಗಳ ಸಾಲಿಗೆ ಸೇರಿದೆ. ಅಪರಾಧ ಆರೋಪ ಹೊತ್ತವರು ಸಂಸತ್ ಸೇರಿದಂತೆ ಶಾಸನ ಸಭೆಗಳನ್ನು ಪ್ರವೇಶಿಸಿದರೆ ಗಾಂಧಿ, ಅಂಬೇಡ್ಕರ್ ಆಶಯಗಳಿಗೆ ಧಕ್ಕೆಯಾಗುತ್ತದೆ. ಜನರು ಎಚ್ಚೆತ್ತುಕೊಳ್ಳಬೇಕು. ತಮ್ಮ ಮತವನ್ನೇ ಪ್ರಜಾಪ್ರಭುತ್ವ ಗಟ್ಟಿಗೊಳಿಸುವ ಅಸ್ತ್ರವಾಗಿಸಿಕೊಳ್ಳಬೇಕು ಎಂದು ಸಲಹೆ ನೀಡಿದರು.

ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್ ಕಾರ್ಯಕ್ರಮ ಉದ್ಘಾಟಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ರಾಜ್ಯಸಭೆ ಮಾಜಿ ಸದಸ್ಯ ಎಚ್. ಹನುಮಂತಪ್ಪ, ಕಂದಾಯ ಇಲಾಖೆ ಉಪ ಕಾರ್ಯದರ್ಶಿ ಡಿ.ಎಸ್.ಕಲಾವತಿ, ಎಂವಿಆರ್ ಫೌಂಡೇಷನ್ ಅಧ್ಯಕ್ಷ ಮಂಜುನಾಥ ಪಿ.ಬಿಜ್ಜಳ್ಳಿ, ಕಾರ್ಯದರ್ಶಿ ಸಂಧ್ಯಾ ಪ್ರದೀಪ್‌ಕುಮಾರ್, ಏಷ್ಯಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಎಚ್. ಶಿವಲಿಂಗಯ್ಯ ಉಪಸ್ಥಿತರಿದ್ದರು.



ಬೆಂಗಳೂರಿನ ಗಾಂಧಿ ಭವನದಲ್ಲಿ ಎಂ.ವಿ.ರಾಜಶೇಖರನ್ ಜನ್ಮದಿನದ ಅಂಗವಾಗಿ ಏರ್ಪಡಿಸಿದ್ದ ದತ್ತಿ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್ ರಾಜಶೇಖರನ್ ಭಾವಚಿತ್ರಕ್ಕೆ ಪುಷ್ಪ ನಮನ ಅರ್ಪಿಸಿದರು. ರಾಜ್ಯಸಭಾ ಸದಸ್ಯ ಎಲ್.ಹನುಂಮತಯ್ಯ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಹಾಗೂ ಇತರರು ಇದ್ದಾರೆ.

# ಆದರ್ಶಗಳ ಮೂಲಕ ರಾಜಶೇಖರನ್ ಜೀವಂತ

ಬೆಂಗಳೂರು: ರಾಜಕೀಯ ಮುತ್ಸದ್ಧಿಯಾಗಿದ್ದ ಎಂ.ವಿ.ರಾಜಶೇಖರನ್ ಕೇಂದ್ರ ಸಚಿವರಾಗಿದ್ದರೂ ಸಾಮಾನ್ಯರಂತೆ ಬದುಕಿದರು. ಗಾಂಧಿಯ ತತ್ವವನ್ನು ಅವರು ಅನುಸರಿಸುತ್ತಿದ್ದರು ಎಂದು ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಎಂವಿಆರ್ ಫೌಂಡೇಶನ್ ಸಂಯುಕ್ತವಾಗಿ ಗುರುವಾರ ಏರ್ಪಡಿಸಿದ್ದ ಎಂ.ವಿ.ರಾಜಶೇಖರನ್ ಜನ್ಮದಿನದ ಪ್ರಯುಕ್ತ ಹಮ್ಮಿಕೊಂಡಿದ್ದ ದತ್ತಿ ಉಪನ್ಯಾಸ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ರಾಜಶೇಖರನ್ ಅವರು ಕೆಲಸದಲ್ಲಿ ಪ್ರಾಮಾಣಿಕತೆ, ಶಿಸ್ತು, ಶ್ರದ್ಧೆ ಹಾಗೂ ಸರಳ ಜೀವನ ಶೈಲಿಯನ್ನು ಅಳವಡಿಸಿಕೊಂಡಿದ್ದರು. ದಿ. ನಿಜಲಿಂಗಪ್ಪ ಹಾಗೂ ಅವರ ಅಳಿಯ ರಾಜಶೇಖರನ್ ಸರಳ ಜೀವನಕ್ಕೆ ಹೆಸರುವಾಸಿಯಾಗಿದ್ದರು ಎಂದು ನುಡಿದರು.

ನಿಜಲಿಂಗಪ್ಪ ಅವರು ಮುಖ್ಯಮಂತ್ರಿಯಾಗಿ, ರಾಜಶೇಖರನ್ ಕೇಂದ್ರ ಸಚಿವರಾಗಿದ್ದಾಗಲೂ ಜನಸಾಮಾನ್ಯರಂತೆ ಬಾಳಿ ಬದುಕಿದರು. ಅಧಿಕಾರಿದಲ್ಲಿ ಇದ್ದಾಗ ಸರಳವಾಗಿ ಬದುಕುವುದು ಗಾಂಧಿ ತತ್ವಗಳನ್ನು ನಂಬಿದವರಿಂದ ಮಾತ್ರ ಸಾಧ್ಯ. ಗಾಂಧಿ ತತ್ವಗಳನ್ನು ಅಳವಡಿಸಿಕೊಂಡು ಅವುಗಳನ್ನು ಪಾಲಿಸುವುದು ಅಷ್ಟು ಸುಲಭ ಅಲ್ಲ. ಆದರೆ ರಾಜಶೇಖರನ್ ತತ್ವಗಳನ್ನು ಬದುಕಿಗೆ ಅಳವಡಿಸಿಕೊಂಡು ನುಡಿದಂತೆ ನಡೆದರು ಎಂದು ಸ್ಮರಿಸಿದರು.

ಕೆಲವರು ಬದುಕಿದ್ದೂ ಸತ್ತಂತೆ ಕಾಣುತ್ತಾರೆ. ಇನ್ನು ಕೆಲವರು ಸತ್ತಮೇಲೂ ಜನರ ಮನಸ್ಸಿನಲ್ಲಿ ಇರುತ್ತಾರೆ. ರಾಜಶೇಖರನ್ ಸತ್ತಮೇಲೂ ಅವರ ಆದರ್ಶಗಳ ಮೂಲಕ ಜೀವಂತವಾಗಿದ್ದಾರೆ. ದೊರೆತ ಅಧಿಕಾರದ ಅವಕಾಶಗಳನ್ನು ಜನರ ಸೇವೆಗೆ ಬಳಸಿದ್ದರು. ಅಲ್ಲದೆ ಅಧಿಕಾರ ಇಲ್ಲದಿದ್ದಾಗಲೂ ಅವರು ಜನರ ಸೇವೆ ಮಾಡಿದ್ದರು ಎಂದು ಬಣ್ಣಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ರಾಜ್ಯಸಭೆ ಮಾಜಿ ಸದಸ್ಯ ಎಚ್.ಹನುಮಂತಪ್ಪ, ಕಂದಾಯ ಇಲಾಖೆ ಉಪ ಕಾರ್ಯದರ್ಶಿ ಡಿ.ಎಸ್. ಕಲಾವತಿ, ಎಂವಿಆರ್ ಫೌಂಡೇಶನ್ ಅಧ್ಯಕ್ಷ ಮಂಜುನಾಥ ಪಿ.ಬಿಜ್ಜಳ್ಳಿ, ಕಾರ್ಯದರ್ಶಿ ಸಂಧ್ಯಾ ಪ್ರದೀಪ್‌ಕುಮಾರ್, ವಿಷ್ಣಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಅಧ್ಯಕ್ಷ ಎಚ್.ಶಿವಲಿಂಗಯ್ಯ ಇದ್ದರು.

## ಪ್ರಜಾಪ್ರಭುತ್ವದ ಗಟ್ಟಿ ನೆಲೆಗೆ ಮತ ಅಸ್ತ್ರವಾಗಿ ಬಳಸಿ

ರಾಜ್ಯಸಭಾ ಸದಸ್ಯ ಎಲ್.ಹನುಂಮತಯ್ಯ, ದತ್ತಿ ಉಪನ್ಯಾಸ ನೀಡಿ ಮಾತನಾಡಿ ಗಾಂಧಿ ಮತ್ತು ಅಂಬೇಡ್ಕರ್ ಅವರ ಮಧ್ಯೆ ಭಿನ್ನಾಭಿಪ್ರಾಯಗಳಿದ್ದರೂ, ಅಂತಿಮವಾಗಿ ಅವರ ಆಶಯಗಳೂ ಒಂದೇ ಆಗಿದ್ದವು. ಗಾಂಧೀಜಿ ರಾಷ್ಟ್ರದ ಸ್ವಾತಂತ್ರ್ಯದ ನೇತೃತ್ವ ವಹಿಸಿದರೆ, ಅಂಬೇಡ್ಕರ್ ಸ್ವಾತಂತ್ರ್ಯಾನಂತರದ ಭಾರತದ ರೂಪುರೇಷ ಸಿದ್ಧಪಡಿಸಿದರು.

ಇಬ್ಬರ ಫಲವಾಗಿ ರಾಷ್ಟ್ರ ಅಲ್ಪ ಸಮಯದಲ್ಲೇ ವಿಶ್ವದ ಅಗ್ರಗಣ್ಯ ರಾಷ್ಟ್ರಗಳ ಸಾಲಿಗೆ ಸೇರಿತು. ಗಾಂಧೀಜಿ ಅವರ ಅಹಿಂಸೆ ಹಾಗೂ ಅಂಬೇಡ್ಕರ್ ಅವರ ಸಂವಿಧಾನದಿಂದ ಇದು ಸಾಧ್ಯವಾಯಿತು ಎಂದರು.

ಸತ್ಯ ಹಾಗೂ ಅಹಿಂಸೆ ಮೂಲಕ ರಾಷ್ಟ್ರಕ್ಕೆ ಸ್ವಾತಂತ್ರ ಬಂದಿದೆ. ಆದರೆ ಈಗ ಅಪರಾಧ ಸೇರಿದಂತೆ ಹಲವು ಕೆಟ್ಟ ಆರೋಪ ಹೊತ್ತವರು ಲೋಕಸಭೆ, ರಾಜ್ಯಸಭೆ ಸದಸ್ಯರಾಗಿ ಶಾಸನ ಸಭೆಗಳನ್ನು ಪ್ರವೇಶಿಸಿದರೆ ಗಾಂಧಿ, ಅಂಬೇಡ್ಕರ್ ಆಶಯಗಳಿಗೆ ಧಕ್ಕೆಯಾಗುತ್ತದೆ.

ಹೀಗಾಗಿ ಸಾರ್ವಜನಿಕರು ಎಚ್ಚೆತ್ತುಕೊಂಡು ಪ್ರಜಾಪ್ರಭುತ್ವ ಗಟ್ಟಿಗೊಳಿಸುವ ಹಾಗೂ ಜನರ ಸೇವೆಗೆ ಮುಡುಪಾಗಿಡುವವರನ್ನು ಆಯ್ಕೆ ಮಾಡಬೇಕು. ಸಾರ್ವಜನಿಕರು ತಮ್ಮ ಮತವನ್ನೇ ಪ್ರಜಾಪ್ರಭುತ್ವ ಗಟ್ಟಿಗೊಳಿಸುವ ಅಸ್ತ್ರವಾಗಿ ಪ್ರಯೋಗಿಸಬೇಕು ಎಮದು ಎಲ್. ಹನುಮಂತಯ್ಯ ಸಲಹೆ ನೀಡಿದರು.

ಉದಯವಾಣಿ ಶುಕ್ರವಾರ, ಸೆಪ್ಟೆಂಬರ್ 15, 2023

# ಎಂವಿಆರ್ ಅಪರೂಪದ ರಾಜಕಾರಣಿ



ಗಾಂಧಿ ಭವನದಲ್ಲಿ ಎಂ.ವಿ.ರಾಜಶೇಖರ್ ಜನ್ಮದಿನಾಚರಣೆ ಹಿನ್ನೆಲೆಯಲ್ಲಿ ಸಂವಿಧಾನ ಮತ್ತು ಪ್ರಜಾಪ್ರಭುತ್ವ' ಕುರಿತ ಉಪನ್ಯಾಸ ಕಾರ್ಯಕ್ರಮ ನಡೆಯಿತು.

**ಬೆಂಗಳೂರು:** ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ ತತ್ವ-ಆದರ್ಶಗಳನ್ನು ಅಳವಡಿಸಿಕೊಂಡ ಕೆಲವೇ ಕೆಲವು ರಾಜಕಾರಣಿಗಳಲ್ಲಿ ಕೇಂದ್ರ ಮಾಜಿ ಸಚಿವ ದಿವಂಗತ ಡಾ.ಎಂ.ವಿ.ರಾಜಶೇಖರನ್ ಕೂಡ ಒಬ್ಬರಾಗಿದ್ದರು ಎಂದು ರಾಜ್ಯಸಭಾ ಸದಸ್ಯ ಮತ್ತು ಸಾಹಿತಿ ಎಲ್. ಹನುಮಂತಯ್ಯ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ಎಂ.ವಿ.ಆರ್.ಫೌಂಡೇಷನ್ ಗುರುವಾರ ಗಾಂಧಿ ಭವನದಲ್ಲಿ ಎಂ.ವಿ.ರಾಜಶೇಖರ್ ಜನ್ಮದಿನಾಚರಣೆ ಹಿನ್ನೆಲೆಯಲ್ಲಿ ಹಮ್ಮಿಕೊಂಡಿದ್ದ 'ಮಹಾತ್ಮ ಗಾಂಧಿ ಮತ್ತು ಡಾ. ಬಿ.ಆರ್.ಅಂಬೇಡ್ಕರ್ ಅವರ ಆಶಯದ ಸಂವಿಧಾನ ಮತ್ತು ಪ್ರಜಾಪ್ರಭುತ್ವ' ಕುರಿತ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದರು. ಎಂ.ವಿ.ರಾಜಶೇಖರನ್ ಅವರು ರಾಜ್ಯಕಂಡ ಶ್ರೇಷ್ಠ ರಾಜಕಾರಣಿ. ಅವರು ವಿದ್ಯಾರ್ಥಿ ದಿಸೆಯಲ್ಲೇ ಗಾಂಧೀಜಿ ಆದರ್ಶಗಳನ್ನು ಅಳವಡಿಕೆ ಮಾಡಿಕೊಂಡಿದ್ದರು ಎಂದರು.

ಕೋಟ್ಯಂತರ ಭಾರತೀಯರ ಹೋರಾಟದ ಫಲವಾಗಿ ಇಂದು ಸ್ವಾತಂತ್ರ್ಯ ಬಂದಿದೆ.ಆದರೆ ತ್ಯಾಗಬಲಿದಾನದ ಮೂಲಕ ಪಡೆದ ಸ್ವಾತಂತ್ರ್ಯ ಜನ ಸಾಮಾನ್ಯದ ಕೈ ತಪ್ಪಿಹೋಗುವ ಆತಂಕ ಮೂಡಿದೆ, ಅಪರಾಧ ಹಿನ್ನೆಲೆವುಳ್ಳವರು ಸಂಸತ್ತಿಗೆ ಆಯ್ಕೆಯಾಗುತ್ತಿದ್ದಾರೆ. ಶ್ರೀಮಂತರು ಕೂಡ ಅಧಿಕ ಸಂಖ್ಯೆಯಲ್ಲಿ ಆಯ್ಕೆ ಆಗುತ್ತಿದ್ದಾರೆ. ಹೀಗಾದರೆ ಪ್ರಜಾಪ್ರಭುತ್ವದ ಆಶಯ ಪೂರ್ಣವಾಗುವುದಿಲ್ಲ ಎಂದರು.

ಶೇ.1 ಜನರ ಬಳಿ ಅಧಿಕಾರವಿದೆ. ಶೇ.50 ರಷ್ಟು ಆಸ್ತಿ ಕೇಂದ್ರೀಕೃತವಾಗಿದೆ. ಶೇ.90 ಜನರು ಶೇ.20 ಭಾಗ ಆಸ್ತಿಯನ್ನು ಹಂಚಿಕೊಂಡಿದ್ದಾರೆ. ಆಸ್ತಿ ಮತ್ತು ಸಂಪತ್ತಿನ ವಿಕೇಂದ್ರೀಕರಣ ಆಗದ ಹೊರತು ಪ್ರಜಾಪ್ರಭುತ್ವ ಯಶಸ್ವಿಯಾಗುವುದಿಲ್ಲ ಎಂದರು.

ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್ ಮಾತನಾಡಿ, ಎಂ.ವಿ.ರಾಜಶೇಖರ್ ಹಲವು ವಿಚಾರಗಳಲ್ಲಿ ನಮಗೆ ಮಾದರಿಯಾಗಿ ನಿಲ್ಲುತ್ತಾರೆ. ನಿಜಲಿಂಗಪ್ಪ ಅವರು ಮುಖ್ಯಮಂತ್ರಿಯಾಗಿದ್ದಾಗಲೂ ಅವರ ಅಳಿಯ ಎಂಬ ಅಹಂ ಇಲ್ಲದೆ ಸರಳ ರೀತಿಯಲ್ಲಿ ಅವರ ನಡೆ ಇತ್ತು ಎಂದು ಸ್ಮರಿಸಿದರು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಎಂವಿಆರ್ ಫೌಂಡೇಷನ್ ಅಧ್ಯಕ್ಷ ಮಂಜುನಾಥ ಪಿ.ಬಿಜ್ಜಳ್ಳಿ ಕಂದಾಯ ಇಲಾಖೆ ಉಪ ಕಾರ್ಯದರ್ಶಿ .ಎಸ್. ಕಲಾವತಿ ಇತರರಿದ್ದರು.

ಈ ಸಂಜೆ

Sep 14, 2023



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಎಂವಿಆರ್ ಫೌಂಡೇಷನ್ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿಂದು ಹಮ್ಮಿಕೊಂಡಿದ್ದ ಡಾ.ಎಂ.ವಿ. ರಾಜಶೇಖರನ್ ಅವರ ಜನ್ಮ ದಿನಾಚರಣೆ ಹಾಗೂ ದತ್ತಿ ಉಪನ್ಯಾಸ ಕಾರ್ಯಕ್ರಮವನ್ನು ಮಾಜಿ ಸಚಿವೆ ಲೀಲಾದೇವಿ ಆರ್. ಪ್ರಸಾದ್ ಉದ್ಘಾಟಿಸಿದರು. ನಾಡೋಜ ಡಾ.ವೂಡೆ ಪಿ.ಕೃಷ್ಣ, ಸಾಹಿತಿ ಡಾ.ಎಲ್. ಹನುಮಂತಯ್ಯ, ಕಂದಾಯ ಇಲಾಖೆಯ ಉಪಕಾರ್ಯದರ್ಶಿ ಕಲಾವತಿ, ಮಂಜುನಾಥ್ ಪಿ.ಬಿಡ್ಡಳ್ಳಿ, ಸಂಧ್ಯಾ ಪ್ರದೀಪ್‌ಕುಮಾರ್, ಇಂದಿರಾಕೃಷ್ಣಪ್ಪ ಮತ್ತಿತರರಿದ್ದರು.

ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಸೋಮವಾರ 11 ಸೆಪ್ಟೆಂಬರ್ 2023
11 SEPTEMBER 2023

### ಮಾಜಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅಭಿಮತ

# ಹೊಸ ಮಾರ್ಗ ಹಾಕಿಕೊಟ್ಟ ಹಾರನಹಳ್ಳಿ ರಾಮಸ್ವಾಮಿ

ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಹಾರನಹಳ್ಳಿ ರಾಮಸ್ವಾಮಿ ಅವರು ರಾಜಕೀಯವಾಗಿ ಭಿನ್ನದಾರಿಯಲ್ಲಿದ್ದರೂ ಅಜಾತ ಶತ್ರುವಿನಂತೆ ಎಲ್ಲರೊಡನೆ ಒಂದಾಗಿ ಬಾಳಿ ಹೊಸ ಮಾರ್ಗವನ್ನು ಹಾಕಿಕೊಟ್ಟ ಧೀಮಂತ ನಾಯಕ ಎಂದು ಮಾಜಿ ಸಿಎಂ ಬಿ.ಎಸ್. ಯಡಿಯೂರಪ್ಪ ಹೇಳಿದ್ದಾರೆ.

ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಭಾರತೀಯ ವಿದ್ಯಾಭವನ ಹಾಗೂ ಲೋಕ ಶಿಕ್ಷಣ ಟ್ರಸ್ಟ್ ಜಂಟಿಯಾಗಿ ನಗರದ ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣದಲ್ಲಿ ಭಾನುವಾರ ಆಯೋಜಿಸಿದ್ದ 'ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸ' ಕಾರ್ಯಕ್ರಮದಲ್ಲಿ ಮಾತನಾಡಿದರು.

ರಾಜಕಾರಣಿಗಳ ಕಿವಿ ಯಾವಾಗಲೂ ತೆರೆದಿರಬೇಕು. ಸಮಾಜದ ಕಷ್ಟ- ಸುಖಗಳ ಬಗ್ಗೆ ಕಣ್ತೆರೆದು ನೋಡಿ ಒಳಗಣ್ಣಿನಿಂದ ತಮ್ಮ ನಿಲುವು ರೂಪಿಸಿಕೊಳ್ಳಬೇಕು ಎಂದು ರಾಮಸ್ವಾಮಿ ತೋರಿಸಿಕೊಟ್ಟರು. ಲೋಕ ಶಿಕ್ಷಣ ಟ್ರಸ್ಟ್‌ನ ಅಧ್ಯಕ್ಷರಾದ ಬಳಿಕ ಅವರು ಹಲವು ಪತ್ರಿಕೆಗಳಿಗೆ ಹೊಸ ಸಂವಿಧಾನಶೀಲತೆ ತಂದುಕೊಟ್ಟರು. ಹಾಗಾಗಿ ಹಾರನಹಳ್ಳಿ ರಾಮಸ್ವಾಮಿ ಎಂದರೆ ಥಟ್ಟನೆ ನೆನಪಾಗುವುದು ಲೋಕ ಶಿಕ್ಷಣ ಟ್ರಸ್ಟ್. ರಾಜಕಾರಣಿಯಾಗಿ, ಶಾಸಕರಾಗಿ ಹಾಗೂ ಸಚಿವರಾಗಿ ಸೇವೆ ಸಲ್ಲಿಸಿದರು. ಅರ್ಧ ಶತಮಾನಕ್ಕೂ ಹೆಚ್ಚುಕಾಲ ಸಾರ್ವಜನಿಕರ ಸೇವೆಯಲ್ಲಿ ತೊಡಗಿಸಿಕೊಂಡಿದ್ದ ಅವರ ಸಾಧನೆ, ಚಿಂತನೆ ಹಾಗೂ ಕಳಂಕರಹಿತ ವ್ಯಕ್ತಿತ್ವ ಮುಂದಿನ ತಲೆಮಾರುಗಳಿಗೂ ಮಾದರಿ ಎಂದರು.

**ರಾಜಗುರುವಿನಂತೆ ಮಾರ್ಗದರ್ಶಕ:** ಸಚಿವ ಎಚ್.ಕೆ. ಪಾಟೀಲ್ ಅವರ ತಂದೆ ಕೆ.ಎಚ್. ಪಾಟೀಲ್ ಕೂಡ ಹಾರನಹಳ್ಳಿ ರಾಮಸ್ವಾಮಿ ಪ್ರಭಾವಕ್ಕೆ ಒಳಗಾಗಿದ್ದರು. 2006ರಲ್ಲಿ ಮೊದಲ ಬಾರಿಗೆ ಬಿಜೆಪಿ, ಜೆಡಿಎಸ್ ಜತೆ ಸೇರಿ ರಾಜ್ಯದಲ್ಲಿ ಸಮ್ಮಿಶ್ರ ಸರ್ಕಾರ ರಚಿಸಿದಾಗ ನಮಗೆಲ್ಲ ರಾಜಗುರುವಿನಂತೆ ಮಾರ್ಗದರ್ಶಕರಾಗಿದ್ದರು. ಆಡಳಿತ ಸುಧಾರಣೆ ಆಯೋಗದ ಅಧ್ಯಕ್ಷರಾಗಿದ್ದ ವೇಳೆ ಅವರು ಅಗತ್ಯವಿರುವೆಡೆ ಕಾನೂನು ತಿದ್ದುಪಡಿ ತಂದರು ಎಂದು ಯಡಿಯೂರಪ್ಪ ಹೇಳಿದರು.

'ವರ್ತಮಾನದಲ್ಲಿ ಮಹಾತ್ಮ ಗಾಂಧಿ ಜೀವನ ಮತ್ತು ವೈಚಾರಿಕತೆಯ ಪ್ರಸ್ತುತತೆ' ಕುರಿತು ಶಿಕ್ಷಣತಜ್ಞ ಡಾ. ಗುರುರಾಜ ಕರಜಗಿ ಉಪನ್ಯಾಸ ನೀಡಿದರು. ವಿಧಾನ ಪರಿಷತ್ ಸದಸ್ಯ ಯು.ಬಿ. ವೆಂಕಟೇಶ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್ ಮತ್ತಿತರರಿದ್ದರು.


ವಿಜಯವಾಣಿ ಚಿತ್ರ

ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ಹಾರನಹಳ್ಳಿ ರಾಮಸ್ವಾಮಿ' ಹಾಗೂ ಮಹಾತ್ಮಾ ಗಾಂಧಿ ಅವರ ಭಾವಚಿತ್ರಕ್ಕೆ ಮಾಜಿ ಸಿಎಂ ಯಡಿಯೂರಪ್ಪ ಪುಷ್ಪನಮನ ಸಲ್ಲಿಸಿದರು. ಎಂಎಲ್ಸಿ ಯು.ಬಿ.ವೆಂಕಟೇಶ್, ಶಿಕ್ಷಣ ತಜ್ಞ ಗುರುರಾಜ ಕರಜಗಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್ ಮತ್ತಿತರರಿದ್ದರು.

## ಅಖಂಡ ಕರ್ನಾಟಕ ಪರಿಕಲ್ಪನೆ

ಕರ್ನಾಟಕ ಏಕೀಕರಣದ ಪರಿಕಲ್ಪನೆಗೆ ರಾಜ್ಯಾದ್ಯಂತ ಮಾನ್ಯತೆ ಸಿಗುವಂತೆ ಹೋರಾಟದ ಕಿಚ್ಚು ಹಬ್ಬಿಸಿದ ರಾಮಸ್ವಾಮಿ ಬರಹಗಾರರಾಗಿ, ಸಂಸದೀಯ ಪಟುವಾಗಿ, ಸರ್ಕಾರದ ನೀತಿ ನಿರೂಪಿಸಲು ಅನುಭವದ ಧಾರೆಯಾಗಿದ್ದರು. ಅವರ ಕುರಿತ ಉಪನ್ಯಾಸಗಳು ರಾಜ್ಯಾದ್ಯಂತ ನಡೆಯಬೇಕು. ಹಾಗಾದಾಗ ಮಾತ್ರ ಅವರ ಅಖಂಡ ಕರ್ನಾಟಕದ ಪರಿಕಲ್ಪನೆ ನಿಜಕ್ಕೂ ಸಾರ್ಥಕವಾಗಲಿದೆ ಎಂದು ಬಿಎಸ್‌ವೈ ಹೇಳಿದರು.

ಗಾಂಧಿ ಬಗ್ಗೆ ಅನಗತ್ಯ ಟೀಕೆ, ಟಿಪ್ಪಣಿ ಹಾಗೂ ಬಾಯಿಚಪಲಕ್ಕಾಗಿ ಮಾತಾಡಬಾರದು. ಇವತ್ತಿನ ದಿನಮಾನಗಳಿಗೆ ಗಾಂಧಿ ವಿಚಾರಧಾರೆಗಳು, ಶಾಂತಿ, ಅಹಿಂಸೆ, ಪ್ರೀತಿ ಹಾಗೂ ಭ್ರಾತೃತ್ವದ ಅವಶ್ಯತೆಯಿದೆ. ಭೂತಾನ್‌ಗೆ ಹೋಲಿಸಿದರೆ ನಮ್ಮ ರಾಷ್ಟ್ರದಲ್ಲಿ ಸಮಾಧಾನ, ತೃಪ್ತಿ ಮತ್ತು ಸಂತೋಷದ ಕೊರತೆ ಎದ್ದು ಕಾಣುತ್ತಿದ್ದು, ಸಮುದಾಯಗಳಲ್ಲಿ ಸಮಾಧಾನದ ಅವಶ್ಯಕತೆಯಿದೆ.

ಕಾನೂನು ಸಚಿವ

ವಿಜಯ ಕರ್ನಾಟಕ ಸೋಮವಾರ,11 ಸೆಪ್ಟೆಂಬರ್ 2023

# ಗಾಂಧಿ ಜತೆ ಮನುಷ್ಯತ್ವ ನಿರ್ಗಮಿಸಿತು

■ ವಿಕ ಸುದ್ದಿಲೋಕ ಬೆಂಗಳೂರು

''ಸತ್ಯ, ಅಹಿಂಸೆಯನ್ನೇ ನಂಬಿ ಬದುಕು ಸಾಗಿಸಿದ್ದ ಮಹಾತ್ಮ ಗಾಂಧಿಯವರನ್ನು ಕೊಂದಾಗಲೇ ದೇಶದಲ್ಲಿದ್ದ ಮನುಷ್ಯತ್ವದ ಹತ್ಯೆಯಾಗಿದೆ. ಇನ್ನೂ 10 ಸಾವಿರ ವರ್ಷಗಳು ಕಳೆದರೂ ಅವರ ಚಿಂತನೆ, ತತ್ವಾದರ್ಶಗಳು ಪ್ರಸ್ತುತವಾಗಿರಲಿವೆ,'' ಎಂದು ಶಿಕ್ಷಣ ತಜ್ಞ ಡಾ. ಗುರುರಾಜ ಕರ್ಜಗಿ ಅಭಿಪ್ರಾಯಪಟ್ಟರು.

ಭಾರತೀಯ ವಿದ್ಯಾ ಭವನ, ಲೋಕ ಶಿಕ್ಷಣ ಟ್ರಸ್ಟ್ ಹಾಗೂ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಭವನದಲ್ಲಿ ಭಾನುವಾರ ಆಯೋಜಿಸಿದ್ದ ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಕಾರ್ಯಕ್ರಮದಲ್ಲಿ 'ವರ್ತಮಾನದಲ್ಲಿ ಮಹಾತ್ಮ ಗಾಂಧಿಯವರ ಜೀವನ ಮತ್ತು ವೈಚಾರಿಕತೆ' ವಿಷಯ ಕುರಿತು ಅವರು ಮಾತನಾಡಿದರು.



ಗಾಂಧೀಜಿ ಹಾಗೂ ಹಾರನಹಳ್ಳಿ ರಾಮಸ್ವಾಮಿ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಲಾಯಿತು.

''ಪ್ರಪಂಚದ ಶ್ರೇಷ್ಠ ನಾಯಕರ ಪಟ್ಟಿಯಲ್ಲಿ ಗಾಂಧಿ ಅಗ್ರ ಪಂಕ್ತಿಯಲ್ಲಿದ್ದಾರೆ. ಅವರ ಭಕ್ತನಾಗುವುದು ಸುಲಭ. ಆದರೆ, ಅವರಂತೆ ಬದುಕು ಸಾಗಿಸುವುದು ಕಷ್ಟ. ನುಡಿದಂತೆ ನಡೆದು ಜೀವನ ಸಾಗಿಸಿದ್ದು, ಜಗತ್ತಿಗೆ ಮಾದರಿಯಾಗಿದೆ. ಜಿ-20 ಶೃಂಗಸಭೆಗೆ ದೆಹಲಿಗೆ ಬಂದಿಳಿದ 20 ರಾಷ್ಟ್ರಗಳ ನಾಯಕರು ಗಾಂಧಿ ಪ್ರತಿಮೆ ಎದುರು ತಲೆ ಬಾಗಿ ಗೌರವ ಸಲ್ಲಿಸಿದ್ದು, ಅವರ ಪ್ರಸ್ತುತತೆಯನ್ನು ತೋರಿಸುತ್ತದೆ'', ಎಂದರು.

ಕಾನೂನು ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ''ಇಡೀ ಜಗತ್ತಿನ ನಾಯಕರೇ ತಲೆ ಬಾಗಿ ಗೌರವಿಸುವ ಗಾಂಧಿ ಬಗ್ಗೆ ಕೆಲ ಕೆಟ್ಟ ಮನಸ್ಥಿತಿಯ ರಾಜಕಾರಣಿಗಳು ವಿನಾಕಾರಣ ಟೀಕೆ-ಟಿಪ್ಪಣಿ ಮಾಡಿ, ದೇಶದ ಗೌರವಕ್ಕೆ ಧಕ್ಕೆ ತರುತ್ತಿದ್ದಾರೆ,'' ಎಂದರು.

ಮಾಜಿ ಸಿಎಂ ಬಿ.ಎಸ್. ಯಡಿಯೂರಪ್ಪ ಮಾತನಾಡಿ, ''ಗಾಂಧಿಯವರ ತತ್ವಾದರ್ಶಗಳನ್ನು ಅಳವಡಿಸಿಕೊಂಡಿದ್ದ ಹಾರನಹಳ್ಳಿ ರಾಮಸ್ವಾಮಿ ಸಮಾಜ ಮುಖಿಯಾಗಿ ಬದುಕಿದ್ದರು. ರಾಜ್ಯಕ್ಕೆ ಅವರ ಕೊಡುಗೆ ಅನನ್ಯವಾಗಿದೆ,'', ಎಂದರು.

ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷ ಯು.ಬಿ. ವೆಂಕಟೇಶ್ ಅಧ್ಯಕ್ಷತೆ ವಹಿಸಿದ್ದರು. ಅಶೋಕ ಹಾರನಹಳ್ಳಿ, ನಾಡೋಜ ವೂಡೆ ಪಿ. ಕೃಷ್ಣ, ಎಚ್.ಎನ್. ಸುರೇಶ್, ಎನ್.ವೈ. ಹನುಮಂತಪ್ಪ, ಶಾಸಕ ಸಿ.ಕೆ. ರಾಮಮೂರ್ತಿ ಉಪಸ್ಥಿತರಿದ್ದರು.

ಪ್ರಜಾವಾಣಿ
ಸೋಮವಾರ • ಸೆಪ್ಟೆಂಬರ್ 11, 2023

## ಬಿಜೆಪಿ ನಾಯಕ ಬಿ.ಎಸ್. ಯಡಿಯೂರಪ್ಪ ಹೇಳಿಕೆ

# ಹೋರಾಟದ ಕಿಚ್ಚುಹಚ್ಚಿದ್ದ ರಾಮಸ್ವಾಮಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಅಖಂಡ ಕರ್ನಾಟಕ ಸ್ಥಾಪನೆಯು ಹಾರನಹಳ್ಳಿ ರಾಮಸ್ವಾಮಿ ಅವರ ಕಲ್ಪನೆಯ ಕೂಸಾಗಿತ್ತು. ಅವರು ಕರ್ನಾಟಕ ಏಕೀಕರಣ ಪರಿಕಲ್ಪನೆಯನ್ನು ಹೊತ್ತು ಅದಕ್ಕೆ ಮಾನ್ಯತೆ ಸಿಗುವಂತೆ ರಾಜ್ಯದಾದ್ಯಂತ ಹೋರಾಟದ ಕಿಚ್ಚುಹಚ್ಚಿದ್ದರು' ಎಂದು ಬಿಜೆಪಿ ಸಂಸದೀಯ ಮಂಡಳಿ ಸದಸ್ಯ ಬಿ.ಎಸ್.ಯಡಿಯೂರಪ್ಪ ಭಾನುವಾರ ಇಲ್ಲಿ ಹೇಳಿದರು.

ಭಾರತೀಯ ವಿದ್ಯಾಭವನ, ಲೋಕ ಶಿಕ್ಷಣ ಟ್ರಸ್ಟ್ ಆಶ್ರಯದಲ್ಲಿ ಆಯೋಜಿಸಿದ್ದ ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸದಲ್ಲಿ ಮಾತನಾಡಿದ ಅವರು, 'ರಾಜಕಾರಣಿಗಳ ಕಿವಿಗಳು ಎಂದೂ ತೆರೆದಿರಬೇಕು ಎಂಬ ಎಚ್ಚರಿಕೆ ಗಂಟೆಯನ್ನು ರಾಮಸ್ವಾಮಿ ಅವರು ಧ್ವನಿಸುತ್ತಲೇ ಇದ್ದರು. ಸಮಾಜದ ಕಷ್ಟಸುಖಗಳನ್ನು ಕಣ್ತೆರೆದು ನೋಡಿ ಒಳಗಣ್ಣಿನಿಂದ ನಿಲುವು ರೂಪಿಸಿಕೊಳ್ಳಬೇಕು ಎಂಬುದು ಅವರ ಉಪದೇಶ ಮಾತ್ರ ಆಗಿರಲಿಲ್ಲ. ನುಡಿದಂತೆ ನಡೆದ ಸಜ್ಜನ ರಾಜಕಾರಣಿ ಅವರಾಗಿದ್ದರು' ಎಂದು ಹೇಳಿದರು.

'ರಾಮಸ್ವಾಮಿ ಎಂದ ಕೂಡಲೇ ಲೋಕ ಶಿಕ್ಷಣ ಟ್ರಸ್ಟ್ ನೆನಪಾಗುತ್ತದೆ. ಶಾಸಕರಾಗಿ, ಸಚಿವರಾಗಿ ಉತ್ತಮ ಕೆಲಸ ಮಾಡಿದ್ದರು. ಮುಂದಿನ ತಲೆಮಾರಿಗೂ ಅವರ ಆದರ್ಶಗಳು ಪ್ರಭಾವ ಬೀರುತ್ತವೆ' ಎಂದರು.

ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಖಾತೆ ಸಚಿವ ಎಚ್.ಕೆ.ಪಾಟೀಲ ಮಾತನಾಡಿ, 'ಬಾಯಿಚಪಲ ಹಾಗೂ ಪ್ರಚಾರಕ್ಕಾಗಿ ಮಹನೀಯರನ್ನು ಕೆಲವರು ಟೀಕಿಸುತ್ತಿದ್ದಾರೆ' ಎಂದು ಬೇಸರ ವ್ಯಕ್ತಪಡಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಲೋಕ ಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ ಮಾತನಾಡಿದರು.

ಶಿಕ್ಷಣ ತಜ್ಞ ಗುರುರಾಜ ಕರಜಗಿ ಅವರು 'ವರ್ತಮಾನದಲ್ಲಿ ಮಹಾತ್ಮ ಗಾಂಧಿ ಜೀವನ ಹಾಗೂ ವೈಚಾರಿಕತೆಯ ಪ್ರಸ್ತುತತೆ' ಕುರಿತು ಉಪನ್ಯಾಸ ನೀಡಿದರು. ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್.ಸುರೇಶ್, ಶಾಸಕ ಸಿ.ಕೆ.ರಾಮಮೂರ್ತಿ ಇದ್ದರು.



ಶಿಕ್ಷಣ ತಜ್ಞ ಗುರುರಾಜ ಕರಜಗಿ ಅವರು ಮಹಾತ್ಮ ಗಾಂಧಿ ಹಾಗೂ ಹಾರನಹಳ್ಳಿ ರಾಮಸ್ವಾಮಿ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು. (ಎಡದಿಂದ) ಸಚಿವ ಎಚ್.ಕೆ.ಪಾಟೀಲ, ಬಿ.ಎಸ್. ಯಡಿಯೂರಪ್ಪ, ಅಶೋಕ ಹಾರನಹಳ್ಳಿ, ವಿಧಾನ ಪರಿಷತ್ ಸದಸ್ಯ ಯು.ಬಿ.ವೆಂಕಟೇಶ್, ವೂಡೇ ಪಿ. ಕೃಷ್ಣ ಇದ್ದರು. ಪ್ರಜಾವಾಣಿ ಚಿತ್ರ

ಕನ್ನಡಪ್ರಭ ಸೋಮವಾರ 11.9.2023

# ಕರ್ನಾಟಕ ಏಕೀಕರಣ ಕಿಚ್ಚು ಹಬ್ಬಿಸಿದ್ದ ಹಾರನಹಳ್ಳಿ ರಾಮಸ್ವಾಮಿ: ಬಿಎಸ್‌ವೈ

## ಸರ್ಕಾರಕ್ಕೆ ರಾಜಗುರುವಂತೆ ಮಾರ್ಗದರ್ಶನ ಮಾಡಿದ್ದರು



ಅರಮನೆ ರಸ್ತೆಯ ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣದಲ್ಲಿ ಆಯೋಜಿಸಿದ್ದ 'ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸ' ಸಮಾರಂಭವನ್ನು ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಉದ್ಘಾಟಿಸಿದರು. ಎಚ್.ಕೆ.ಪಾಟೀಲ್, ಯು.ಬಿ.ವೆಂಕಟೇಶ್, ಅಶೋಕ ಹಾರನಹಳ್ಳಿ, ಡಾ। ಗುರುರಾಜ ಕರಜಗಿ, ಸುರೇಶ್, ವೂಡೇ ಪಿ.ಕೃಷ್ಣ ಹಾಜರಿದ್ದರು.

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮಾಜಿ ಸಚಿವ ದಿ.ಹಾರನಹಳ್ಳಿ ರಾಮಸ್ವಾಮಿ ಅವರು ಅಜಾತಶತ್ರುವಾಗಿದ್ದರು. ಅಖಂಡ ಕರ್ನಾಟಕಕ್ಕೆ ಹಂಬಲಿಸಿ ಕರ್ನಾಟಕ ಏಕೀಕರಣ ಹೋರಾಟದ ಕಿಚ್ಚನ್ನು ಹಬ್ಬಿಸಿದ್ದರು ಎಂದು ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಸ್ಮರಿಸಿದರು.

ಭಾರತೀಯ ವಿದ್ಯಾಭವನ ಮತ್ತು ಲೋಕ ಶಿಕ್ಷಣ ಟ್ರಸ್ಟ್ ಆಶ್ರಯದಲ್ಲಿ ಅರಮನೆ ರಸ್ತೆಯ ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣದಲ್ಲಿ ಭಾನುವಾರ ಆಯೋಜಿಸಿದ್ದ 'ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸ' ಸಮಾರಂಭವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ರಾಮಸ್ವಾಮಿ ಅವರು ರಾಜಕೀಯವಾಗಿ ಬೇರೆ ದಾರಿಯಲ್ಲಿದ್ದರೂ ಎಲ್ಲರೊಂದಿಗೂ ಸ್ನೇಹಪರವಾಗಿ ನಡೆದುಕೊಳ್ಳುತ್ತಾ ಅಜಾತಶತ್ರುವಾಗಿದ್ದರು. ಕರ್ನಾಟಕ ಅಖಂಡವಾಗಿ ಇರಬೇಕು ಎಂಬ ಮಹದಾಸೆ ಹೊಂದಿದ್ದರು. ಕರ್ನಾಟಕ ಏಕೀಕರಣ ಆಗಬೇಕು ಎಂದು ಹೋರಾಟದ ಕಿಚ್ಚು ಎಲ್ಲೆಡೆ ಹಬ್ಬುವಂತೆ ಮಾಡುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿ ಅದರಲ್ಲಿ ಸಫಲರಾದರು ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

2006 ರಲ್ಲಿ ಬಿಜೆಪಿ-ಜೆಡಿಎಸ್ ಸಮ್ಮಿಶ್ರ ಸರ್ಕಾರ ರಾಜ್ಯದಲ್ಲಿ ಆಡಳಿತ ನಡೆಸುತ್ತಿದ್ದಾಗ ಹಾರನಹಳ್ಳಿ ರಾಮಸ್ವಾಮಿ ಅವರು ರಾಜಗುರುವಿನಂತೆ ನಮಗೆ ಮಾರ್ಗದರ್ಶನ ಮಾಡಿದ್ದರು. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾಗಿರುವ ಎಚ್.ಕೆ.ಪಾಟೀಲ್ ಅವರ ತಂದೆ ಕೆ.ಎಚ್.ಪಾಟೀಲ್ ಅವರೂ ಸಹ ರಾಮಸ್ವಾಮಿ ಅವರಿಂದ ಪ್ರಭಾವಕ್ಕೆ ಒಳಗಾಗಿದ್ದರು ಎಂದು ನೆನಪಿಸಿಕೊಂಡರು.

ಕಾನೂನು ಸಚಿವ ಎಚ್.ಕೆ.ಪಾಟೀಲ್, ವಿಧಾನಪರಿಷತ್ ಸದಸ್ಯ ಯು.ಬಿ.ವೆಂಕಟೇಶ್, ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ, ಶಿಕ್ಷಣ ತಜ್ಞ ಡಾ। ಗುರುರಾಜ ಕರಜಗಿ, ಭಾರತೀಯ ವಿದ್ಯಾಭವನದ ನಿರ್ದೇಶಕ ಸುರೇಶ್, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ ಇದ್ದರು.

ಸಂಯುಕ್ತ ಕರ್ನಾಟಕ
ಭಾನುವಾರ 10 ಸೆಪ್ಟೆಂಬರ್ 2023

# ಇಂದು ದತ್ತಿ ಉಪನ್ಯಾಸ ಕಾರ್ಯಕ್ರಮ

ಸ್ವಾತಂತ್ರ್ಯ ಹೋರಾಟಗಾರ ಹಾರನಹಳ್ಳಿ ರಾಮಸ್ವಾಮಿ ಅವರ ನೆನಪಿಗಾಗಿ ಸೆಪ್ಟೆಂಬರ್ 10ರಂದು ಬೆಳಗ್ಗೆ 10.30ಕ್ಕೆ ದತ್ತಿ ಉಪನ್ಯಾಸ ಏರ್ಪಡಿಸಲಾಗಿದೆ. ಭಾರತೀಯ ವಿದ್ಯಾಭವನ, ಲೋಕ ಶಿಕ್ಷಣ ಟ್ರಸ್ಟ್ ಇವರ ಸಂಯುಕ್ತ ಆಶ್ರಯ ಹಾಗೂ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಅರಮನೆ ರಸ್ತೆ, ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಭಾಂಗಣದಲ್ಲಿ ಏರ್ಪಡಿಸಲಾಗಿರುವ ದತ್ತಿ ಉಪನ್ಯಾಸವನ್ನು ಮಾಜಿ ಮುಖ್ಯ ಮಂತ್ರಿ ಬಿ.ಎಸ್. ಯಡಿಯೂರಪ್ಪ ಉದ್ಘಾಟಿಸಲಿದ್ದಾರೆ. ಲೋಕ ಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ ಅವರು ಪ್ರಾಸ್ತಾವಿಕ ನುಡಿಗಳನ್ನಾಡಲಿದ್ದಾರೆ. ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷ ಯು.ಬಿ. ವೆಂಕಟೇಶ್ ಅಧ್ಯಕ್ಷತೆ





ವಹಿಸಲಿದ್ದಾರೆ. ಶಿಕ್ಷಣ ತಜ್ಞರಾದ ಡಾ. ಗುರುರಾಜ ಕರಜಗಿ ಅವರು ವರ್ತಮಾನದಲ್ಲಿ ಮಹಾತ್ಮಗಾಂಧಿ ಜೀವನ ಮತ್ತು ವೈಚಾರಿಕತೆಯ ಪ್ರಸ್ತುತತೆ ವಿಷಯದ ಕುರಿತು ದತ್ತಿ ಉಪನ್ಯಾಸ ನೀಡಲಿದ್ದಾರೆ. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್, ಮಾಜಿ ಸಚಿವ ಹಾಗೂ ಕರ್ನಾಟಕ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಮುಖ್ಯ ಆಯುಕ್ತರಾದ ಪಿ.ಜಿ.ಆರ್. ಸಿಂಧ್ಯಾ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್ ಅವರುಗಳು ತಲೆಮಾರುಗಳ ಮೇಲೆ ರಾಷ್ಟ್ರಪಿತನ ಪ್ರಭಾವ ಕುರಿತು ಮಾತನಾಡಲಿದ್ದಾರೆ. ಭಾರತೀಯ ವಿದ್ಯಾಭವನದ ನಾಗಲಕ್ಷ್ಮೀರಾವ್ ವಂದನಾರ್ಪಣೆ ಮಾಡಲಿದ್ದಾರೆ.

# ಹಾರನಹಳ್ಳಿ: ಸಾಕ್ಷಿಪ್ರಜ್ಞೆಯ ವಿರಾಟರೂಪ

ಕರ್ನಾಟಕದ ಅತ್ಯಂತ ಪೂಜ್ಯನೀಯ ಧುರೀಣರಲ್ಲಿ ಒಬ್ಬರಾಗಿ ರಾಜ್ಯಾದ್ಯಂತ ತಮ್ಮ ಬಹುಮುಖ ವ್ಯಕ್ತಿತ್ವದ ಛಾಪನ್ನು ಒತ್ತಿ ನಮ್ಮಿಂದ ಮರೆಯಾದ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರ ಮಧುರ ನೆನಪಿನಲ್ಲಿ; ಅವರು ಬಿಟ್ಟು ಹೋದ ಮೌಲ್ಯಗಳು ಮತ್ತು ಆದರ್ಶಗಳು ತಲೆಮಾರುಗಳನ್ನು ರೂಪಿಸುವ ಕಾಯಕದಲ್ಲಿ ಮರುಜೀವ ಪಡೆದು ಸರ್ವಜನಾಂಗದ ಶಾಂತಿಯ ತೋಟದಲ್ಲಿ ಬಳ್ಳಿ, ಹೂವು ಹಾಗೂ ಹಣ್ಣುಗಳಾಗಿ ರಾರಾಜಿಸುತ್ತಿವೆ.

ಅಜಾತಶತ್ರುವಿನಂತೆ ಸಂಪನ್ನ ಬಾಳನ್ನು ನಡೆಸಿ ತಮ್ಮ ಹೆಜ್ಜೆ ಗುರುತುಗಳನ್ನು ಮೂಡಿಸಿಹೋಗಿರುವ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರ ಸಾಕ್ಷಿಪ್ರಜ್ಞೆಯ ವಿರಾಟ್ ರೂಪ ಹಾಗೂ ಉಜ್ವಲ ಪರಂಪರೆ ಸಂರಕ್ಷಣೆ ಜೊತೆಗೆ ವರ್ತಮಾನದ ಆಚಾರ–ವಿಚಾರಗಳು ಮುಖಾಮುಖಿಯಾಗುವ ಸಂದರ್ಭಗಳನ್ನು ವಿವಿಧ ದೃಷ್ಟಿಕೋನದಲ್ಲಿ ದಾಖಲೆಗಳು. ಹೊಸ ಚೈತನ್ಯದ ಆಸರೆ. ಇದು ಎಲ್ಲ ದೃಷ್ಟಿಯಿಂದಲೂ ಸಂಗ್ರಹಯೋಗ್ಯ ಅಷ್ಟೆ ಅಲ್ಲ ವೈಚಾರಿಕ ಅನುಸಂಧಾನಕ್ಕೆ ದ್ರವ್ಯ ಕೂಡಾ.

ಉಪಯೋಗಕ್ಕೆ ಬಾರದ ಜ್ಞಾನ ನಿಜಕ್ಕೂ ಭಯಂಕರ. ಇದರ ಇನ್ನೆರಡು ರೂಪಗಳೇ ಅರಿಭಯಂಕರ ಹಾಗೂ ಪ್ರತಿವಾದಿ ಭಯಂಕರ. ಸತ್ಯವನ್ನು ಮರೆಮಾಚುವ ರೀತಿಯನ್ನು ಕಲ್ಪನಾವಿಲಾಸ ಆಧಾರಿತ ವಾಕ್ಚಾತುರ್ಯ ದುಡಿಸಿಕೊಂಡು ಭ್ರಾಮಕ ಸ್ಥಿತಿ ಉಂಟು ಮಾಡಲು ಇಂತಹ ಜ್ಞಾನ ಬಳಕೆಯಾದರೆ ಆಗ ಕೇಳಬಹುದಾದ ಪ್ರಶ್ನೆಯೆಂದರೆ 'ನಿಜವಾಗಲೂ ನಮಗೆ ಅಂತಹ ಜ್ಞಾನದ ದರ್ದು ಇರಬೇಕೆ' ಎಂಬುದು ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು ಹಲವಾರು ಸಾರ್ವಜನಿಕ ವೇದಿಕೆಗಳಲ್ಲಿ ಪ್ರಶ್ನೆಯ ರೂಪದಲ್ಲಿ ಮಂಡಿಸುತ್ತಿದ್ದ ಪ್ರಸ್ತಾಪಗಳು ವಿದ್ವಜ್ಜನರ ಮಿದುಳನ್ನು ನಿರಂತರ ಮೀಟುತ್ತಿರುವ ಒಂದು ಸಾಧನ.



ಸಾಧನೆಯ ಮೂಲಕ ವ್ಯಕ್ತಿಯೊಬ್ಬರನ್ನು ಗುರುತಿಸುವುದು ಯೋಗ್ಯವಾದ ಹಾಗೂ ಸಾಧುವಾದ ಮಾರ್ಗ ಎಂಬುದು ಅವರ ಖಚಿತ ನಿಲುವು. ಹಾಗಿಲ್ಲವಾದರೆ ಮಾತುಗಳೆ ಸಾಧನೆಯಾಗಿ ಮಾತುಗಾರರೇ ಸಾಧಕರರಾಗಿ ರೂಪುಗೊಳ್ಳುವ ಅಪಾಯವಿದೆ ಎಂಬುದನ್ನು ಅತ್ಯಂತ ಮಾರ್ಮಿಕವಾಗಿ ಎಚ್ಚರಿಸುತ್ತಿದ್ದ ಅವರ ದನಿಯಲ್ಲಿ ಸಂವೇದನಾ ಕಾಲದ ಬಹುರೂಪಗಳು, ಬಹುಶ್ರುತ ಅಧ್ಯಯನದ ಬಹು ಆಯಾಮಗಳು ಹೊಸ ತಲೆಮಾರಿನಲ್ಲಿ ಚಿಗುರುವ ಹೊಸ ಆಶೋತ್ತರಗಳ ಮಾರ್ದನಿಯಾಗಿ ರೂಪುಗೊಳ್ಳುತ್ತಿರುವುದು ಒಂದರ್ಥದಲ್ಲಿ ಅವರ ಅಮರಜೀವಿ ವ್ಯಕ್ತಿತ್ವದ ದಿಕ್ಸೂಚಿ.

ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು ನಿಜವಾದ ಅರ್ಥದಲ್ಲಿ ಅಜಾತಶತ್ರು ವ್ಯಕ್ತಿತ್ವದವರು.

ಅಭಿಮತ ಹಾಗೂ ಭಿನ್ನಮತಗಳೆಂಬುದು ಚಲನಶೀಲ ವ್ಯಕ್ತಿತ್ವದ ಮುಖಗಳು ಎಂಬುದು ಅವರ ಖಚಿತ ನಿಲುವಾಗಿತ್ತು. ಸ್ವಾತಂತ್ರ್ಯ ಹೋರಾಟಗಾರರಾಗಿ, ಸಮಾಜ ಸುಧಾರಕರಾಗಿ, ಸಾಹಿತಿಯಾಗಿ; ವಕೀಲರಾಗಿ ಅವರ ಕಾರ್ಯ ನಿರ್ವಹಣೆಯಲ್ಲಿ ಸಮಾಜಮುಖಿ ವ್ಯಕ್ತಿತ್ವವನ್ನು ಗುರುತಿಸಬಹುದು. ವಿಧಾನಮಂಡಲದ ಉಭಯ ಸದನಗಳ ಸದಸ್ಯರಾಗಿ, ಕಾನೂನು ಹಾಗೂ ಸಂಸದೀಯ ಸಚಿವರಾಗಿ, ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷರಾಗಿ ಕರ್ನಾಟಕದ ಸರ್ವತೋಮುಖ ಕಲ್ಯಾಣಕ್ಕೆ ಸಲ್ಲಿಸಿರುವ ಕೊಡುಗೆ ಅವಿಸ್ಮರಣೀಯ.

ನುರಿತ ಸಂಸದೀಯ ಪಟುವಾಗಿದ್ದ ಶ್ರೀ ಹಾರನಹಳ್ಳಿಯವರು ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷರಾಗಿ ಸಂಯುಕ್ತ ಕರ್ನಾಟಕ, ಕರ್ಮವೀರ, ಕಸ್ತೂರಿ ಪತ್ರಿಕೆಗಳಿಗೆ ಹೊಸ ಸಂವೇದನಾಶೀಲ ದೃಷ್ಟಿಯನ್ನು ತಂದುಕೊಟ್ಟವರು. ಅವರ ಅಂಕಣ ಬರಹಗಳ ಸಂಗ್ರಹ 'ಅಂತರಂಗ ಧ್ವನಿ' ಹಲವಾರು ದೃಷ್ಟಿಕೋನಗಳಿಂದ ವಿದ್ವಾಂಸರಿಗೆ, ಸಂಶೋಧನಾ ವಿದ್ಯಾರ್ಥಿಗಳಿಗೆ, ಅಭಿಪ್ರಾಯ ನಿರೂಪಕರಿಗೆ, ನಿರ್ಧಾರ ಕೈಗೊಳ್ಳುವ ಆಡಳಿತಗಾರರಿಗೆ ಕೈದೀವಿಗೆ.

■ ಸೂತ್ರಧಾರ

## ಅನಿಕೇತನ ಸ್ವರೂಪ

ಅರ್ಧ ಶತಮಾನಕ್ಕೂ ಹೆಚ್ಚಿನ ಕಾಲ ಸಾರ್ವಜನಿಕ ಸೇವೆಯಲ್ಲಿ ನಿರಂತರವಾಗಿ ತೊಡಗಿಸಿಕೊಂಡಿದ್ದ ಶ್ರೀ ಹಾರನಹಳ್ಳಿ ರಾಮಸ್ವಾಮಿಯವರು 2009ರ ಏಪ್ರಿಲ್ 4ರಂದು ನಿಧನರಾದರು. ಆದರೆ, ಅವರ ಸಾಧನೆಯ ಪ್ರತೀಕಗಳಾಗಿ ಉಳಿದಿರುವ ಹಲವು ಸಂಗತಿಗಳು ಚಿರಂತನ ರೂಪದಲ್ಲಿ ತಲೆಮಾರುಗಳ ಹೊಸ ಅವಿಷ್ಕಾರ ಪಡೆದು ಅನಿಕೇತನ ಸ್ವರೂಪವನ್ನು ಪಡೆದುಕೊಂಡಿವೆ.

## ಅಪರೂಪದ ಗುಣವಂತ

ಶ್ರೀ ಹಾರನಹಳ್ಳಿ ರಾಮಸ್ವಾಮಿಯವರಿಗೆ ಎಷ್ಟು ಎತ್ತರದ ಹುದ್ದೆಗಳು ಸಿಗಬೇಕಿತ್ತೋ ಅವು ಸಿಗಲಿಲ್ಲ ಎಂಬ ಕೊರಗು ಅವರ ಅಭಿಮಾನಿಗಳಲ್ಲಿ ಈಗಲೂ ಇದೆ. ರಾಮಸ್ವಾಮಿಯವರು ಅಧಿಕಾರದ ಹಿಂದೆ ಹೋದವರಲ್ಲ. ಜನತೆಗೆ ಒಳಿತನ್ನು ಮಾಡಬೇಕು ಎಂಬ ಮನೋಭಾವ ಅವರದು. ಜನ ಸೇವೆಗಾಗಿ ರಾಜಕಾರಣದಲ್ಲಿದ್ದರು. ರಾಜಕಾರಣ ಎಂಬುದು ಅವರಿಗೆ ಸಂಪಾದನೆಯ ದಾರಿಯಾಗಿರಲೇ ಇಲ್ಲ.

■ ಶ್ರೀ ಎಸ್.ಎಲ್. ಭೈರಪ್ಪ, ಸಾಹಿತಿ.

ವರ್ತಮಾನದ ಬೆಳಕಿನಲ್ಲಿ ಅನುಭವದ ಕೈದೀವಿಗೆಯೊಂದಿಗೆ ಭವಿಷ್ಯದ ರೂಪುರೇಷೆಗಳನ್ನು ವಿಮರ್ಶಿಸಿ ನಿಲುವನ್ನು ಪ್ರಸ್ತುತಪಡಿಸಿದಾಗ ಅದಕ್ಕೆ ಸಾರ್ವಜನಿಕ ವಿಶ್ವಾಸಾರ್ಹತೆ ಒದಗಿಬರುತ್ತದೆ. 'ನಿನ್ನೆ – ಇಂದು ನಾಳೆ' ಎಂಬ ಪರಿಜ್ಞಾನವನ್ನು ಅಂತರಂಗದಲ್ಲಿ ಕಾಪಿಟ್ಟುಕೊಂಡು ಬಹಿರಂಗವಾಗಿ ವಿನಯಪೂರ್ವಕವಾಗಿ ಈ ನಿಲುವನ್ನು ಸೂತ್ರವಾಗಿ ಮಂಡಿಸಿದರೆ ಅದೊಂದು ರೀತಿಯ ನೈವೇದ್ಯ. ಇಂತಹ ನೈವೇದ್ಯ ಒದಗಿಸಲು ಬೇಕಾದದ್ದು ಸಾಕ್ಷಿಪ್ರಜ್ಞೆ. ವೈಯಕ್ತಿಕ ನೆಲೆಗಟ್ಟಿನಲ್ಲಿ ನೋಡಿದ್ದನ್ನು ಸಾಮೂಹಿಕ ನೆಲೆಗಟ್ಟಿನಲ್ಲಿ ಪರಾಮರ್ಶಿಸಿ ನಂತರ ಅನುಭವ ಹಾಗೂ ಲೋಕಜ್ಞಾನದ ಕುಲುಮೆಯಲ್ಲಿ ಒರೆಗೆ ಹಚ್ಚುವ ಮನೋಧರ್ಮವೇ ಈ ಸಾಕ್ಷಿಪ್ರಜ್ಞೆ. ಏಕೆಂದರೆ, ಎಂತಹ ಕಪಟಿಯಾದರೂ ಸರಿಯೇ, ಆತ್ಮಕ್ಕೆ ಸುಳ್ಳು ಹೇಳಿ ನಂಬಿಸುವುದು ಅಸಾಧ್ಯ. ಸತ್ಯದರ್ಶನದ ಸಾಕ್ಷಾತ್ಕಾರ ರೂಪವೇ ಇದು.

■ ಹಾರನಹಳ್ಳಿ ರಾಮಸ್ವಾಮಿ

## ಇಂದು ದತ್ತಿ ಉಪನ್ಯಾಸ ಕಾರ್ಯಕ್ರಮ





ಸ್ವಾತಂತ್ರ್ಯ ಹೋರಾಟಗಾರ ಹಾರನಹಳ್ಳಿ ರಾಮಸ್ವಾಮಿ ಅವರ ನೆನಪಿಗಾಗಿ ಸೆಪ್ಟೆಂಬರ್ 10ರಂದು ಬೆಳಗ್ಗೆ 10.30ಕ್ಕೆ ದತ್ತಿ ಉಪನ್ಯಾಸ ಏರ್ಪಡಿಸಲಾಗಿದೆ. ಭಾರತೀಯ ವಿದ್ಯಾಭವನ, ಲೋಕ ಶಿಕ್ಷಣ ಟ್ರಸ್ಟ್ ಇವರ ಸಂಯುಕ್ತ ಆಶ್ರಯ ಹಾಗೂ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಅರಮನೆ ರಸ್ತೆ, ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಭಾಂಗಣದಲ್ಲಿ ಏರ್ಪಡಿಸಲಾಗಿರುವ ದತ್ತಿ ಉಪನ್ಯಾಸವನ್ನು ಮಾಜಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಉದ್ಘಾಟಿಸಲಿದ್ದಾರೆ. ಲೋಕ ಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ ಅವರು ಪ್ರಾಸ್ತಾವಿಕ ನುಡಿಗಳನ್ನಾಡಲಿದ್ದಾರೆ. ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷ ಯು.ಬಿ. ವೆಂಕಟೇಶ್ ಅಧ್ಯಕ್ಷತೆ ವಹಿಸಲಿದ್ದಾರೆ. ಶಿಕ್ಷಣ ತಜ್ಞರಾದ ಡಾ. ಗುರುರಾಜ ಕರಜಗಿ ಅವರು ವರ್ತಮಾನದಲ್ಲಿ ಮಹಾತ್ಮಗಾಂಧಿ ಜೀವನ ಮತ್ತು ವೈಚಾರಿಕತೆಯ ಪ್ರಸ್ತುತತೆ ವಿಷಯದ ಕುರಿತು ದತ್ತಿ ಉಪನ್ಯಾಸ ನೀಡಲಿದ್ದಾರೆ. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಎಚ್.ಕೆ. ಪಾಟೀಲ್, ಮಾಜಿ ಸಚಿವ ಹಾಗೂ ಕರ್ನಾಟಕ ಸ್ಕೌಟ್ಸ್ ಅಂಡ್ ಗೈಡ್ಸ್‌ನ ಮುಖ್ಯ ಆಯುಕ್ತರಾದ ಪಿ.ಜಿ.ಆರ್. ಸಿಂಧ್ಯಾ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಭಾರತೀಯ ವಿದ್ಯಾಭವನದ ನಿರ್ದೇಶಕ ಎಚ್.ಎನ್. ಸುರೇಶ್ ಅವರುಗಳು ತಲೆಮಾರುಗಳ ಮೇಲೆ ರಾಷ್ಟ್ರಪಿತನ ಪ್ರಭಾವ ಕುರಿತು ಮಾತನಾಡಲಿದ್ದಾರೆ. ಭಾರತೀಯ ವಿದ್ಯಾಭವನದ ನಾಗಲಕ್ಷ್ಮೀರಾವ್ ವಂದನಾರ್ಪಣೆ ಮಾಡಲಿದ್ದಾರೆ.

# ಇಂದಿನ ಕಾರ್ಯಕ್ರಮ

ಸಂಯುಕ್ತ ಕರ್ನಾಟಕ
ಭಾನುವಾರ 10 ಸೆಪ್ಟೆಂಬರ್ 2023

ಭಾರತೀಯ ವಿದ್ಯಾಭವನ, ಲೋಕಶಿಕ್ಷಣ ಟ್ರಸ್ಟ್‌ನ ಸಂಯುಕ್ತಾಶ್ರಯದಲ್ಲಿ ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸ. ಉದ್ಘಾಟನೆ: ಮಾಜಿ ಸಿಎಂ ಬಿ.ಎಸ್.ಯಡಿಯೂರಪ್ಪ. ಅಧ್ಯಕ್ಷತೆ: ಲೋಕಶಿಕ್ಷಣ ಟ್ರಸ್ಟ್ ಅಧ್ಯಕ್ಷ ಯು.ಬಿ.ವೆಂಕಟೇಶ್. ದತ್ತಿ ಉಪನ್ಯಾಸ: ಶಿಕ್ಷಣ ತಜ್ಞ ಡಾ.ಗುರುರಾಜ ಕರಜಗಿ. ಸ್ವಾಗತ: ಲೋಕಶಿಕ್ಷಣ



ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ. ಅತಿಥಿಗಳು: ಸಚಿವ ಎಚ್.ಕೆ.ಪಾಟೀಲ್, ಮಾಜಿ ಸಚಿವ ಪಿ.ಜಿ.ಆರ್.ಸಿಂಧ್ಯಾ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಭಾರತೀಯ ವಿದ್ಯಾಭವನ ನಿರ್ದೇಶಕ ಎಚ್.ಎನ್.ಸುರೇಶ್. ಸ್ಥಳ: ಅರಮನೆ ರಸ್ತೆ, ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣ. 10.30

VK
ವಿಜಯ ಕರ್ನಾಟಕ
9/9/2023

# ಶಿಕ್ಷಣದಿಂದ ಪ್ರಜ್ಞಾವಂತಿಕೆ ಬೆಳೆಸಿಕೊಳ್ಳಿ

## ಡಾ. ನಿರ್ಮಲಾನಂದನಾಥ ಸ್ವಾಮೀಜಿ ಸಲಹೆ । ಶೇಷಾದ್ರಿಪುರಂ ಕಾಲೇಜಿನಲ್ಲಿ ಪ್ರತಿಭಾ ಪುರಸ್ಕಾರ

■ ವಿಕ ಸುದ್ದಿಲೋಕ ಮೈಸೂರು

ಶಿಕ್ಷಣವು ಕೇವಲ ದೇಹವನ್ನು ಸಲಹುವುದಕ್ಕೆ ಇರುವುದಲ್ಲ, ಸಮಾಜವನ್ನು ನಾವು ಎದುರಿಸಲು ನಮಗಿರುವ ಶಕ್ತಿ ಎಂದು ಆದಿಚುಂಚನಗಿರಿ ಮಠದ ಪೀಠಾಧಿಪತಿ ಡಾ.ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಹೇಳಿದರು.

ಶೇಷಾದ್ರಿಪುರಂ ಪದವಿ ಕಾಲೇಜು ಮತ್ತು ಸಾಂಸ್ಕೃತಿಕ ಸಮಿತಿ ಹಾಗೂ ಆಂತರಿಕ ಗುಣಮಟ್ಟದ ಭರವಸೆ ಕೋಶದ ಆಶ್ರಯದಲ್ಲಿ ಕಾಲೇಜಿನ ಸಭಾಂಗಣದಲ್ಲಿ 10ನೇ ವಾರ್ಷಿಕ ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಸಾಧಕರಿಗೆ ಸನ್ಮಾನ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿದರು.

"ವಿದ್ಯಾರ್ಥಿಗಳಾದ ನೀವು ಬರೀ ಅಂಕ ನಿಮಿತ್ತ ಪಾಠದ ಕಡೆ ಗಮನಕೊಡದೆ, ಅದರಿಂದ ಲಭಿಸುವ ಜ್ಞಾನವನ್ನು ಹೊಂದುವಂತವರಾಗಬೇಕು. ಮೊದಲಿಗೆ ನಮ್ಮ ಮೇಲೆ ನಮಗೆ ವಿಶ್ವಾಸವಿರಬೇಕು. ಇಲ್ಲವಾದಲ್ಲಿ ಪರಾವಲಂಬಿಯಾಗಬೇಕಾಗುತ್ತದೆ. ಮನುಷ್ಯನ ಪ್ರಗತಿಯನ್ನು ಅವನ ಪ್ರಜ್ಞೆಯಿಂದ ಅಳೆಯಬೇಕು. ನಮ್ಮ ಶಿಕ್ಷಣ ನಮಗೆ ಪ್ರಶ್ನೆಯನ್ನು, ಉತ್ತರವನ್ನು ತಂದುಕೊಡುವಂತಾಗಬೇಕು. ಇದಕ್ಕಾಗಿ ಪ್ರಯತ್ನ ಅವಶ್ಯಕವಾಗಿ ಬೇಕು," ಎಂದು ಹೇಳಿದರು.

"ನಿಮ್ಮಲ್ಲಿನ ಪ್ರತಿಭೆಯನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಗುರುತಿಸಿದೆ. ಇದು ಉತ್ತಮ ವಿಚಾರ. ಪ್ರತಿಭೆಯನ್ನು ಗುರುತಿಸುವಂತದ್ದು ಪ್ರಜ್ಞಾವಂತ ನಾಗರಿಕ ಸಮಾಜದ ಕರ್ತವ್ಯವಾಗಿದೆ. ಶಿಕ್ಷಣದೊಂದಿಗೆ ಜ್ಞಾನ ಸಂಪಾದಿಸಿ ನಮ್ಮ ಜನ್ಮದಾತರಿಗೆ ಕಾಣಿಕೆಯನ್ನು ನೀಡುವಂತವರಾಗಿ," ಎಂದು ಶುಭಹಾರೈಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ, ನಾಡೋಜ ಪುರಸ್ಕೃತ ಡಾ.ವೂಡೇ ಪಿ.ಕೃಷ್ಣ ಅವರು ಮಾತನಾಡಿ, "ಮಹಾತ್ಮ ಗಾಂಧಿ, ಸ್ವಾಮಿ ವಿವೇಕಾನಂದ, ಡಾ.ಬಿ.ಆರ್ ಅಂಬೇಡ್ಕರ್ ಅವರ ಚಿಂತನೆಗಳನ್ನು ರೂಢಿಸಿಕೊಳ್ಳಿ, ಆ ಮೂಲಕ ಭವಿಷ್ಯದ ಉತ್ತಮ ಪ್ರಜೆಗಳಾಗಿ. ನಮ್ಮ ಸಂಸ್ಕೃತಿಯನ್ನು ನಾವು ಎಂದೂ ಮರೆಯಬಾರದು. ಅದು ಗಟ್ಟಿಗೊಂಡರೆ ಮುಂದಿನ ಬದುಕು ಗಟ್ಟಿಯಾಗುತ್ತದೆ. ಎಲ್ಲರೂ ಸಾಂಸ್ಕೃತಿಕವಾಗಿ ಆಲೋಚನೆ ಮಾಡಬೇಕು," ಎಂದರು.



ಮೈಸೂರಿನ ಹೆಬ್ಬಾಳಿನಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿನ ಸಭಾಂಗಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ಡಾ.ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಅವರು ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿದರು.

ಸತತವಾಗಿ 10ನೇ ವರ್ಷವೂ ನಡೆದ ಕಾರ್ಯಕ್ರಮದಲ್ಲಿ 2021-22ನೇ ಸಾಲಿನಲ್ಲಿ ಶೇಷಾದ್ರಿಪುರಂ ಪದವಿ ಕಾಲೇಜಿನಲ್ಲಿ ಗರಿಷ್ಠ ಅಂಕಗಳನ್ನು ಪಡೆದ ವಿದ್ಯಾರ್ಥಿಗಳಲ್ಲಿ ಬಿಸಿಎ ವಿಭಾಗದಲ್ಲಿ ಕೆ.ಎಂ. ಸುಚಿತ್ರ, ಬಿ.ಕಾಂ. ವಿಭಾಗದಲ್ಲಿ ಎಸ್.ವೈಷ್ಣವಿ, ಬಿಬಿಎ ವಿಭಾಗದಲ್ಲಿ ಎಸ್.ವಿವಿಕಾ ಅವರನ್ನು ಸನ್ಮಾನಿಸಲಾಯಿತು.

2023-24 ನೇ ಸಾಲಿನಲ್ಲಿ ಪದವಿ ತರಗತಿಗಳಿಗೆ ಪ್ರವೇಶಾತಿಯನ್ನು ಪಡೆದ ಕಾಲೇಜಿನ ಬಿ.ಕಾಂ., ಬಿಬಿಎ, ಬಿಸಿಎ ಕೋರ್ಸ್‌ಗಳಲ್ಲಿ ಪಿಯುಸಿಯಲ್ಲಿ ಶೇ. 90 ರಿಂದ ಶೇ. 95 ಅಂಕಗಳನ್ನು ಪಡೆದ 18 ವಿದ್ಯಾರ್ಥಿಗಳಿಗೆ 10 ಸಾವಿರ ರೂ. ಹಾಗೂ ಶೇ.95ಕ್ಕಿಂತಲೂ ಹೆಚ್ಚು ಅಂಕಗಳನ್ನು ಪಡೆದ 12 ವಿದ್ಯಾರ್ಥಿಗಳಿಗೆ ಒಂದು ವರ್ಷ ಉಚಿತ ಶಿಕ್ಷಣದ ಪುರಸ್ಕಾರವನ್ನು ನೀಡಲಾಯಿತು. 25 ವಿದ್ಯಾರ್ಥಿಗಳಿಗೆ ಪ್ರಶಂಸಾ ಪ್ರಮಾಣಪತ್ರ ವಿತರಿಸಲಾಯಿತು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಸಹ ಕಾರ್ಯದರ್ಶಿ ಎಂ. ಎಸ್. ನಟರಾಜ್, ಧರ್ಮದರ್ಶಿಗಳಾದ ಡಬ್ಲ್ಯೂ. ಪಿ. ಅಶೋಕ್ ಮತ್ತು ಶಶಾಂಕ್ ಎಂ. ಗೋಪಾಲ್, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಬಿ.ಎ. ಅನಂತರಾಮ್, ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಕೆ. ಸೌಮ್ಯ ಈರಪ್ಪ, ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಎನ್.ಅರ್ಚನಾ ಸ್ವಾಮಿ, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಸಿ.ಪಿ.ಲಾವಣ್ಯ, ವಾಣಿಜ್ಯ ಮತ್ತು ನಿರ್ವಹಣಾ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ ಎಸ್.ಅನುಶ ಮತ್ತಿತರರು ಇದ್ದರು.

ಸಂಯುಕ್ತ ಕರ್ನಾಟಕ

Sep 2, 2023

### ವಿಚಾರ ಸಂಕಿರಣ ಪುಸ್ತಕ ಬಿಡುಗಡೆ । ದೇಶದಲ್ಲಿ ಅಸಂತೋಷ, ನೆಮ್ಮದಿ ಇಲ್ಲದ ಸ್ಥಿತಿ ನಿರ್ಮಾಣ; ಡಾ.ಎಂ.ವೀರಪ್ಪ ಮೊಯ್ಲಿ

# ಸಮುದಾಯಗಳ ಸಮಸ್ಯೆ ಬಗ್ಗೆ ಗಮನ ಹರಿಸಬೇಕು

ಸಂ.ಕ.ಸಮಾಚಾರ, ಮಂಗಳೂರು

ದೇಶದಲ್ಲಿ ಪ್ರಸ್ತುತ ಅಸಂತೋಷ, ಅತೃಪ್ತಿ, ನೆಮ್ಮದಿ ಇಲ್ಲದ ಸ್ಥಿತಿ ನಿರ್ಮಾಣವಾಗಿದ್ದು, ನಾವು ಜ್ವಾಲಾಮುಖಿಯಲ್ಲಿ ಕುಳಿತಿರುವಂತೆ ಭಾಸವಾಗುತ್ತಿದೆ. ಅತೃಪ್ತ ಜನತೆ, ಸಮುದಾಯಗಳ ಸಮಸ್ಯೆಗಳ ಬಗ್ಗೆ ನಾವಿಂದು ಗಮನ ಹರಿಸಬೇಕಾಗಿದೆ ಎಂದು ಕೇಂದ್ರದ ಮಾಜಿ ಸಚಿವ ಹಾಗೂ ಮಾಜಿ ಮುಖ್ಯಮಂತ್ರಿ ಡಾ.ಎಂ.ವೀರಪ್ಪ ಮೊಯ್ಲಿ ಹೇಳಿದ್ದಾರೆ.

ಮಂಗಳೂರಿನ ವಿಶ್ವವಿದ್ಯಾನಿಲಯ ಕಾಲೇಜಿನ ರವೀಂದ್ರ ಕಲಾಭವನದಲ್ಲಿ ಮಂಗಳೂರು ವಿವಿ, ವಿಶ್ವವಿದ್ಯಾನಿಲಯ ಕಾಲೇಜು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ, ಕಜೆಮಾರು ಕದಂಬಾಡಿ ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನ ಸಹಭಾಗಿತ್ವದಲ್ಲಿ ಆಯೋಜಿಸಲಾದ ಸರ್ವ ಸಮಾನತೆ-ಗಾಂಧೀಜಿ ವಿಚಾರಧಾರೆಯ ಪ್ರಸ್ತುತತೆ, ನಾಗರಿಕ ಸೇವೆಯಲ್ಲಿ ಸ್ವಚ್ಛತೆ ಮತ್ತು ಪ್ರಾಮಾಣಿಕತೆ ಕುರಿತ ವಿಚಾರ ಸಂಕಿರಣ ಹಾಗೂ ಪುಸ್ತಕ ಬಿಡುಗಡೆ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ಪ್ರಸಕ್ತ ಸನ್ನಿವೇಶದಲ್ಲಿ ಸರ್ಕಾರಕ್ಕಿಂತ ಮಿಲಿಟರಿ ಆಡಳಿತವೇ ಉತ್ತಮ ಭಾವನೆ ದೇಶದಲ್ಲಿ




ನಿರ್ಮಾಣವಾಗಿದೆ. ಸಮಾಜದಲ್ಲಿ ಅಸಮಾನತೆ ಹೆಚ್ಚುತ್ತಿದ್ದು, ಇದಕ್ಕಾಗಿ ಮಹಾತ್ಮ ಗಾಂಧೀಜಿಯ ವಿಚಾರ ಹಾಗೂ ಕಮ್ಯುನಿಸ್ಟ್ ನಾಯಕ ದಿವಂಗತ ಕೃಷ್ಣ ಶೆಟ್ಟಿಯವರ ಆದರ್ಶಗಳನ್ನು ನೆರಳಾಗಿಸಿಕೊಂಡು ಹೋರಾಟ ನಡೆಸಬೇಕಾಗಿದೆ ಎಂದರು.

ಭೂ ಮಾಲಕರ ಕುಟುಂಬದಲ್ಲಿ ಜನಿಸಿದ್ದ ಕೃಷ್ಣ ಶೆಟ್ಟಿಯವರು ದೀನ ದಲಿತರು, ಶೋಷಣೆ, ದಬ್ಬಾಳಿಕೆಗೆ ಒಳಗಾಗಿದ್ದವರ ಧ್ವನಿಯಾಗಿ, ಸ್ವಾರ್ಥ, ಮತೀಯತೆ, ಜಾತೀಯತೆಯಿಂದ ದೂರ ಉಳಿದವರು. ತತ್ವಬದ್ಧರಾಗಿದ್ದು, ಕಳಂಕರಹಿತ ರಾಜಕಾರಣಿಯಾಗಿದ್ದ ಕೃಷ್ಣ ಶೆಟ್ಟಿ, ಕಾಲೇಜು ಸಮಯದಲ್ಲೇ ತಮಗೆ ಸ್ಫೂರ್ತಿಯಾಗಿದ್ದವರು ಎಂದರು.

ಮುಖ್ಯ ಅತಿಥಿ ಸಿಪಿಎಂ ಪಾಲಿಟ್ ಬ್ಯೂರೋ ಸದಸ್ಯ, ಕೇರಳದ ಮಾಜಿ ಸಚಿವ ಎಂ.ಎ.ಬೇಬಿ ಅವರು ಮಾತನಾಡಿ, ಮಹಾತ್ಮ ಗಾಂಧೀಜಿಯವರ ಉದಾತ್ತ ಆಲೋಚನೆಗಳನ್ನು ಜನರ ಮಧ್ಯೆ ಕೊಂಡೊಯ್ಯುವ ಕಾರ್ಯವಿಂದು ನಡೆಯಬೇಕಾಗಿದೆ ಎಂದರು.

ಗಾಂಧಿ ಪ್ರಶ್ನಾತೀತರಲ್ಲ. ಆದರೆ ಅವರನ್ನು ಅರಿಯದೆ, ಓದದೆ ಟೀಕಿಸುವುದು ಸರಿಯಲ್ಲ. ಆದರೆ ಗಾಂಧಿ ಬಗ್ಗೆ ಸಾಮಾಜಿಕ ಜಾಲತಾಣಗಳಲ್ಲಿ ಇಂದು ಅತ್ಯಂತ ಅವಹೇಳನಕಾರಿಯಾಗಿ ಚಿತ್ರಿಸುತ್ತಿರುವುದು ಕಂಡಾಗ ನೋವಾಗುತ್ತದೆ. ದೇಶಕ್ಕೆ ಸ್ವಾತಂತ್ರ್ಯ ಒದಗಿಸುವಲ್ಲಿ ಪಾತ್ರ ವಹಿಸಿ, ಪ್ರಪಂಚವಿಂದು ಗೌರವಿಸುವ ಗಾಂಧಿಯನ್ನು ನಾವು ಅಧ್ಯಯನ ಮಾಡಬೇಕಾಗಿದೆ. ನಾವ್ಯಾರೂ ಗಾಂಧಿವಾದಿಗಳಾಗುವುದು ಬೇಡ. ಆದರೆ, ಗಾಂಧಿಯನ್ನು ಅನುಸರಿಸಿ ಗಾಂಧಿ ಮನಸ್ಕರಾದರೆ ಸಾಕು ಎಂದವರು ಹೇಳಿದರು.

ಮಾಜಿ ಸಂಸದ ಪಿ.ಕರುಣಾಕರನ್, ನಿವೃತ್ತ ಸೆಂಟ್ರಲ್ ಆಡಳಿತ ಟ್ರಿಬ್ಯೂನಲ್ ಸದಸ್ಯ ಸುಧೀರ್ ಕುಮಾರ್ ಉಪಸ್ಥಿತರಿದ್ದರು. ಮಂಗಳೂರು ವಿವಿ ಉಪ ಕುಲಪತಿ ಪ್ರೊ.ಜಯರಾಜ್ ಅಮೀನ್ ಅಧ್ಯಕ್ಷತೆ ವಹಿಸಿದ್ದರು.

ಕಾರ್ಯಕ್ರಮದಲ್ಲಿ 'ಸಮಾನತೆಗಾಗಿ ಸಂಘರ್ಷ' (ಹೋರಾಟದಲ್ಲೇ ಕೃಷ್ಣ ಶೆಟ್ಟಿ ಬದುಕು) ಕೃತಿಯನ್ನು ಲೈಲಾ ಕರುಣಾಕರನ್(ಸಂಸತ್ ಮಾಜಿ ಸದಸ್ಯ ಪಿ.ಕರುಣಾಕರನ್ ಅವರ ಪತ್ನಿ) ಹಾಗೂ ಕೆ. ಪ್ರಮೋದ್ ಕುಮಾರ್ ರೈ ಅವರ ಸರ್ಕಾರಿ ಸೇವೆಯಿಂದ ಹೊಲದೆಡೆಗಿನ ನಡೆ ಎಂಬ 'ಮಣ್ಣಿಗೆ ಮರಳುವ ಮುನ್ನ' ಕೃತಿಯನ್ನು ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ವಿ.ಬಾಲಸುಬ್ರಹ್ಮಣ್ಯನ್ ಅವರು ಬಿಡುಗಡೆಗೊಳಿಸಿದರು.

ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನದ ಪ್ರಮುಖರಾದ ಪ್ರಮೋದ್ ರೈ ಅವರು ಸ್ವಾಗತಿಸಿ, ಪ್ರಾಸ್ತಾವಿಕವಾಗಿ ಮಾತನಾಡಿದರು. ಡಾ.ಜತಿನ್ ಕೃಷ್ಣ ಹಾಗೂ ಕೋನಾರ್ಕ್ ರೈ ಅತಿಥಿಗಳನ್ನು ಗೌರವಿಸಿದರು. ಮಂಗಳೂರು ವಿವಿ ಕಾಲೇಜಿನ ಪ್ರಾಂಶುಪಾಲೆ ಡಾ.ಅನಸೂಯ ರೈ ವಂದಿಸಿದರು. ಮಂಗಳೂರು ವಿವಿ ಕಾಲೇಜಿನ ಯುವ ರೆಡ್‌ಕ್ರಾಸ್ ಅಧಿಕಾರಿ ಡಾ.ಭಾರತಿ ಪಿಲಾರ್, ಮಂಗಳೂರು ವಿವಿಯ ರಾಷ್ಟ್ರೀಯ ಸೇವಾ ಯೋಜನಾ ಸಂಯೋಜನಾಧಿಕಾರಿ ಡಾ.ನಾಗರತ್ನ ಕೆ.ಎ. ಕಾರ್ಯಕ್ರಮ ನಿರೂಪಿಸಿದರು.

ಕನ್ನಡಪ್ರಭ

ಶನಿವಾರ 2.09.2023

ಗಾಂಧಿ ವಿಚಾರ ಸಂಕಿರಣ | ಮಂಗಳೂರಲ್ಲಿ ಪುಸ್ತಕ ಲೋಕಾರ್ಪಣೆಗೊಳಿಸಿ ಕೇಂದ್ರ ಮಾಜಿ ಸಚಿವ ಮೊಯ್ಲಿ

# ಭಾರತ ಜ್ವಾಲಾಮುಖಿ ಮೇಲಿದೆ, ಮಿಲಿಟರಿ ಆಡಳಿತವೇ ಉತ್ತಮ

• ಕನ್ನಡಪ್ರಭ ವಾರ್ತೆ ಮಂಗಳೂರು



ಮಂಗಳೂರಲ್ಲಿ ಗಾಂಧಿ ವಿಚಾರ ಸಂಕಿರಣ, ಪುಸ್ತಕ ಲೋಕಾರ್ಪಣೆಗೊಳಿಸಿದ ವೀರಪ್ಪ ಮೊಯ್ಲಿ.

ಪ್ರಸ್ತುತ ಭಾರತ ಜ್ವಾಲಾಮುಖಿ ಮೇಲೆ ಕೂತಿದೆ. ದೇಶದ ಅತೃಪ್ತ ಜನತೆ ಪಿರಮಿಡ್‌ನಲ್ಲಿ ಕೂರುವ ಪರಿಸ್ಥಿತಿ ತಲೆದೋರಿದೆ. ಕಳೆದ ಒಂಭತ್ತು ವರ್ಷಗಳ ಆಡಳಿತಕ್ಕಿಂತ ಮಿಲಿಟರಿ ಆಡಳಿತವೇ ಉತ್ತಮ ಎನ್ನುವಂತಾಗಿದೆ ಎಂದು ಕೇಂದ್ರ ಮಾಜಿ ಸಚಿವ ವೀರಪ್ಪ ಮೊಯ್ಲಿ ಕೇಂದ್ರ ಸರ್ಕಾರ ವಿರುದ್ಧ ಕುಟುಕಿದ್ದಾರೆ.

ಮಂಗಳೂರು ಹಂಪನಕಟ್ಟೆಯ ವಿಶ್ವವಿದ್ಯಾಲಯ ಕಾಲೇಜಿನ ರವೀಂದ್ರ ಕಲಾಭವನದಲ್ಲಿ ಶುಕ್ರವಾರ ಗಾಂಧಿ ವಿಚಾರ ಸಂಕಿರಣ ಹಾಗೂ ಪುಸ್ತಕ ಬಿಡುಗಡೆ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ಕೇಂದ್ರ ಸರ್ಕಾರದ ಹೆಸರು ಪ್ರಸ್ತಾಪಿಸದೆ ಅಸಮಾಧಾನ ಹೊರಹಾಕಿದ ವೀರಪ್ಪ ಮೊಯ್ಲಿ, ದೇಶದಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಸಮಾನತೆ ಇಲ್ಲವಾಗಿದೆ. ಅಸಮಾನತೆ ತೊಲಗಿಸಲು ಹೋರಾಟ ನಡೆಸಬೇಕಾದ ಅನಿವಾರ್ಯತೆ ಬಂದೊದಗಿದೆ. ಸಂವಿಧಾನದ ತತ್ವಗಳಿಗೆ ತಿಲಾಂಜಲಿ ನೀಡಿದ್ದು, ಅದನ್ನು ಯಾರೂ ಪಾಲಿಸುತ್ತಿಲ್ಲ, ಆದ್ದರಿಂದ ಕಮ್ಯುನಿಸ್ಟ್ ಚಿಂತಕರ ಆದರ್ಶ ನಮ್ಮದಾಗಬೇಕು ಎಂದರು.

ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಗಾಂಧಿ ಕಲ್ಪನೆಯ ಪೂರ್ಣ ಸ್ವಾತಂತ್ರ್ಯ ಇನ್ನೂ ಸಿಕ್ಕಿಲ್ಲ. ಸಮಾಜದಲ್ಲಿ ಅಸ್ಪೃಶ್ಯತೆ ಇನ್ನೂ ಜೀವಂತವಾಗಿದೆ. ನಗರ ಪ್ರದೇಶಗಳಲ್ಲಿ ಮಾನಸಿಕ ಅಸ್ಪೃಶ್ಯತೆ ಇದೆ. ಸಾಮಾಜಿಕ ಹಾಗೂ ಆರ್ಥಿಕವಾಗಿಯೂ ಸ್ವಾತಂತ್ರ್ಯವಾಗಿಲ್ಲ, ಬಡವರು ಬಡವರಾಗಿಯೇ ಇದ್ದಾರೆ, ಹೆಣ್ಮಕ್ಕಳು ರಾತ್ರಿ ಹೊತ್ತು ಸುರಕ್ಷಿತವಾಗಿ ಓಡಾಡುವಂತಿಲ್ಲ, ಗಾಂಧಿ ವಿಚಾರ ಓದದೆ ಟೀಕಿಸುತ್ತಿದ್ದಾರೆ, ಜಾಲತಾಣಗಳಲ್ಲಿ ಗಾಂಧಿಜಿ ಬಗ್ಗೆ ಟೀಕಿಸುವುದನ್ನು ನೋಡುವಾಗ ನೋವಾಗುತ್ತದೆ. ಗಾಂಧಿಯನ್ನು ಪ್ರಪಂಚವೇ ಗೌರವಿಸುತ್ತಿದ್ದು, ಗಾಂಧಿವಾದಿ ಆಗದಿದ್ದರೂ ಗಾಂಧಿ ಮನುಷ್ಯನವರಾಗಿ ಎಂದು ಕಳಕಳಿ ವ್ಯಕ್ತಪಡಿಸಿದರು.

ಈ ಸಂದರ್ಭ ಕೃಷ್ಣಶೆಟ್ಟಿ ಅವರ ಹೋರಾಟದ ಬದುಕಿನ ಸಮಾನತೆಗಾಗಿ ಸಂಘರ್ಷ ಹಾಗೂ ಕೆ.ಪ್ರಮೋದ್ ಕುಮಾರ್‌ರ ಸರ್ಕಾರಿ ಸೇವೆಯಿಂದ ಹೊರಬದಿಗಿನ ನಡೆ ಕುರಿತ ಸಮಾನತೆಗಾಗಿ ಮುನ್ನ ಎಂಬ ಕೃತಿಗಳನ್ನು ಕೇರಳದ ಹಿರಿಯ ನಾಯಕಿ ಶೈಲಾ ಕರುಣಾಕರನ್ ಹಾಗೂ ನಿವೃತ್ತ ಮುಖ್ಯ [illegible]ಕಾರ್ಯದರ್ಶಿ ಬಾಲಸುಬ್ರಮಣ್ಯನ್ ಲೋಕಾರ್ಪಣೆಗೊಳಿಸಿದರು.

ಮಂಗಳೂರು ವಿಶ್ವವಿದ್ಯಾಲಯ ಕುಲಪತಿ ಪ್ರೊ.ಜಯರಾಜ್ ಅಮೀನ್ ಅಧ್ಯಕ್ಷತೆ ವಹಿಸಿದ್ದರು.

ಕೇರಳ ಮಾಜಿ ಸಚಿವರಾದ ಕರುಣಾಕರನ್, ಎಂ.ಎ.ಬೇಬಿ, ಸೆಂಟ್ರಲ್ ಆಡಳಿತ ಟ್ರಿಬ್ಯುನಲ್ ಸದಸ್ಯ ಸುಧೀರ್ ಕುಮಾರ್, ಕಾಲೇಜು ಪ್ರಾಂಶುಪಾಲೆ ಅನಸೂಯ ರೈ ಇದ್ದರು.

ಮಂಗಳೂರು ವಿಶ್ವವಿದ್ಯಾಲಯ, ವಿಶ್ವವಿದ್ಯಾಲಯ ಕಾಲೇಜು ಮಂಗಳೂರು, ಕರ್ನಾಟಕ ಗಾಂಧಿ ಸ್ಮಾರಕನಿಧಿ, ರಾಷ್ಟ್ರೀಯ ಸೇವಾ ಯೋಜನೆ ಬೆಂಗಳೂರು, ಕುಂಬ್ರ ಜತ್ತಪ್ಪ ರೈ ಪ್ರತಿಷ್ಠಾನ, ಕಜೆಮಾರು, ಕೆದಂಬಾಡಿ ಪುತ್ತೂರು ಇವುಗಳ ಸಹಭಾಗಿತ್ವದಲ್ಲಿ ಈ ಕಾರ್ಯಕ್ರಮ ಏರ್ಪಟ್ಟಿತು.

## ನನ್ನದು ಕಮ್ಯುನಿಸ್ಟ್ ಐಡಿಯಾಲಜಿ!

ನನ್ನದು ಕಮ್ಯುನಿಸ್ಟ್ ಐಡಿಯಾಲಜಿ, ನಾನು ಬಾಲ್ಯದಿಂದಲೇ ಕಾಮ್ರೆಡ್ ಕೃಷ್ಣ ಶೆಟ್ಟಿ ಸೇರಿದಂತೆ ಕಮ್ಯುನಿಸ್ಟ್ ಮುಖಂಡರ ಪ್ರಭಾವಕ್ಕೆ ಒಳಗಾಗಿದ್ದೇನೆ. ಆಗ ನಾನು ಮನಸ್ಸು ಮಾಡಿದರೆ ಈಗ ಕಮ್ಯುನಿಸ್ಟ್ ನಾಯಕನಾಗಿರುತ್ತಿದ್ದೆ. ಕಮ್ಯುನಿಸ್ಟ್ ಚಿಂತನೆಗಳನ್ನು ನಾನು ಮುಖ್ಯಮಂತ್ರಿಯಾದಾಗ ಆಡಳಿತದಲ್ಲಿ ಅಳವಡಿಸಿಕೊಂಡಿದ್ದು ಅಕ್ರಮ-ಸಕ್ರಮ, ಸಿಇಟಿ, ಪಿಪಿಪಿ ಮಾದರಿಯಲ್ಲಿ ಜನೋಪಯೋಗಿ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಕ್ಕೆ ತರಲು ಸಾಧ್ಯವಾಯಿತು ಎಂದು ವೀರಪ್ಪ ಮೊಯ್ಲಿ ತಿಳಿಸಿದರು.

ಈ ಸಂಜೆ



ಕನ್ನಡ ಗೆಳೆಯರ ಬಳಗ, ಕರ್ನಾಟಕ ಕಾರ್ಮಿಕ ಲೋಕದ ಸಂಯುಕ್ತಾಶ್ರಯದಲ್ಲಿ ನಗರದಲ್ಲಿ ಹಮ್ಮಿಕೊಂಡಿದ್ದ ಎಸ್ಸೆಸ್ಸೆಲ್ಸಿ ಪ್ರತಿಭಾವಂತ ಮಕ್ಕಳಿಗೆ ಸನ್ಮಾನ ಕಾರ್ಯಕ್ರಮದಲ್ಲಿ ನಾಡೋಜ ವೂಡೇ ಪಿ. ಕೃಷ್ಣ, ಲೇಖಕಿ ಹೇಮಲತಾ ಮಹಿಷಿ, ವ.ಚ.ಚನ್ನೇಗೌಡ ಮುಂತಾದವರು ವೇದಿಕೆಯಲ್ಲಿದ್ದರು.

Eesanje Edition
Aug 27, 2023 Page No. 6
Powered by : eReleGo.com

ವಿಜಯ ಕರ್ನಾಟಕ
ಬುಧವಾರ, 23 ಆಗಸ್ಟ್ 2023



ಸವಿಗಾನ ಸಂಸ್ಥೆಯು ವಿಶ್ವ ಜಾನಪದ ದಿನಾಚರಣೆಯ ಪ್ರಯುಕ್ತ ಕೆಂಗೇರಿಯ ಶೇಷಾದ್ರಿಪುರಂ ಅಕಾಡೆಮಿ ಆಫ್ ಬ್ಯುಸಿನೆಸ್ ಸ್ಟಡೀಸ್ ಕಾಲೇಜಿನಲ್ಲಿ ಆಯೋಜಿಸಿದ್ದ 'ಹೊನ್ನ ಬಿತ್ತೇವು' ಜಾನಪದ ಗೀತೆಗಳ ಕಲಿಕಾ ಶಿಬಿರದಲ್ಲಿ ಪಾಲ್ಗೊಂಡ ವಿದ್ಯಾರ್ಥಿಗಳೊಂದಿಗೆ ಜಾನಪದ ಗಾಯಕಿ ಸವಿತಕ್ಕ, ಶ್ರೀನಿವಾಸ್ ಜಿ.ಕಪ್ಪಣ್ಣ, ಡಾ.ವೂಡೆ ಪಿ ಕೃಷ್ಣ, ಎನ್.ನಮ್ರತಾ, ಕರ್ನಾಟಕ ಜಾನಪದ ಅಕಾಡೆಮಿಯ ರಿಜಿಸ್ಟ್ರಾರ್ ಪ್ರೊ.ಜಯರಾಮ್.


ಸಂಯುಕ್ತ ಕರ್ನಾಟಕ

ಬುಧವಾರ 23 ಆಗಸ್ಟ್ 2023



ಕೆಂಗೇರಿಯ ಶೇಷಾದ್ರಿಪುರ ಅಕಾಡೆಮಿ ಆಫ್ ಬಿಜಿನೆಸ್ ಸ್ಟಡೀಸ್ ಕಾಲೇಜಿನಲ್ಲಿ ಮಂಗಳವಾರ ವಿಶ್ವ ಜಾನಪದ ದಿನಾಚರಣೆ ಪ್ರಯುಕ್ತ ಸವಿಗಾನ ಸಂಸ್ಥೆ ಏರ್ಪಡಿಸಿದ್ದ 'ಹೊನ್ನೆಬಿತ್ತೇವು' ಜಾನಪದ ಗೀತೆಗಳ ಕಲಿಕಾ ಶಿಬಿರದ ಉದ್ಘಾಟನಾ ಸಮಾರಂಭದಲ್ಲಿ ಡಾ. ವೂಡೇ ಪಿ.ಕೃಷ್ಣ ಅವರನ್ನು ಸನ್ಮಾನಿಸಲಾಯಿತು. ಸವಿಗಾನ ಸಂಸ್ಥೆಯ ಸವಿತಕ್ಕ, ಶ್ರೀನಿವಾಸ್ ಜಿ ಕಪ್ಪಣ್ಣ, ಕರ್ನಾಟಕ ಜಾನಪದ ಅಕಾಡೆಮಿಯ ರಿಜಿಸ್ಟ್ರಾರ್ ಎನ್.ನಮ್ರತಾ ಮತ್ತಿತರರಿದ್ದರು.

ವಿಜಯ ಕರ್ನಾಟಕ
08 | ನಮ್ಮ ಬೆಂಗಳೂರು
ಮಂಗಳವಾರ,22 ಆಗಸ್ಟ್ 2023

# 'ಗಾಂಧಿ, ವಿವೇಕಾನಂದರನ್ನು ಮರೆತರೆ ದೇಶಕ್ಕೆ ಭವಿಷ್ಯ ಇಲ್ಲ'

**ಬೆಂಗಳೂರು:** ''ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ಅವರನ್ನು ಮರೆತರೆ ಭಾರತಕ್ಕೆ ಭವಿಷ್ಯ ಇಲ್ಲ'' ಎಂದು ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ಹೇಳಿದರು. ಪಟೇಲ್‌ ಪಬ್ಲಿಕೇಷನ್ಸ್ ಭಾನುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರೊ.ಎಂ.ಜಿ. ರಂಗಸ್ವಾಮಿ, ಡಾ.ಕೆ.ವಿ. ಮುದ್ದವೀರಪ್ಪ ಸಂಯೋಜಿಸಿರುವ 'ಶಿಕ್ಷಣ ಶಿಲ್ಪಿ', ವಿನಯ್ ಭಟ್ ಸಂಕಲನದ 'ಮುಖಾಮುಖಿ', ವೂಡೇ ಪಿ. ಕೃಷ್ಣ ಅವರ 'ಅಂಬೇಡ್ಕರ್ ಅನುಸಂಧಾನ', ಎಸ್.ವಿ.ಮಂಜುನಾಥ್ ಅವರ 'ನೂರು ನೆನಪು' ಕೃತಿ ಬಿಡುಗಡೆ ಸಮಾರಂಭದಲ್ಲಿ ಅವರು ಮಾತನಾಡಿದರು. ''ಮಹನೀಯರ ಆದರ್ಶಗಳ ಜತೆಗೆ ದೇಶವನ್ನು ಕಟ್ಟಬೇಕಿದೆ. ಆದರ್ಶಗಳ ಜತೆ ಬದುಕು ಸಾಗಿಸುವುದು ಮುಖ್ಯವಾಗಬೇಕು. ಮುಖಾಮುಖಿ ಕೃತಿಯಲ್ಲಿ ಬಹುಪಾಲು ಸಂದರ್ಶನಗಳು ವ್ಯಕ್ತಿಯ ಒಳ, ಹೊರ ವ್ಯಕ್ತಿತ್ವ ಅನಾವರಣ ಮಾಡುತ್ತವೆ'' ಎಂದು ಹೇಳಿದರು.

ಸಾಹಿತಿ ಅಗ್ರಹಾರ ಕೃಷ್ಣಮೂರ್ತಿ, ಅನುವಾದಕ ಎಂ.ಜಿ.ರಂಗಸ್ವಾಮಿ ಮಾತನಾಡಿದರು. ಸಮಾರಂಭದಲ್ಲಿ ವೂಡೇ ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು.

ಉದಯವಾಣಿ
ಮಂಗಳವಾರ, ಆಗಸ್ಟ್ 22, 2023



# ವೂಡೇ ಪಿ. ಕೃಷ್ಣ ಕುರಿತ ಕೃತಿಗಳ ಬಿಡುಗಡೆ



**ಬೆಂಗಳೂರು:** ಡಾ. ವೂಡೇ ಪಿ. ಕೃಷ್ಣ ಅವರ ಸಂಕ್ಷಿಪ್ತ ಜೀವನ ಚರಿತ್ರೆ ಕುರಿತು ಪ್ರೊ.ಎಂ.ಜಿ.ರಂಗಸ್ವಾಮಿ-ಡಾ.ಕೆ.ವಿ. ಮುದ್ದವೀರಪ್ಪ ಸಂಯೋಜಿಸಿರುವ ಪರಿಷ್ಕೃತ 4ನೇ ಮುದ್ರಣ 'ಶಿಕ್ಷಣ ಶಿಲ್ಪಿ', ಡಾ. ವೂಡೇ ಪಿ. ಕೃಷ್ಣ ಅವರ ಟೀವಿ ಸಂದರ್ಶನಗಳ ಕುರಿತ ವಿನಯ್ ಭಟ್ ಸಂಕಲಿಸಿರುವ 'ಮುಖಾಮುಖಿ', ಡಾ. ವೂಡೇ ಪಿ. ಕೃಷ್ಣ ಅವರ 'ಅಂಬೇಡ್ಕರ್ ಅನುಸಂಧಾನ' ಹಾಗೂ ಎಸ್.ವಿ. ಮಂಜುನಾಥ್ ಅವರ 'ನೂರು ನೆನಪು' ಎಂಬ ನಾಲ್ಕು ಪುಸ್ತಕಗಳನ್ನು ಕೇಂದ್ರ ಸಾಹಿತ್ಯ ಅಕಾಡೆಮಿ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ ಬಿಡುಗಡೆಗೊಳಿಸಿದರು.

ನಗರದ ಚಾಮರಾಜಪೇಟೆ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀಕೃಷ್ಣರಾಜ ಪರಿಷನ್ಮಂದಿರದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಪಟೇಲ್ ಪಬ್ಲಿಕೇಷನ್ಸ್ ಪ್ರಕಟಿಸಿರುವ ಈ ನಾಲ್ಕು ಕೃತಿಗಳನ್ನು ಬಿಡುಗಡೆಗೊಳಿಸಿ ಮಾತನಾಡಿದರು. ಕೃಷ್ಣ ಅವರು ವೂಡೇ ಎಂಬ ಪೂರ್ವಜರ ಗ್ರಾಮದ ಹೆಸರನ್ನು ತಮ್ಮ ಹೆಸರಿನಲ್ಲಿ ಇಟ್ಟುಕೊಂಡಿರುವುದೇ ಅವರ ಘನತೆ ಹಾಗೂ ಅಸ್ಮಿತೆಯನ್ನು ತೋರಿಸುತ್ತದೆ. ಕೃಷ್ಣ ಅವರು ತಮ್ಮ ತಂದೆಯ ಯಾವುದೇ ಸಂಸ್ಥೆಯೊಡನೆ ಕೊಡು-ತೆಗೆದುಕೊಳ್ಳುವುದನ್ನು ಮಾಡಬಾರದು ಎಂಬ ಆದರ್ಶವನ್ನೇ ಧ್ಯೇಯವಾಗಿಸಿಕೊಂಡಿದ್ದಾರೆ ಎಂದರು.

ಅನುವಾದಕ ಪ್ರೊ. ಎಂ.ಜಿ. ರಂಗಸ್ವಾಮಿಯವರು ಅಂಬೇಡ್ಕರ್ ಅನುಸಂಧಾನ ಮತ್ತು ನೂರು ನೆನಪು ಪುಸ್ತಕಗಳನ್ನು ಕುರಿತು, ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಡಾ. ಬೈರಮಂಗಲ ರಾಮೇಗೌಡರವರು ಶಿಕ್ಷಣಶಿಲ್ಪಿ ಹಾಗೂ ಮುಖಾಮುಖಿ ಪುಸ್ತಕಗಳನ್ನು ಕುರಿತು ಮಾತನಾಡಿದರು. ಇದೇ ವೇಳೆ, ಬೆಂವಿವಿ ನಾಡೋಜ ಕೃಷ್ಣ ಅವರ ಸಮಾಜ ಸೇವೆಗಳನ್ನು ಗುರುತಿಸಿ ಗೌರವ ಡಾಕ್ಟರೇಟ್ ನೀಡಿದ ಹಿನ್ನೆಲೆ ಗೌರವ ಸಲ್ಲಿಸಿದರು.

ಜಾನಪದ ವಿದ್ವಾಂಸ ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಸಾಹಿತಿ ಡಾ.ಮಲ್ಲೇಪುರಂ ಜಿ. ವೆಂಕಟೇಶ, ಸಹ ಲೇಖಕ ಡಾ. ಕೆ.ವಿ. ಮುದ್ದವೀರಪ್ಪ, ವಿನಯ್ ಭಟ್, ಜಬಿವುಲ್ಲಾ ಎಂ. ಅಸದ್ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ
ಸೋಮವಾರ ● ಆಗಸ್ಟ್ 21, 2023




ನಗರದಲ್ಲಿ ಪರಿಮಳ ಗೆಳೆಯರ ಬಳಗದ 48ನೆಯ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಮಲ್ಲೇಪುರಂ ಜಿ. ವೆಂಕಟೇಶ್, ವೂಡೇ ಪಿ. ಕೃಷ್ಣ, ವೈ.ಜಿ. ಮಧುಸೂದನ್, ಎಚ್.ಎಸ್. ಅರುಣ್, ವಿ. ಕೃಷ್ಣ, ಶ್ರೀಪಾದರಾವ್ ದೇವನಹಳ್ಳಿ, ಶ್ರೀಹರಿ ವಾಳ್ವೇಕರ್ ಆಚಾರ್ಯ, ಡಾ.ಬಿ. ರವಿಶಂಕರ್ ಭಟ್, ಪಿ.ಎಸ್. ದಿನೇಶ್ ಕುಮಾರ್, ಸುಳಾದಿ ಹನುಮೇಶಾಚಾರ್ಯ, ಡಾ.ಎಚ್.ಎನ್. ಸುಬ್ರಹ್ಮಣ್ಯ ಮತ್ತು ಡಾ. ಗಿರಿಧರ ಕಜೆ ಅವರಿಗೆ ಪರಿಮಳ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಪರಿಮಳ ಗೆಳೆಯರ ಬಳಗದ ಅಧ್ಯಕ್ಷ ಎಸ್. ಜಯಸಿಂಹ, ನಿವೃತ್ತ ನ್ಯಾಯಮೂರ್ತಿ ಎಂ.ಎನ್. ವೆಂಕಟಾಚಲಯ್ಯ, ಸುಜಯನಿಧಿ ತೀರ್ಥ ಸ್ವಾಮೀಜಿ ಮತ್ತು ಸುವಿದ್ಯೇಂದ್ರ ತೀರ್ಥ ಸ್ವಾಮೀಜಿ ಇದ್ದರು —ಪ್ರಜಾವಾಣಿ ಚಿತ್ರ

# 'ದುರಾಸೆಯೆಂಬ ರೋಗಕ್ಕೆ ಮದ್ದಿಲ್ಲ'

## 'ಪರಿಮಳ' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸಂತೋಷ್ ಹೆಗ್ಡೆ ಅಭಿಮತ

ಪ್ರಜಾವಾಣಿ ವಾರ್ತೆ

ಬೆಂಗಳೂರು: ದುರಾಸೆ ಎಂಬ ರೋಗಕ್ಕೆ ಮದ್ದಿಲ್ಲ. ದುರಾಸೆಯಿಂದಲೇ ಸಮಾಜದ ಶಾಂತಿ, ಸೌಹಾರ್ದತೆ ಕೆಟ್ಟು ಹೋಗಿದೆ ಎಂದು ನಿವೃತ್ತ ಲೋಕಾಯುಕ್ತ ಎನ್. ಸಂತೋಷ್ ಹೆಗ್ಡೆ ಹೇಳಿದರು.

ಪರಿಮಳ ಗೆಳೆಯರ ಬಳಗದ 48ನೇ ವಾರ್ಷಿಕೋತ್ಸವ, ರಾಘವೇಂದ್ರ ರಾಯರ ಆರಾಧನಾಂಗ ಜ್ಞಾನಯಜ್ಞ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ತೃಪ್ತಿ ಇದ್ದರೆ ದುರಾಸೆ ಇರುತ್ತಿರಲಿಲ್ಲ. ಎಲ್ಲರಿಗೂ ತೃಪ್ತಿ ಬೇಕು. ಹಾಗೆಯೇ ಮಾನವೀಯತೆ ಇರಬೇಕು. ಹುಟ್ಟುವಾಗ ಹೇಗೇ ಇದ್ದರೂ ಮಾನವೀಯ ಪಥದಲ್ಲಿ ಬೆಳೆಯಬೇಕು. ಸಾಯುವಾಗ ಮಾನವರಾಗಿ ಸಾಯಬೇಕು ಎಂದರು.

ಎಸ್. ಜಯಸಿಂಹ ಅವರ 'ಶ್ರೀಸುಮತೀಂದ್ರ ದರ್ಶನ' ಕೃತಿಯನ್ನು ಬಿಡುಗಡೆ ಮಾಡಿದ ಸುವಿದ್ಯೇಂದ್ರ ತೀರ್ಥ ಸ್ವಾಮೀಜಿ ಮಾತನಾಡಿ, 'ಚರಿತ್ರೆ ಗ್ರಂಥ ಕೇವಲ ಮಾಹಿತಿಯಾಗದೇ ಸಮಾಜಕ್ಕೆ ಏನಾದರೂ ಸಂದೇಶ ಸಿಗಬೇಕು' ಎಂದು ತಿಳಿಸಿದರು.

ಸುಜಯನಿಧಿತೀರ್ಥ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ನಿವೃತ್ತ ನ್ಯಾಯಮೂರ್ತಿ ಎಂ.ಎನ್. ವೆಂಕಟಾಚಲಯ್ಯ ಮಾತನಾಡಿದರು.

ನ್ಯಾಯಮೂರ್ತಿ ಪಿ.ಎಸ್. ದಿನೇಶ್ ಕುಮಾರ್, ಶಿಕ್ಷಣ ಕ್ಷೇತ್ರದ ವೂಡೆ ಪಿ. ಕೃಷ್ಣ, 'ಪ್ರಜಾವಾಣಿ' ಕಾರ್ಯನಿರ್ವಾಹಕ ಸಂಪಾದಕ ರವೀಂದ್ರ ಭಟ್, ವೇದಾಂತದ ಶ್ರೀಹರಿ ವಾಳ್ವೇಕರ್, ದಾಸ ಸಾಹಿತ್ಯ ಸಂಶೋಧನೆ ವಿಭಾಗದ ಸುಳಾದಿ ಹನುಮೇಶಾಚಾರ್ಯ, ವಿಜ್ಞಾನ ವಿಭಾಗದ ವೈ.ಜಿ. ಮಧುಸೂದನ್, ಸುಗಮ ಸಂಗೀತ ಕ್ಷೇತ್ರದ ಪುತ್ತೂರು ನರಸಿಂಹ ನಾಯಕ್, ಮೃದಂಗ ಕಲಾವಿದ ವಿ.ಕೃಷ್ಣ, ವೈದ್ಯಕೀಯ ಕ್ಷೇತ್ರದ ಡಾ.ಎಚ್. ಎನ್. ಸುಬ್ರಹ್ಮಣ್ಯ, ವೈದ್ಯಕೀಯ ಕ್ಷೇತ್ರದ ಡಾ. ಬಿ. ರವಿಶಂಕರ್ ಭಟ್, ಡಾ. ಗಿರಿಧರ ಕಜೆ, ಯೋಗ ಸಾಧಕ ಎಚ್.ಎಸ್. ಅರುಣ್, ಸಮಾಜ ಸೇವಕ ಶ್ರೀಪಾದರಾವ್ ದೇವನಹಳ್ಳಿ ಅವರಿಗೆ ಪರಿಮಳ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಪ್ರಜಾವಾಣಿ
ಸೋಮವಾರ • ಆಗಸ್ಟ್ 21, 2023

## ಬೈರಮಂಗಲ ರಾಮೇಗೌಡ ಅಭಿಪ್ರಾಯ

# ‘ಗಾಂಧೀಜಿ ಮರೆತರೆ ಭವಿಷ್ಯ ಇಲ್ಲ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದ ಅವರನ್ನು ಮರೆತರೆ ಭಾರತಕ್ಕೆ ಭವಿಷ್ಯ ಇಲ್ಲ’ ಎಂದು ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ಹೇಳಿದರು.

ನಗರದಲ್ಲಿ ಭಾನುವಾರ ಪಟೇಲ್ ಪಬ್ಲಿಕೇಷನ್ಸ್ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರೊ.ಎಂ.ಜಿ. ರಂಗಸ್ವಾಮಿ – ಡಾ.ಕೆ.ವಿ. ಮುದ್ದವೀರಪ್ಪ ಸಂಯೋಜಿಸಿರುವ ‘ಶಿಕ್ಷಣ ಶಿಲ್ಪಿ’, ವಿನಯ್ ಭಟ್ ಸಂಕಲನದ ‘ಮುಖಾಮುಖಿ’, ವೂಡೇ ಪಿ. ಕೃಷ್ಣ ಅವರ ‘ಅಂಬೇಡ್ಕರ್ ಅನುಸಂಧಾನ’, ಎಸ್.ವಿ.ಮಂಜುನಾಥ್ ಅವರ ‘ನೂರು ನೆನಪು’ ಕೃತಿ ಬಿಡುಗಡೆ ಸಮಾರಂಭದಲ್ಲಿ ಅವರು ಮಾತನಾಡಿದರು.

‘ಮಹನೀಯರ ಆದರ್ಶಗಳ ಜತೆಗೇ ದೇಶವನ್ನು ಕಟ್ಟಬೇಕಿದೆ. ಆದರ್ಶಗಳ ಜತೆ ಬದುಕು ಸಾಗಿಸುವುದು ಮುಖ್ಯವಾಗಬೇಕು. ಮುಖಾಮುಖಿ ಕೃತಿಯಲ್ಲಿ ಬಹುಪಾಲು ಸಂದರ್ಶನಗಳು ವ್ಯಕ್ತಿಯ ಒಳ, ಹೊರ ವ್ಯಕ್ತಿತ್ವ



ನಗರದಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಸಾಹಿತಿ ಅಗ್ರಹಾರ ಕೃಷ್ಣಮೂರ್ತಿ ಕೃತಿಗಳನ್ನು ಬಿಡುಗಡೆ ಮಾಡಿದರು. ಮಲ್ಲೇಪುರಂ ಜಿ. ವೆಂಕಟೇಶ್, ಅನುವಾದಕ ಎಂ.ಜಿ.ರಂಗಸ್ವಾಮಿ, ವೂಡೇ ಪಿ. ಕೃಷ್ಣ, ಬೈರಮಂಗಲ ರಾಮೇಗೌಡ ಇದ್ದರು
- ಪ್ರಜಾವಾಣಿ ಚಿತ್ರ

ಅನಾವರಣ ಮಾಡುತ್ತವೆ’ ಎಂದು ಹೇಳಿದರು.

ಸಾಹಿತಿ ಅಗ್ರಹಾರ ಕೃಷ್ಣಮೂರ್ತಿ ಮಾತನಾಡಿ, ‘ನಮ್ಮ ಸಂವಿಧಾನವೇ ಶ್ರೇಷ್ಠ. ಅದೇ ರಾಷ್ಟ್ರಗ್ರಂಥ’ ಎಂದು ಹೇಳಿದರು.

ಅನುವಾದಕ ಎಂ.ಜಿ.ರಂಗಸ್ವಾಮಿ ಮಾತನಾಡಿ, ‘ಗಾಂಧಿ ಮತ್ತು ಅಂಬೇಡ್ಕರ್ ಇಬ್ಬರ ಗುರಿ ಹಾಗೂ ಉದ್ದೇಶವು ದೇಶಕ್ಕೆ ಸ್ವಾತಂತ್ರ್ಯ ಪಡೆದುಕೊಳ್ಳುವುದೇ ಆಗಿತ್ತು. ಇಬ್ಬರ ನಡುವೆಯೂ ವೈಯಕ್ತಿಕ ಭಿನ್ನಾಭಿಪ್ರಾಯಗಳು ಇರಲಿಲ್ಲ. ಅಂಬೇಡ್ಕರ್ ಅವರು ಇತರರ ಅನಿಸಿಕೆಗಳನ್ನೂ ಗೌರವಿಸುತ್ತಿದ್ದರು’ ಎಂದು ಹೇಳಿದರು.

ವೂಡೇ ಪಿ. ಕೃಷ್ಣ ಅವರನ್ನು ಸನ್ಮಾನಿಸಲಾಯಿತು.




ಪಟೇಲ್ ಪಬ್ಲಿಕೇಷನ್ ಅವರ ಶಿಕ್ಷಣ ತಜ್ಞ, ಸಾಮಾಜಿಕ ಕಾರ್ಯಕರ್ತ ನಾಡೋಜ ಡಾ.ವೂಡೆ ಪಿ.ಕೃಷ್ಣ ಅವರ ಸಂಕ್ಷಿಪ್ತ ಜೀವನ ಚರಿತ್ರೆ 'ಶಿಕ್ಷಣ ಶಿಲ್ಪಿ' ಪರಿಷ್ಕೃತ 4ನೇ ಮುದ್ರಣ, ಅವರ ಟಿವಿ ಸಂದರ್ಶನ 'ಮುಖಾಮುಖಿ', ಅವರೇ ಬರೆದಿರುವ 'ಅಂಬೇಡ್ಕರ್ ಅನುಸಂಧಾನ' ಮತ್ತು ಎಸ್.ವಿ.ಮಂಜುನಾಥ್ ಅವರ 'ನೂರು ನೆನಪು' ಕೃತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಲೋಕಾರ್ಪಣೆ ಮಾಡಲಾಯಿತು. ಸಾಹಿತಿ ಡಾ. ಮಲ್ಲೇಪುರಂ ಜಿ.ವೆಂಕಟೇಶ್, ಕೇಂದ್ರ ಸಾಹಿತ್ಯ ಅಕಾಡೆಮಿಯ ನಿವೃತ್ತ ಕಾರ್ಯದರ್ಶಿ ಡಾ.ಅಗ್ರಹಾರ ಕೃಷ್ಣಮೂರ್ತಿ, ಡಾ.ಬೈರಮಂಗಲ ರಾಮೇಗೌಡ, ಪ್ರೊ.ಎಂಜಿ.ರಂಗಸ್ವಾಮಿ ಮತ್ತಿತರರು ಇದ್ದರು.

ಕನ್ನಡಪ್ರಭ ಸೋಮವಾರ 21.8.2023

# ಗಾಂಧೀಜಿ, ವಿವೇಕರನ್ನು ಮರೆತರೆ ದೇಶಕ್ಕೆ ಭವಿಷ್ಯವಿಲ್ಲ: ರಾಮೇಗೌಡ



ಕಸಾಪ ಕೃಷ್ಣರಾಜ ಪರಿಷನ್ಮಂದಿರದಲ್ಲಿ 'ಅಂಬೇಡ್ಕರ್ ಅನುಸಂಧಾನ', 'ಶಿಕ್ಷಣ ಶಿಲ್ಪಿ', 'ವೂಡೆ ಪಿ.ಕೃಷ್ಣ ಅವರ ಟಿ.ವಿ.ಸಂದರ್ಶನ' ಕೃತಿಗಳನ್ನು ಗಣ್ಯರು ಬಿಡುಗಡೆ ಮಾಡಿದರು.

ಬೆಂಗಳೂರು: ಗಾಂಧೀಜಿ ಹಾಗೂ ವಿವೇಕಾನಂದರನ್ನು ಮರೆತರೆ ಭಾರತಕ್ಕೆ ಭವಿಷ್ಯವಿಲ್ಲ ಎಂದು ಬಿಎಂಶ್ರೀ ಪ್ರತಿಷ್ಠಾನದ ಅಧ್ಯಕ್ಷ ಡಾ. ಬೈರಮಂಗಲ ರಾಮೇಗೌಡ ಹೇಳಿದರು.

ಭಾನುವಾರ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಡಾ। ವೂಡೆ ಪಿ.ಕೃಷ್ಣ ವಿರಚಿತ 'ಅಂಬೇಡ್ಕರ್ ಅನುಸಂಧಾನ' ಸೇರಿ ನಾಲ್ಕು ಕೃತಿಗಳ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿ, ದೇಶದ ಭದ್ರ ಬುನಾದಿಗೆ ಗಾಂಧೀಜಿ, ವಿವೇಕಾನಂದರು ಕಾರಣ. ಅವರನ್ನು ಮರೆತು ದೇಶ ಮುಂದೆ ಸಾಗಲು ಸಾಧ್ಯವಿಲ್ಲ ಎಂದರು. ಪ್ರೊ.ಎಂ.ಜಿ.ರಂಗಸ್ವಾಮಿ ಮಾತನಾಡಿದರು. ಡಾ.ವೂಡೆ ಪಿ.ಕೃಷ್ಣ ವಿರಚಿತ 'ಅಂಬೇ ಡ್ಕರ್ ಅನುಸಂಧಾನ', 'ಶಿಕ್ಷಣ ಶಿಲ್ಪಿ', ವಿನಯ್ ಭಟ್ ಸಂಕಲಿಸಿರುವ 'ಡಾ. ವೂಡೆ ಪಿ.ಕೃಷ್ಣ ಅವರ ಟಿ.ವಿ.ಸಂದರ್ಶನ', ಎಸ್.ವಿ.ಮಂಜುನಾಥ್ ಅವರ 'ನೂರು ನೆನಪು' ಕೃತಿಗಳನ್ನು ಡಾ. ಅಗ್ರಹಾರ ಕೃಷ್ಣಮೂರ್ತಿ ಲೋಕಾರ್ಪಣೆ ಮಾಡಿದರು.

## ಪರಿಮಳ ಗೆಳೆಯರ ಬಳಗದಿಂದ ವಿವಿಧ ಕ್ಷೇತ್ರಗಳ ಅತ್ಯುತ್ತಮ ಸಾಧಕರಿಗೆ ಪ್ರಶಸ್ತಿ ಪ್ರದಾನ

# ಕಾನೂನಿನಿಂದ ಭ್ರಷ್ಟಾಚಾರ ನಿರ್ಮೂಲನೆ ಅಸಾಧ್ಯ

ಬೆಂಗಳೂರು: ಸಮಾಜದಲ್ಲಿ ಬೇರುಬಿಟ್ಟಿರುವ ಭ್ರಷ್ಟಾಚಾರ ನಿರ್ಮೂಲನೆ ಕಾನೂನಿನಿಂದ ಸಾಧ್ಯವಿಲ್ಲ ಎಂದು ನ್ಯಾ. ಸಂತೋಷ್ ಹೆಗ್ಡೆ ಹೇಳಿದರು.

ನಗರದ ಗಾಯನ ಸಮಾಜದಲ್ಲಿ ಪರಿಮಳ ಗೆಳೆಯರ ಬಳಗ ಏರ್ಪಡಿಸಿದ್ದ ನಲವತ್ತೆಂಟನೆ ವಾರ್ಷಿಕೋತ್ಸವ, ಶ್ರೀರಾಘವೇಂದ್ರ ಗುರು ಸಾರ್ವಭೌಮರ ಆರಾಧಾನೆ ಹಾಗೂ ಶ್ರೀಸುಮತೀಂದ್ರ ದರ್ಶನ ಪುಸ್ತಕದ ಬಿಡುಗಡೆ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು.

ದುರಾಸೆ ಇರುವವರೆಗೂ ಭ್ರಷ್ಟಾಚಾರ ಇರುತ್ತದೆ. ದುರಾಸೆ ನಿಂತಾಗ ಇದಕ್ಕೆ ಕಡಿವಾಣ ಸಾಧ್ಯ. ಹೀಗಾಗಿ ನಾವುಗಳು ಪ್ರಸ್ತುತ ಸಮಾಜವನ್ನು ಬದಲಾಯಿಸಲು ಸಾಧ್ಯವಿಲ್ಲ. ಹೀಗಾಗಿ ನಮ್ಮ ಮಕ್ಕಳು ಹಾಗೂ ಮೊಮ್ಮಕ್ಕಳಿಗೆ ದುರಾಸೆ ಬಿಟ್ಟು ಮಾನವೀಯತೆ ಬೆಳೆಸಿಕೊಳ್ಳುವಂತೆ ಹೇಳಬೇಕು. ಆಗ ಮಾತ್ರ ಭ್ರಷ್ಟಾಚಾರಕ್ಕೆ ಕಡಿವಾಣ ಬೀಳುತ್ತದೆ ಎಂದರು.

ಸಮಾಜದಲ್ಲಿ ಶಾಂತಿ ನೆಲೆಸಬೇಕಾದರೆ ನಾವು ನಮ್ಮ ಮಕ್ಕಳಿಗೆ ತೃಪ್ತಿ ಪಡುವುದನ್ನು ಮೊದಲು ಹೇಳಿಕೊಡಬೇಕು. ತೃಪ್ತಿ ಇಲ್ಲದಿದ್ದರೆ ಭ್ರಷ್ಟಾಚಾರಕ್ಕೆ ಕಡಿವಾಣ ಸಾಧ್ಯವಿಲ್ಲ. ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಲು ಈಗ ಸಾಧ್ಯವಿಲ್ಲ. ಆದರೆ ನಮ್ಮ ಪ್ರಯತ್ನ ನಿಲ್ಲಬಾರದು. ಹಣ ಕೊಟ್ಟು ಪ್ರಶಸ್ತಿಯನ್ನು ಸ್ವೀಕರಿಸಬಾರದು. ಪರಿಮಳ ಪ್ರಶಸ್ತಿ ಪಡೆದವರು ಉತ್ತಮ ಸಾಧಕರು. ಈ ಪ್ರಶಸ್ತಿ ಸಾಧಕರ ಜವಾಬ್ದಾರಿಯನ್ನು ಮತ್ತಷ್ಟು ಹೆಚ್ಚಿಸಿದೆ ಎಂದರು.



ಗಾಯನ ಸಮಾಜದಲ್ಲಿ ಭಾನುವಾರ ನಡೆದ ಪ್ರಶಸ್ತಿಪ್ರದಾನ, ಪುಸ್ತಕ ಬಿಡುಗಡೆ ಸಮಾರಂಭದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಸುವಿದ್ಯೇಂದ್ರ ತೀರ್ಥರು, ಶ್ರೀ ಸುಜಯನಿಧಿತೀರ್ಥರು, ನ್ಯಾಯಮೂರ್ತಿಗಳಾದ ವೆಂಕಟಾಚಲಯ್ಯ, ಸಂತೋಷ ಹೆಗಡೆ, ಡಾ. ಜಯಸಿಂಹ ಪಾಲ್ಗೊಂಡಿದ್ದರು.

ನ್ಯಾ. ಪಿ.ಎಸ್.ದಿನೇಶ್ ಕುಮಾರ್, ವೋಡೇ ಪಿ. ಕೃಷ್ಣ, ಮಲ್ಲೇಪುರಂ ಜಿ. ವೆಂಕಟೇಶ್, ರವೀಂದ್ರಭಟ್, ವೈ.ಎನ್. ಮಧೂಸೂಧನ್, ಡಾ. ವಿ.ಕೃಷ್ಣ, ಡಾ.ಎಚ್.ಎನ್.ಸುಬ್ರಮಣ್ಯ, ಡಾ.ವಿ.ರವಿಶಂಕರ್ ಭಟ್, ಡಾ.ಗಿರಿಧರ ಕಜೆ. ಶ್ರೀಪಾದರಾವ್ ಸೇರಿದಂತೆ ವಿವಿಧ ಸಾಧಕರಿಗೆ ಪರಿಮಳ ಗೆಳೆಯರ ಬಳಗದ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಡಾ. ಜಯಸಿಂಹ ರಚಿಸಿರುವ ಸುಮತೀಂದ್ರ ದರ್ಶನ ಪುಸ್ತಕವನ್ನು ಬಿಡುಗಡೆ ಮಾಡಲಾಯಿತು.ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರು ಆಶೀರ್ವಚನ ನೀಡಿದರು. ಶ್ರೀಸುಜಯನಿಧಿತೀರ್ಥ ಶ್ರೀಪಾದಂಗಳವರು ಸಾನಿಧ್ಯ ವಹಿಸಿದ್ದರು. ಸುಪ್ರೀಂ ಕೋರ್ಟ್‌ನ ವಿಶ್ರಾಂತ ಮುಖ್ಯನ್ಯಾಯಮೂರ್ತಿ ವೆಂಕಟಾಚಲಯ್ಯ ಹಾಗೂ ಇತರ ಗಣ್ಯರು ಇದ್ದರು.

> ನಾನು ಲೋಕಾಯುಕ್ತನಾಗಿದ್ದ ವೇಳೆ ಸಾಕಷ್ಟು ಅನ್ಯಾಯವನ್ನು ಕಂಡಿದ್ದೇನೆ. ಅದನ್ನು ಸರಿಪಡಿಸಲು ಯತ್ನಿಸಿದರೂ ಸಾಧ್ಯವಾಗಲಿಲ್ಲ. ನಾವು ಚಿಕ್ಕವರಿದ್ದಾಗ ನಮ್ಮ ಪಾಲಕರು ಜೈಲಿನಿಂದ ಬಿಡಗಡೆಯಾಗಿ ಮನೆಗೆ ಬಂದವರ ಮನೆ ಹತ್ತಿರ ಕೂಡ ಸುಳಿಯಲು ಬಿಡುತ್ತಿರಲಿಲ್ಲ. ಆದರೆ ಈಗ ಜೈಲಿನಿಂದ ಬಂದವರನ್ನು ಮೆರವಣಿಗೆ ಮಾಡಿ ಸ್ವಾಗತಿಸುತ್ತಾರೆ.
>
> ■ ನ್ಯಾ. ಸಂತೋಷ್ ಹೆಗಡೆ, ನಿವೃತ್ತ ನ್ಯಾಯಮೂರ್ತಿ ಸುಪ್ರೀಂಕೋರ್ಟ್



ನಗರದ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿಂದು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಪಟೇಲ್ ಪಬ್ಲಿಕೇಷನ್ ಹೊರತಂದಿರುವ ಪ್ರೊ.ಎಂ.ಟಿ.ರಂಗಸ್ವಾಮಿ, ಡಾ.ಕೆ.ಪಿ.ಮುದ್ದವೀರಪ್ಪ ಅವರ ಶಿಕ್ಷಣ ಶಿಲ್ಪಿ, ವಿನಯ್ ಭಟ್ ಅವರ ಮುಖಾಮುಖಿ, ಡಾ.ವೂಡೆ ಪಿ.ಕೃಷ್ಣ ಅವರ ನೂರು ನೆನಪು ಕೃತಿಗಳನ್ನು ಸಾಹಿತಿ ಡಾ.ಮಲ್ಲೇಪುರಂ ಜಿ.ವೆಂಕಟೇಶ್, ಕೇಂದ್ರ ಸಾಹಿತ್ಯ ಅಕಾಡೆಮಿಯ ನಿವೃತ್ತ ಕಾರ್ಯದರ್ಶಿ ಡಾ.ಅಗ್ರಹಾರ ಕೃಷ್ಣಮೂರ್ತಿ, ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಬೈರಮಂಗಲ ರಾಮೇಗೌಡ, ಅನುವಾದಕರಾದ ಪ್ರೊ.ಎಂ.ಟಿ.ರಂಗಸ್ವಾಮಿ ಬಿಡುಗಡೆ ಮಾಡಿದರು. ವಿದ್ವಾಂಸ ಡಾ.ಮೀರಾಸಾಬಿಹಳ್ಳಿ ಶಿವಣ್ಣ, ಅಜಿತ್, ಜಬಿವುಲ್ಲಾ ಎಂ.ಅಸದ್ ಮತ್ತಿತರರಿದ್ದರು.

Bengaluru Edition
Aug 20, 2023 Page No. 8
Powered by : eReleGo.com

ಸಂಜೆವಾಣಿ

Sanjevani, Ba
Sunday 20 August 2023



ನಗರದ ಚಾಮರಾಜಪೇಟೆಯ ಕಸಾಪದ ಶ್ರೀ ಕೃಷ್ಣರಾಜ ಪರಿಷನ್ಮಂದಿರವಲ್ಲಿ ಇಂದು ನಡೆದ ಶಿಕ್ಷಣ ಶಿಲ್ಪಿ, ಮುಖಾಮುಖಿ, ಅಂಬೇಡ್ಕರ್ ಅನುಸಂಧಾನ ಮತ್ತು ನೂರು ನೆನಪು ಪುಸ್ತಕಗಳ ಬಿಡುಗಡೆ ಸಮಾರಂಭದಲ್ಲಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್, ಅಗ್ರಹಾರ ಕೃಷ್ಣಮೂರ್ತಿ, ಡಾ. ಬೈರಮಂಗಲ ರಾಮೇಗೌಡ, ಪ್ರೊ ಎಂ.ಜಿ. ರಂಗಸ್ವಾಮಿ, ನಾಡೋಜ ಡಾ. ವೂಡೇ ಪಿ. ಕೃಷ್ಣ, ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಮತ್ತಿತರರು ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ



ರವೀಂದ್ರ ಕಲಾಕ್ಷೇತ್ರದಲ್ಲಿ ಕುವೆಂಪು ಕಲಾನಿಕೇತನ ವತಿಯಿಂದ ನಡೆದ ರಾಷ್ಟ್ರಕವಿ ಕುವೆಂಪು ಪ್ರಶಸ್ತಿಯನ್ನು ಡಾ.ಎಸ್.ಮಲ್ಲಿಕಾ ಘಂಟಿ, ಡಾ.ಎಚ್.ರವಿಕುಮಾರ್ ಅವರಿಗೆ ಸಚಿವ ಶಿವರಾಜ್ ತಂಗಡಗಿ ಪ್ರದಾನ ಮಾಡಿದರು. ಈ ವೇಳೆ ಶಿಕ್ಷಣತಜ್ಞ ವೂಡೇ ಪಿ ಕೃಷ್ಣ, ಕಲಾನಿಕೇತನ ಅಧ್ಯಕ್ಷ ಕುವೆಂಪು ಪ್ರಕಾಶ್ ಮತ್ತಿತರರಿದ್ದರು.

ಪ್ರಜಾ ಪ್ರಗತಿ ಆಗಸ್ಟ್ 15, 2023 ಮಂಗಳವಾರ

# ಶೇಷಾದ್ರಿಪುರಂ ಕಾಲೇಜಿನಿಂದ ವಿಶೇಷ ಶಿಬಿರ



ತುಮಕೂರು: ಶೇಷಾದ್ರಿಪುರಂಕಾಲೇಜು ಮೇಳೆಕೋಟೆ ತುಮಕೂರುಎನ್‌ಎಸ್‌ಎಸ್ ವಾರ್ಷಿಕ ವಿಶೇಷ ಶಿಬಿರ 2022-23. ಗ್ರಾಮೀಣ ಪುನರ್ ನಿರ್ಮಾಣದಲ್ಲಿಯುವಕರ ಪಾತ್ರ ಎಂಬ ಉದ್ದೇಶವಡಿಯಲ್ಲಿ ಹುಳ್ಳೇನಹಳ್ಳಿ ಗ್ರಾಮದಲ್ಲಿ ಆಯೋಜಿಸಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ಶೇಷಾದ್ರಿಪುರಂ ಶಿಕ್ಷಣ ಧತ್ತಿಯಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜಡಾ.ವೂಡೇ ಪಿ ಕೃಷ್ಣ ರವರು ನಡೆಸಿಕೊಟ್ಟರು. ಕಾರ್ಯಕ್ರಮದ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಶ್ರೀ ಆಂಜಿನಪ್ಪರವರು ಮಾತಾನಾಡಿ ಹಳ್ಳಿಗಳ ಪುನರ್ ನಿರ್ಮಾಣ ಬುದ್ದಿವಂತ ಮತ್ತು ವಿದ್ಯಾವಂತಯುವಕರಿಂದ ಮಾತ್ರ ಸಾಧ್ಯವಾಗುತ್ತದೆ. ದೇಶಉದ್ದಾರವಾಗಬೇಕೆಂದರೆ ಮೊದಲು ಹಳ್ಳಿಗಳ ನಿರ್ಮಾಣ ಮತ್ತು ನಿರ್ವಹಣೆ ಬಹು ಮುಖ್ಯ ಪಾತ್ರವಹಿಸುತ್ತದೆಎಂದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ ನಾಡೋಜಡಾ. ವೂಡೇ. ಪಿ.ಕೃಷ್ಣ ರವರು ಮಾತಾನಾಡಿ ಗಾಂಧಿಕಂಡ ಕನಸು ನವಭಾರತದ ನಿರ್ಮಾಣ ನನಸಾಗಬೇಕೆಂದರೆ ಅದು ಯುವ ಸಮುದಾಯದಿಂದ ಮಾತ್ರ ಸಾಧ್ಯ. ಯುವಕರು ಉತ್ತಮ ಸಮಾಜವನ್ನು ಕಟ್ಟುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಬೇಕುದೇಶದ ಸಾಮಾಜಿಕ ಪಿಡುಗುಗಳಾದ ಅನಕ್ಷರತೆ, ಬಡತನ, ಆರೋಗ್ಯ, ವಸತಿ ಇವುಗಳ ಬಗ್ಗೆ ಯುವಕರು ಹೆಚ್ಚು ಗಮನವನ್ನು ಹರಿಸಬೇಕು ಗಾಂಧಿಯುವರ ಪರಿಕಲ್ಪನೆಯಲ್ಲಿ ದೇಶದ ಕೆಲಸವನ್ನು ರಚನಾತ್ಮಕವಾಗಿ ಮತ್ತು ಕ್ರಿಯಾತ್ಮಕವಾಗಿರಬೇಕೆಂದು ಯುವಕರಿಗೆ ತಿಳಿಸಿದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಕಾಲೇಜಿನ ಆಡಳಿತ ಮಂಡಳಿ ಅಧ್ಯಕ್ಷರಾದ.ಡಬ್ಲ್ಯೂ.ಡಿ.ಅಶೋಕ್. ವಾರ್ಡ್. ಸದಸ್ಯರುಗಳಾದ ಶಿವಮೂರ್ತಿ, ಮರಿಗೌಡರು, ಎಚ್.ಡಿ. ಜಯರಾಮಯ್ಯರವರು, ಪ್ರಾಂಶುಪಾಲರಾದ ಡಾ.ಜಗದೀಶಜಿ.ಟಿ. ಶಿಬಿರಾಧಿಕಾರಿಯಾದ ಮನೋಹರ್ ಎ.ಪಿ. ಉಪಶಿಬಿರಾಧಿಕಾರಿಗಳಾದ ಮಂಜುಕುಮಾರ ಡಿ.ಈ. ಗ್ರಾಮಸ್ಥರು, ಉಪನ್ಯಾಸಕ ವೃಂದ ಮತ್ತು ಶಿಬಿರಾರ್ಥಿಗಳು ಉಪಸ್ಥಿತರಿದ್ದರು.

Aug 15, 2023



ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಯಲ್ಲಿ ಹಮ್ಮಿಕೊಂಡಿದ್ದ ಸ್ವಾತಂತ್ರ್ಯ ದಿನಾಚರಣೆ ಕಾರ್ಯಕ್ರಮದಲ್ಲಿ ಸಿ.ಎಸ್.ದ್ವಾರಕನಾಥ್ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನಕಾರ್ಯದರ್ಶಿ ಡಾ.ವೂಡೆ ಪಿ ಕೃಷ್ಣ, ಉಪಾಧ್ಯಕ್ಷ ಅನಿಲ್‌ಕುಮಾರ್, ಸಹಾಯಕ ಕಾರ್ಯದರ್ಶಿ ಎಂ.ಎಸ್.ನಟರಾಜ್, ಧರ್ಮದರ್ಶಿಗಳಾದ ಬಿ.ವಿ.ಅನಂತರಾವ್, ಕೆ.ಕೃಷ್ಣಸ್ವಾಮಿ, ಬಿ.ಸಿ.ಲೋಕನಾಥ್, ಆರ್.ಪಿ.ಮೃತ್ಯುಂಜಯ, ಪ್ರಾಂಶುಪಾಲರಾದ ಡಾ.ಪ್ರಣೀತ, ವಿದ್ಯಾಶಿವಣ್ಣನವರ್, ಆರ್.ವಿ.ಮಂಜುನಾಥ್, ಮಹಾಲಕ್ಷ್ಮಿ ಮಂಜುನಾಥ್, ಡಾ.ಭಾರ್ಗವಿ, ಡಾ.ಬಿ.ಜಿ.ಭಾಸ್ಕರ ಮತ್ತಿತರರು ಹಾಜರಿದ್ದರು.

ವಿಜಯ ಕರ್ನಾಟಕ
ಶುಕ್ರವಾರ,11 ಆಗಸ್ಟ್ 2023



ಕುವೆಂಪು ಕಲಾನಿಕೇತನ ಸಂಸ್ಥೆಯು ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಡಾ. ಎಚ್. ರವಿಕುಮಾರ್(ಕುವೆಂಪು ಕರ್ನಾಟಕ ರತ್ನ ಪ್ರಶಸ್ತಿ) ಮತ್ತು ಮಲ್ಲಿಕಾ ಎಸ್. ಘಂಟಿ (ರಾಷ್ಟ್ರಕವಿ ಕುವೆಂಪು ಪ್ರಶಸ್ತಿ) ಅವರಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಸಚಿವ ಶಿವರಾಜ್ ಎಸ್. ತಂಗಡಗಿ, ಎಸ್.ಜನಾರ್ಧನ್, ನಟಿ ಅಭಿನಯ, ವೂಡೇ ಪಿ. ಕೃಷ್ಣ ಇದ್ದರು.

10/09/2023

ಸಂಜೆವಾಣಿ




ನಗರದ ಭಾರತೀಯ ವಿದ್ಯಾಭವನದಲ್ಲಿ ಇಂದು ನಡೆದ ಹಾರನಹಳ್ಳಿ ರಾಮಸ್ವಾಮಿ ಸ್ಮಾರಕ ದತ್ತಿ ಉಪನ್ಯಾಸ ಕಾರ್ಯಕ್ರಮವನ್ನು ಸಚಿವ ಹೆಚ್.ಕೆ. ಪಾಟೀಲ್ ಉದ್ಘಾಟಿಸಿದರು. ಮಾಜಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ, ವಿಧಾನ ಪರಿಷತ್ ಸದಸ್ಯ ಯು.ಬಿ. ವೆಂಕಟೇಶ್, ಲೋಕ ಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ, ಶಿಕ್ಷಣ ತಜ್ಞ ಡಾ. ಗುರುರಾಜ ಕರಜಗಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ಮತ್ತಿತರರು ಇದ್ದಾರೆ.

ಪ್ರಜಾ ವಾಣಿ
10 AUGUST 2023

# 'ಸ್ವಾತಂತ್ರ್ಯ ಚಳವಳಿ ಒಂದು ಮಹಾಕಾವ್ಯ'

ಪ್ರಜಾವಾಣಿ ವಾರ್ತೆ

ತುಮಕೂರು: ವಿದ್ಯಾರ್ಥಿಗಳು ಪಠ್ಯಕ್ರಮದ ಜತೆಗೆ ಸ್ವಾತಂತ್ರ್ಯ ಚಳವಳಿಯ ಬಗ್ಗೆ ತಿಳಿದುಕೊಳ್ಳುವುದು ಅವಶ್ಯಕವಾಗಿದೆ ಎಂದು ಬಾಪೂಜಿ ವಿದ್ಯಾಸಂಸ್ಥೆ ಕಾರ್ಯದರ್ಶಿ ಎಂ.ಬಸವಯ್ಯ ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಬುಧವಾರ ಭಾರತ ಸೇವಾದಳ ಅಭಿಮಾನಿ ಬಳಗ, ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ, ಎನ್‌ಎಸ್‌ಎಸ್ ಆಶ್ರಯದಲ್ಲಿ ಹಮ್ಮಿಕೊಂಡಿದ್ದ ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ ಕಾರ್ಯಕ್ರಮದಲ್ಲಿ ಮಾತನಾಡಿದರು.

ಗಾಂಧೀಜಿ ಅನ್ಯಾಯ ಕಂಡರೆ ಪ್ರತಿಭಟನೆ ಮಾಡುತ್ತಿದ್ದರು. ನೊಂದವರ ಪರ ಧ್ವನಿ ಎತ್ತುತ್ತಿದ್ದರು. ಆದರೆ ನಾವೆಲ್ಲ ಅನ್ಯಾಯದ ವಿರುದ್ಧ ಪ್ರತಿಭಟಿಸಲಾರದೆ ಮಲಗಿರುವ ಗಾಂಧಿಗಳಾಗಿದ್ದೇವೆ.



ತುಮಕೂರಿನ ಶೇಷಾದ್ರಿಪುರಂ ಕಾಲೇಜಿನಲ್ಲಿ ಬುಧವಾರ ಭಾರತ ಸೇವಾದಳ ಅಭಿಮಾನಿ ಬಳಗ, ಎನ್‌ಎಸ್‌ಎಸ್ ಆಶ್ರಯದಲ್ಲಿ ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ ಕಾರ್ಯಕ್ರಮ ನಡೆಯಿತು

ಗಾಂಧೀಜಿಯ ಸತ್ಯ, ಅಹಿಂಸೆಯ ಮಾರ್ಗದಲ್ಲಿ ಸಾಗುತ್ತಾ, ಆದರ್ಶ ಮತ್ತು ಸದೃಢವಾದ ದೇಶ ಕಟ್ಟಬೇಕು ಎಂದು ಸಲಹೆ ಮಾಡಿದರು.

ಲೇಖಕ ಎಂ.ಎಚ್.ನಾಗರಾಜು, 'ರಾಮಾಯಣ ಮತ್ತು ಮಹಾಭಾರತದಂತೆ, ಭಾರತ ಸ್ವಾತಂತ್ರ್ಯ ಚಳವಳಿಯ ಚರಿತ್ರೆ ಮೂರನೇ ಮಹಾಕಾವ್ಯ ಇದ್ದಂತೆ. ಕ್ವಿಟ್ ಇಂಡಿಯಾ ಚಳವಳಿ ಅದರ ಒಂದು ಭಾಗ' ಎಂದರು.

ಭಾರತ ಸೇವಾದಳ ಅಭಿಮಾನಿ ಬಳಗದ ಅಧ್ಯಕ್ಷ ಡಿ.ಎಫ್.ಹಳ್ಳಪ್ಪ, ಖಜಾಂಚಿ ಎಚ್.ಎಸ್.ಕಾಶಿನಕುಂಟೆ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಕಾಲೇಜಿನ ಆಡಳಿತ ಮಂಡಳಿ ಅಧ್ಯಕ್ಷ ಡಬ್ಲ್ಯೂ.ಡಿ.ಅಶೋಕ್, ಪ್ರಾಂಶುಪಾಲ ಜಿ.ಟಿ.ಜಗದೀಶ, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಪ್ರೊ.ನಿವೇದಿತಾ, ಎನ್‌ಎಸ್‌ಎಸ್ ಸಂಚಾಲಕ ಪ್ರೊ.ಎ.ಪಿ. ಮನೋಹರ್ ಉಪಸ್ಥಿತರಿದ್ದರು.

ವಿಜಯವಾಣಿ
ಕನ್ನಡಿಗರ ಧ್ವನಿ

ಗುರುವಾರ 10 ಆಗಸ್ಟ್ 2023
10 AUGUST 2023

## ಪುನಶ್ಚೇತನ ಕಾರ್ಯಾಗಾರದಲ್ಲಿ ಡಾ.ವೀರೇಶಾನಂದ ಸರಸ್ವತಿ ಸ್ವಾಮೀಜಿ ಬಣ್ಣನೆ

# ಶೇಷಾದ್ರಿಪುರಂ ಸಂಸ್ಥೆ ಸರಸ್ವತಿಯ ಸಾಮ್ರಾಜ್ಯ

■ ವಿಜಯವಾಣಿ ಸುದ್ದಿಜಾಲ ತುಮಕೂರು

ಹೆತ್ತ ತಾಯಿ-ತಂದೆ ಜತೆ ಗುರುವನ್ನು ಸ್ಮರಿಸುತ್ತಾ ವಿದ್ಯಾರ್ಥಿಗಳು ಭವ್ಯ ಭವಿಷ್ಯದ ನಿರ್ಮಾಣದ ಕಡೆ ಮನಸ್ಸನ್ನು ಮಾಡಬೇಕು ಎಂದು ನಗರದ ರಾಮಕೃಷ್ಣ -ವಿವೇಕಾನಂದ ಆಶ್ರಮದ ಅಧ್ಯಕ್ಷ ಡಾ.ವೀರೇಶಾನಂದ ಸರಸ್ವತಿ ಸ್ವಾಮೀಜಿ ಹೇಳಿದರು.

ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಸಭಾಂಗಣದಲ್ಲಿ ಬುಧವಾರ ದ್ವಿತೀಯ ಪಿಯುಸಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕವಾಗಿ ಯಶಸ್ಸನ್ನು ಸಾಧಿಸಲು ಕುರಿತಾದ ಪುನಶ್ಚೇತನ ಕಾರ್ಯಾಗಾರ ಮತ್ತು ಶೇಷಾದ್ರಿಪುರಂ ಶಿಕ್ಷಣ ದತ್ತಿಯಿಂದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ವಿತರಣೆ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದರು. ಶೇಷಾದ್ರಿಪುರಂ ಸಂಸ್ಥೆ ಒಂದು ಬೃಹತ್ ಸರಸ್ವತಿಯ ಸಾಮ್ರಾಜ್ಯ. ಈ ಸಂಸ್ಥೆಯ ಜೀವನಾಡಿಗಳಾದ ವಿದ್ಯಾರ್ಥಿಗಳು ಶಿಸ್ತು, ಶಿಕ್ಷಣದ ಜತೆಗೆ ಸಂಸ್ಕಾರ ಕಲಿಯಬೇಕು. ನಮ್ಮ ಸಂಸ್ಕೃತಿ, ಆಚಾರವಿಚಾರಗಳನ್ನು ಮಕ್ಕಳು ರೂಢಿಸಿಕೊಂಡು ಮೌಲ್ಯಯುತ ಶಿಕ್ಷಣಕ್ಕು ತಮ್ಮನ್ನು ತೆರೆದುಕೊಳ್ಳಬೇಕು ಎಂದರು.

ಶೇಷಾದ್ರಿಪುರಂ ದತ್ತಿ ಸಂಸ್ಥೆಯ ಗೌರವ ಕಾರ್ಯದರ್ಶಿ ನಾಡೋಜ ವೂಡೇ ಪಿ.ಕೃಷ್ಣ ಮಾತನಾಡಿ, ನಮ್ಮ ಸಂಸ್ಥೆಯ ವಿದ್ಯಾರ್ಥಿಗಳು ವಿಶ್ವದಾದ್ಯಂತ ಯಶಸ್ಸನ್ನ ಪಡೆದು ಸಮಾಜಕ್ಕೆ ಆಸ್ತಿ ಆಗಬೇಕು, ನಿಮ್ಮ ಶ್ರಮಕ್ಕೆ ತಕ್ಕ ಗೌರವ ಸಿಗಬೇಕು ಎಂದರು. ಕೈಗೆಟಕುವ ದರದಲ್ಲಿ ಶಿಕ್ಷಣ ಕೊಡುವುದು ಮತ್ತು ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ನಿರ್ಮಾಣ ಮಾಡುವುದು ನಮ್ಮ ಶಿಕ್ಷಣ ಸಂಸ್ಥೆಯ ಮುಖ್ಯ ಉದ್ದೇಶ. ವಿದ್ಯಾರ್ಥಿಗಳು ಹಿರಿಯರ ಕನಸುಗಳನ್ನು ನನಸು ಮಾಡಬೇಕು. ಸಾಧನೆ ಮಾಡಲು ಬೇಕಾದ ವಾತಾವರಣ ನಮ್ಮ ಸಂಸ್ಥೆಯ ಕಾಲೇಜಿನಲ್ಲಿ ಇದೆ. ಇಂತಹ ಸಂಸ್ಥೆಯಲ್ಲಿ ಶಿಕ್ಷಣ ಪಡೆಯುತ್ತಿರುವುದು ನಿಮ್ಮ ಪುಣ್ಯ ಎಂದು ತಿಳಿಸಿದರು.



ತುಮಕೂರಿನ ಶೇಷಾದ್ರಿಪುರಂ ಪಿಯು ಕಾಲೇಜಿನಲ್ಲಿ ದ್ವಿತೀಯ ಪಿಯುಸಿ ವಿದ್ಯಾರ್ಥಿಗಳ ಪುನಶ್ಚೇತನ ಕಾರ್ಯಗಾರವನ್ನು ಡಾ.ವೀರೇಶಾನಂದ ಸ್ವಾಮೀಜಿ ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಧರ್ಮದರ್ಶಿ ಡಬ್ಲ್ಯೂ.ಡಿ ಅಶೋಕ್, ಬಿ.ಸಿ.ಲೋಕನಾಥ್, ವೀರಭದ್ರಯ್ಯ, ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲ ಬಿ.ವಿ.ಬಸವರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಜಿ.ಟಿ.ಜಗದೀಶ್ ಇದ್ದರು.



2022-23 ನೇ ಸಾಲಿನ ದ್ವಿತೀಯ ಪಿಯುಸಿಯ ವಾಣಿಜ್ಯ ವಿಭಾಗದಲ್ಲಿ ರಾಜ್ಯಕ್ಕೆ 12ನೇ ಟಾಪರ್ ಎಂ. ಜಾಹ್ನವಿ, 14ನೇ ಟಾಪರ್ ಪಿ.ಸೌಮ್ಯಶ್ರೀ ಹಾಗೂ ಎನ್ ಇಇಟಿಯಲ್ಲಿ ಉತ್ತಮ ಸಾಧನೆತೋರಿದ ಎಸ್.ವಿಷ್ಣು , ಹೇಮಂತ್ ಅವರನ್ನು ಸನ್ಮಾನಿಸಲಾಯಿತು. ಹೊಸದಾಗಿ ಪ್ರಥಮ ಪಿಯುಸಿಗೆ ಪ್ರವೇಶ ಪಡೆದಿರುವ ಶೇ.85 ಕ್ಕಿಂತ ಹೆಚ್ಚು ಅಂಕಗಳಿಸಿರುವ 91 ವಿದ್ಯಾರ್ಥಿಗಳಿಗೆ ಹಾಗೂ ಶೇ.95 ಕ್ಕಿಂತ ಹೆಚ್ಚು ಅಂಕ ಗಳಿಸಿರುವ 16 ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ಮತ್ತು ಪ್ರಮಾಣ ಪತ್ರವನ್ನು ವಿತರಿಸಲಾಯಿತು.




ಕನ್ನಡಪ್ರಭ

Aug 10, 2023


# 'ಭ್ರಷ್ಟ ರಾಜಕಾರಣಿಗಳ ವಿರುದ್ಧ ಚಳವಳಿ ಅಗತ್ಯ'

## ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ ಕಾರ್ಯಕ್ರಮದಲ್ಲಿ ಎಂ.ಬಸವಯ್ಯ ಅಭಿಮತ

• **ಕನ್ನಡಪ್ರಭ ವಾರ್ತೆ** ತುಮಕೂರು

ನಗರದಶೇಷಾದ್ರಿಪುರಂಕಾಲೇಜಿನಲ್ಲಿಭಾರತಸೇವಾದಳ ಅಭಿಮಾನಿ ಬಳಗ ಬೆಂಗಳೂರು, ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ ಮತ್ತು ಎನ್‌ಎಸ್‌ಎಸ್ ಸಂಯುಕ್ತ ಆಶ್ರಯದಲ್ಲಿ ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ ನಡೆಯಿತು.

ಕ್ರೀಡಾ ಭಾರತಿ ಮೈದಾನದಲ್ಲಿ ಧ್ವಜ ವಂದನೆ ಸಲ್ಲಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು. ಈ ಸಂದರ್ಭದಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗದ ಅಧ್ಯಕ್ಷಡಿ.ಎಫ್.ಹಳ್ಳಪ್ಪಧ್ವಜಾರೋಹಣದಸಂದರ್ಭದಲ್ಲಿ ಅನುಸರಿಸಬೇಕಾದ ನೀತಿ ನಿಯಮಗಳು ಮತ್ತು ಧ್ವಜಸಂಹಿತೆಯ ಬಗ್ಗೆ ಸವಿವರವಾಗಿ ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರು. ಶೇಷಾದ್ರಿಪುರಂ ಕಾಲೇಜಿನವರೆಗೆ ವಿದ್ಯಾರ್ಥಿಗಳಿಂದ ಜಾಥಾ ನಡೆಯಿತು.

ಕಾರ್ಯಕ್ರಮದ ಔಚಿತ್ಯ ಕುರಿತು ಭಾರತಸೇವಾದಳದ ಖಜಾಂಚಿ ಎಚ್.ಎಸ್. ಕಾಶಿನಕುಂಟೆಯವರು ಪ್ರಾಸ್ತಾವಿಕವಾಗಿಮಾತನಾಡಿ ಜನ್ಮನೀಡಿದತಾಯಿ ಮತ್ತು ಹುಟ್ಟಿದ ಮಣ್ಣನ್ನು ಎಂದಿಗೂ ಪೂಜ್ಯಭಾವದಿಂದ ಕಾಣಬೇಕು ಎಂದರು.

ಬಾಪೂಜಿ ವಿದ್ಯಾಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿ ಎಂ.ಬಸವಯ್ಯ ಮಾತನಾಡಿ, ಇಂದಿನ ವಿದ್ಯಾರ್ಥಿಗಳು ತರಗತಿ ಪಠ್ಯಕ್ರಮದ ಜೊತೆಯಲ್ಲಿಸ್ವಾತಂತ್ರ್ಯ ಚಳವಳಿಯ ಬಗ್ಗೆ ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿದೆ ಎಂದರು.

ಅಂದು ಭಾರತೀಯರ ಮೇಲೆ ಬ್ರಿಟಿಷರ ವಿರುದ್ಧ ಚಲೇಜಾವ್ ಚಳುವಳಿನಡೆದಿತ್ತು. ಇಂದುಶ್ರೀಸಾಮಾನ್ಯರ ತೆರಿಗೆ ಹಣವನು ದುರುಪಯೋಗಪಡಿಸಿಕೊಂಡು ಭ್ರಷ್ಟಾಚಾರದಲ್ಲಿ ನಿರತರಾಗಿರುವ ರಾಜಕಾರಣಿಗಳ ವಿರುದ್ಧ ಚಲೇಜಾವ್ ಚಳವಳಿ ನಡೆಸಬೇಕಾಗಿದೆ ಎಂದರು.



ತುಮಕೂರು ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗ ಬೆಂಗಳೂರು, ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ ಮತ್ತು ಎನ್‌ಎಸ್‌ಎಸ್ ಸಂಯುಕ್ತ ಆಶ್ರಯದಲ್ಲಿ ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ ನಡೆಯಿತು.

ವಿಶ್ರಾಂತ ಪ್ರಾಂಶುಪಾಲ ಮತ್ತು ಲೇಖಕ ಎಂ.ಎಚ್. ನಾಗರಾಜು ಇಡೀ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಸಂಕ್ಷಿಪ್ತವಾಗಿ ಮನಮುಟ್ಟುವಂತೆ ವಿವರಿಸಿದರು. ನಮ್ಮ ದೇಶದ ಎರಡು ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತದಂತೆ, ಭಾರತ ಸ್ವಾತಂತ್ರ್ಯ ಚಳವಳಿಯ ಚರಿತ್ರೆಯು ಮೂರನೇ ಮಹಾಕಾವ್ಯ ಇದ್ದಂತೆ. ಅದರಲ್ಲಿ ಕ್ವಿಟ್ ಇಂಡಿಯ ಚಳವಳಿಯು ಒಂದು ಭಾಗವಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇಪಿ. ಕೃಷ್ಣ ಮಾತನಾಡಿ, ಸ್ವಾತಂತ್ರ್ಯ ಹೋರಾಟದಂತಹ ಅರ್ಥಪೂರ್ಣವಾದ ಕಾರ್ಯಕ್ರಮಗಳನ್ನು ಆಯೋಜಿಸಲು ಸಂಸ್ಥೆಯ ಸದಾ ಸಿದ್ಧವಾಗಿರುತ್ತದೆ ಎಂದು ಹೇಳಿದರು. ಭಾರತಸೇವಾದಳಅಭಿಮಾನಿಬಳಗದಪದಾಧಿಕಾರಿಗಳು, ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷ ಅಶೋಕ್, ಪ್ರಾಂಶುಪಾಲಡಾ.ಜಗದೀಶಜಿ.ಟಿ., ಗಾಂಧಿಅಧ್ಯಯನ ಕೇಂದ್ರದಸಂಚಾಲಕಪ್ರೊ.ನಿವೇದಿತಾ, ಪ್ರೊ.ಮನೋಹರ್ ಇತರರಿದ್ದರು.

ತುಮಕೂರು ವಾರ್ತೆ

10 Aug 2023

## ಶೇಷಾದ್ರಿಪುರಂ ಕಾಲೇಜಿನಲ್ಲಿ ಕ್ವಿಟ್ ಇಂಡಿಯಾ ಚಳವಳಿಯ 81ನೇ ವರ್ಷಾಚರಣೆ

# ಅಹಿಂಸಾ ಮಾರ್ಗದಲ್ಲಿ ಸದೃಢವಾದ ದೇಶ ನಿರ್ಮಿಸಬೇಕು



ತುಮಕೂರು: ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗ ಬೆಂಗಳೂರು, ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ ಮತ್ತು ಎನ್‌ಎಸ್‌ಎಸ್ ಸಂಯುಕ್ತ ಆಶ್ರಯದಲ್ಲಿ ಕ್ವಿಟ್ ಇಂಡಿಯಾ ಚಳವಳಿಯ 81 ನೇ ವರ್ಷಾಚರಣೆ ಆಯೋಜಿಸಲಾಗಿತ್ತು.

ಕ್ರೀಡಾ ಭಾರತಿ ಮೈದಾನದಲ್ಲಿ ಗಣ್ಯರಲ್ಲಿ ಧ್ವಜವಂದನೆ ಸಲ್ಲಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು, ಈ ಸಂದರ್ಭದಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗದ ಅಧ್ಯಕ್ಷ ಡಿ.ಎಫ್.ಹಳ್ಳಪ್ಪ ಧ್ವಜಾರೋಹಣದ ಸಂದರ್ಭದಲ್ಲಿ ಅನುಸರಿಸಬೇಕಾದ ನೀತಿ ನಿಯಮಗಳು ಮತ್ತು ಧ್ವಜ ಸಂಹಿತೆಯ ಬಗ್ಗೆ ಸವಿವರವಾಗಿ ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರು, ನಂತರ ಶೇಷಾದ್ರಿಪುರಂ ಕಾಲೇಜಿನ ವರೆಗೆ ವಿದ್ಯಾರ್ಥಿಗಳಿಂದ ಜಾಥಾ ನಡೆಯಿತು.

ಕಾರ್ಯಕ್ರಮದ ಔಚಿತ್ಯ ಕುರಿತು ಭಾರತ ಸೇವಾದಳದ ಖಜಾಂಚಿ ಹೆಚ್.ಎಸ್.ಕಾಳೆನಕುಂಟೆ ಪ್ರಾಸ್ತಾವಿಕ ಭಾಷಣ ಮಾಡಿದರು, ಜನ್ಮ ನೀಡಿದ ತಾಯಿ ಮತ್ತು ಹುಟ್ಟಿದ ಮಣ್ಣನ್ನು ಎಂದಿಗೂ ಪೂಜ್ಯ ಭಾವದಿಂದ ಕಾಣಬೇಕು, ಯುವಕರು ಜಾಗೃತರಾಗಿದ್ದರೆ ದೇಶಕ್ಕೆ ಕೀರ್ತಿ ಸಿಗುತ್ತದೆ, ಮಲಗಿದರೆ ದೇಶ ಅವನತಿ ಹೊಂದುತ್ತದೆ, ಆದ್ದರಿಂದ ಯುವ ಸಮುದಾಯ ಜಾಗೃತರಾಗಿ ದೇಶಕಟ್ಟುವ ಮನಸ್ಥಿತಿ ಬೆಳೆಸಿಕೊಳ್ಳಬೇಕೆಂದರು.

ಬಾಪೂಜಿ ವಿದ್ಯಾಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿ ಎಂ.ಬಸವಯ್ಯ ಮಾತನಾಡಿ, ಇಂದಿನ ವಿದ್ಯಾರ್ಥಿಗಳು ತರಗತಿ ಪಠ್ಯ ಕ್ರಮದ ಜೊತೆಯಲ್ಲಿ ಸ್ವಾತಂತ್ರ್ಯ ಚಳವಳಿಯ ಬಗ್ಗೆ ತಿಳಿದುಕೊಳ್ಳುವುದು ಅತ್ಯವಶ್ಯಕವಾಗಿದೆ, ಅಂದು ಭಾರತೀಯರ ಮೇಲೆ ಬ್ರಿಟಿಷರ ವಿರುದ್ಧ ಚಲೇಜಾವ್ ಚಳವಳಿ ನಡೆದಿತ್ತು, ಇಂದು ಶ್ರೀಸಾಮಾನ್ಯರ ತೆರಿಗೆ ಹಣ ದುರುಪಯೋಗ ಪಡಿಸಿಕೊಂಡು ಭ್ರಷ್ಟಾಚಾರದಲ್ಲಿ ನಿರತರಾಗಿರುವ ರಾಜಕಾರಣಿಗಳ ವಿರುದ್ಧ ಚಲೇಜಾವ್ ಚಳವಳಿ ನಡೆಸಬೇಕಾಗಿದೆ, ಗಾಂಧೀಜಿಯವರು ಅನ್ಯಾಯ ಕಂಡೊಡನೆ ಪ್ರತಿಭಟನೆ ಮಾಡುತ್ತಿದ್ದರು, ಆದರೆ ನಾವೆಲ್ಲ ಇಂದು ಅನ್ಯಾಯವನ್ನು ಕಂಡರೂ ಕೂಡ ಪ್ರತಿಭಟಿಸಲಾರದಿರುವ ಮಲಗಿರುವ ಗಾಂಧಿಗಳಾಗಿದ್ದೇವೆ, ಗಾಂಧೀಜಿಯವರಂತೆ ಸತ್ಯ ಮತ್ತು ಅಹಿಂಸೆಯ ಮಾರ್ಗದಲ್ಲಿ ಸಾಗಿ ಆದರ್ಶ ಮತ್ತು ಸದೃಢವಾದ ದೇಶ ಕಟ್ಟಬೇಕು ಎಂದು ಹೇಳಿದರು.

ಮುಖ್ಯಅತಿಥಿಗಳಾಗಿ ವಿಶ್ರಾಂತ ಪ್ರಾಂಶುಪಾಲರು ಮತ್ತು ಲೇಖಕರಾದ ಎಂ.ಹೆಚ್.ನಾಗರಾಜು ಆಗಮಿಸಿ ಇಡೀ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಸಂಕ್ಷಿಪ್ತವಾಗಿ ಮನಮುಟ್ಟುವಂತೆ ವಿವರಿಸಿದರು.

ನಮ್ಮ ದೇಶದ ಎರಡು ಮಹಾ ಕಾವ್ಯಗಳಾದ ರಾಮಾಯಣ ಮತ್ತು ಮಹಾ ಭಾರತದಂತೆ ಭಾರತ ಸ್ವಾತಂತ್ರ್ಯ ಚಳವಳಿಯ ಚರಿತ್ರೆಯು ಮೂರನೇ ಮಹಾ ಕಾವ್ಯಇದ್ದಂತೆ, ಅದರಲ್ಲಿ ಕ್ವಿಟ್ ಇಂಡಿಯ ಚಳವಳಿಯು ಒಂದು ಭಾಗವಾಗಿದೆ, ಬ್ರಿಟಿಷರ ವಿರುದ್ಧ ಆರಂಭದ ಯುದ್ಧಗಳು ಹಿಂಸಾತ್ಮಕವಾಗಿದ್ದವು, ಆದರೆ ನಂತರದ ದಿನಗಳಲ್ಲಿ ವಿಶೇಷವಾಗಿ ಗಾಂಧಿ ಯುಗದಲ್ಲಿ ಅಹಿಂಸಾತ್ಮಕ ಹೋರಾಟ ನಡೆದವು, 1860 ರಿಂದ 1885 ರ ವರೆಗಿನ 25 ವರ್ಷಗಳ ಕಾಲವು ಭಾರತೀಯರಲ್ಲಿ ರಾಷ್ಟ್ರೀಯತೆ ಬಿತ್ತನೆ ಮಾಡಿದ ಕಾಲಘಟ್ಟವಾಗಿದೆ, ಕ್ವಿಟ್ ಇಂಡಿಯ ಚಳವಳಿಯನ್ನು ಕೆಲವು ಕಾಲ ಯಾವುದೇ ನಾಯಕರಿಲ್ಲದೆ ಜನ ಸಾಮಾನ್ಯರೇ ಮುಂದುವರೆಸಿಕೊಂಡು ಹೋದದ್ದರಿಂದ ಅದು ಶ್ರೀಸಾಮಾನ್ಯರ ಚಳವಳಿಯಾಗಿತ್ತು ಮತ್ತು ದೇಶ ವ್ಯಾಪ್ತಿ ಹಬ್ಬಿತು ಎಂದು ಹಲವಾರು ವಿಷಯಗಳನ್ನು ಹಂಚಿಕೊಂಡರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ. ಕೃಷ್ಣ ಮಾತನಾಡಿ, ಸ್ವಾತಂತ್ರ್ಯ ಹೋರಾಟದಂತಹ ಅರ್ಥಪೂರ್ಣ ಕಾರ್ಯಕ್ರಮ ಆಯೋಜಿಸಲು ಸಂಸ್ಥೆಯು ಸದಾ ಸಿದ್ಧವಾಗಿರುತ್ತದೆ ಎಂದು ಹೇಳಿದರು. ಈಗಿನ ಪೀಳಿಗೆಯವರು ಅಂತಹ ಗಾಂಧಿ ತತ್ವಗಳನ್ನು ಅಳವಡಿಸಿಕೊಂಡು ರಾಷ್ಟ್ರೀಯತೆಯ ಮನೋಭಾವ ಬೆಳೆಸಿಕೊಳ್ಳಬೇಕೆಂದು ಕರೆ ನೀಡಿದರು. ಕಾರ್ಯಕ್ರಮದಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗದ ಪದಾಧಿಕಾರಿಗಳು, ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷ ಅಶೋಕ್, ಪ್ರಾಂಶುಪಾಲ ಡಾ.ಜಗದೀಶ.ಜಿ.ಟಿ, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕರಾದ ಪ್ರೊ.ನಿವೇದಿತಾ, ಪ್ರೊ.ಮನೋಹರ್ ಹಾಜರಿದ್ದರು.

ಕನ್ನಡಪ್ರಭ ಬುಧವಾರ 9.8.2023

# ಕನ್ನಡ ರತ್ನ ಪ್ರಶಸ್ತಿ

ಶ್ರೀ ಕುವೆಂಪು ಕಲಾನಿಕೇತನ ಸಂಸ್ಥೆಯಿಂದ ಮಂಗಳವಾರ ರವೀಂದ್ರ ಕಲಾಕ್ಷೇತ್ರದಲ್ಲಿ ಆಯೋಜಿಸಲಾಗಿದ್ದ ರಾಷ್ಟ್ರಕವಿ ಕುವೆಂಪು ಅವರ 119ನೇ ಜಯಂತಿ ಕಾರ್ಯಕ್ರಮದಲ್ಲಿ 'ಕನ್ನಡಪ್ರಭ' ಛಾಯಾಗ್ರಾಹಕ ಪಿ.ಸುರೇಶ್ ಹಾಗೂ ಛಾಯಾಗ್ರಾಹಕ ಬಿ.ಎನ್. ಮೋಹನ್ ಕುಮಾರ್ ಅವರಿಗೆ ಕುವೆಂಪು ವಿಶ್ವಮಾನವ ಕನ್ನಡ ರತ್ನ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಕನ್ನಡ ಮತ್ತು ಸಂಸ್ಕೃತಿ ಸಚಿವ ಶಿವರಾಜ ತಂಗಡಗಿ, ಹಂಪಿ ವಿವಿ ಮಾಜಿ ಕುಲಪತಿ ಡಾ। ಮಲ್ಲಿಕಾ ಎಸ್ ಘಂಟಿ, ಡಾ। ಎಚ್.ರವಿಕುಮಾರ್, ಕುವೆಂಪು ವಿಶ್ವವಿದ್ಯಾಲಯದ ಮಾಜಿ ಕುಲಪತಿ ಡಾ। ಕೆ.ಚಿದಾನಂದಗೌಡ ಇದ್ದರು.

ಉದಯವಾಣಿ
ಬುಧವಾರ, ಆಗಸ್ಟ್ 9, 2023

## ಸಾಹಿತಿ ಡಾ.ಮಲ್ಲಿಕಾ ಎಸ್.ಘಂಟಿಗೆ ಕುವೆಂಪು ಪ್ರಶಸ್ತಿ: ಸಚಿವ ತಂಗಡಗಿ

# ಎಲ್ಲಾ ಸಮಾಜ ಗುರುತಿಸುವ ಶಕ್ತಿ ಸಿದ್ದರಾಮಯ್ಯಗಿದೆ

ಬೆಂಗಳೂರು: ರಾಜ್ಯದಲ್ಲಿ ತುಳಿತಕ್ಕೊಳಗಾದವರು ಸೇರಿದಂತೆ ಪ್ರತಿ ಸಮಾಜವನ್ನು ಗುರುತಿಸುವ ಶಕ್ತಿ ದೇವರಾಜ ಅರಸು ಅವರನ್ನು ಹೊರತುಪಡಿಸಿದರೆ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರಲ್ಲಿ ಕಾಣಬಹುದು ಎಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವ ಶಿವರಾಜ್ ಎಸ್.ತಂಗಡಗಿ ತಿಳಿಸಿದರು.

ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಕಲಾ ನಿಕೇತನ ಸಂಸ್ಥೆಯು ರವೀಂದ್ರ ಕಲಾ ಕ್ಷೇತ್ರದಲ್ಲಿ ಮಂಗಳವಾರ ಹಮ್ಮಿಕೊಂಡಿದ್ದ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿ, ವಿಶೇಷ ವಾದ ಮುಖ್ಯಮಂತ್ರಿ ನಮ್ಮ ರಾಜ್ಯಕ್ಕೆ ಸಿಕ್ಕಿದ್ದಾರೆ. ಸಿದ್ದರಾಮಯ್ಯ ನೇತೃತ್ವದ ಸರ್ಕಾರದ ಸಚಿವ ಸಂಪುಟದೊಳಗೆ ಸದಸ್ಯನಾಗಿ ಕೆಲಸ ಮಾಡಲು ನನಗೆ ಅವಕಾಶ ಸಿಕ್ಕಿದ್ದು ಪೂರ್ವ ಜನ್ಮದ ಪುಣ್ಯ ಎಂದು ಹೇಳಿದರು.

ರಾಜಕೀಯದಲ್ಲಿ ಸುಳ್ಳು ಹೇಳುವುದು ದೊಡ್ಡ ಕೆಲಸ ಅಂತ ತಿಳಿದುಕೊಳ್ಳಬೇಡಿ ಎಂದು ನೇರವಾಗಿ ಹೇಳಿರುವ ಸಿಎಂ ಸಿದ್ದರಾಮಯ್ಯ, ಒಳ್ಳೆಯ ಆಡಳಿತ ಮಾಡಲು ಸಲಹೆ ಕೊಟ್ಟಿದ್ದಾರೆ. ಅವರು ಎಂದೂ ಸುಳ್ಳು ಹೇಳಲು ಇಷ್ಟಪಡುವುದಿಲ್ಲ ಎಂದು ಹೇಳಿದರು.

**ವೈದ್ಯರು, ಶಿಕ್ಷಕರ ಪಾತ್ರ ದೊಡ್ಡದು:** ಶಿಕ್ಷಣ ಕೊಡುವ ಗುರುಗಳಿಗೆ ಜೀವನವನ್ನು ಬದಲಾವಣೆ ಮಾಡುವ ಶಕ್ತಿ ಇದೆ. ಆರೋಗ್ಯದಲ್ಲಿ ತೊಂದರೆ ಆದಾಗ ಮತ್ತೊಂದು ಜೀವನ ಕೊಡುವ ಶಕ್ತಿ ಇರುವುದು ವೈದ್ಯರಿಗೆ ಮಾತ್ರ. ಶಿಕ್ಷಣ ಕೊಡುವುದು ಹಾಗೂ ಜೀವ ಉಳಿಸುವುದು ದೊಡ್ಡ ಅವಕಾಶ. ಹೀಗಾಗಿ ಪ್ರಶಸ್ತಿ ಸ್ವೀಕರಿಸಿದ ಡಾ.ಮಲ್ಲಿಕಾ ಎಸ್ ಘಂಟಿ ಹಾಗೂ ಡಾ.ರವಿಕುಮಾರ್ ಅವರಿಗೆ ಅಭಿನಂದನೆ ಸಲ್ಲಿಸುತ್ತೇನೆ ಎಂದು ತಿಳಿಸಿದರು.

ಇನ್ನು ಜ್ಞಾನಪಥ ಎಂಬ ಪದ ಉತ್ತರ ಕರ್ನಾಟಕ ಭಾಗದಿಂದ ಹುಟ್ಟಿ ಪ್ರಸ್ತುತ ಇಡೀ ದೇಶಕ್ಕೆ ಪಸರಿಸಿದ್ದೆ. ಕುವೆಂಪು ಕಲಾನಿಕೇತನವು 40 ವರ್ಷದಿಂದ ಈ ಪ್ರಶಸ್ತಿಗಳನ್ನು ಕೊಡಮಾಡುತ್ತಿದೆ. 59 ದೇಶಗಳಲ್ಲಿ ಕನ್ನಡ ಉಳಿಸಿ, ಬೆಳೆಸುವ ಕೆಲಸ ಮಾಡುತ್ತಿದೆ. ಸರ್ಕಾರವು ಇಂತಹ ಸೇವೆಗೆ ಸದಾ ಬೆಂಬಲಿಸಲಿದೆ ಎಂದರು.



ಹಿರಿಯ ಸಾಹಿತಿ ಡಾ.ಮಲ್ಲಿಕಾ ಎಸ್.ಘಂಟಿ ಅವರಿಗೆ ರಾಷ್ಟ್ರ ಕವಿ ಕುವೆಂಪು ಪ್ರಶಸ್ತಿ, ವೈದ್ಯ ಡಾ. ರವಿಕುಮಾರ್‌ಗೆ ಕುವೆಂಪು ಕರ್ನಾಟಕ ರತ್ನ ಪ್ರಶಸ್ತಿ ಹಾಗೂ ವಿವಿಧ ಕ್ಷೇತ್ರದ ಸಾಧಕರಿಗೆ ಕುವೆಂಪು ವಿಶ್ವ ಮಾನವ ಸಮಾಜ ಸೇವಾ ರತ್ನ ಪ್ರಶಸ್ತಿಯನ್ನು ಸಚಿವ ಶಿವರಾಜ್ ಎಸ್.ತಂಗಡಗಿ ವಿತರಿಸಿದರು.

ವಿಶ್ವವಾಣಿ

09.08.2023 ಬುಧವಾರ
vishwavani.news



ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಕುವೆಂಪು ಕಲಾನಿಕೇತನ ಸಂಸ್ಥೆ ಆಯೋಜಿಸಿದ್ದ ರಾಷ್ಟ್ರಕವಿ ಕುವೆಂಪು ಅವರ 119ನೇ ಜಯಂತಿ ಅಂಗವಾಗಿ ಡಾ.ಎಚ್.ರವಿಕುಮಾರ್ ಅವರಿಗೆ ಕುವೆಂಪು ಕರ್ನಾಟಕ ರತ್ನ ಮತ್ತು ಮಲ್ಲಿಕಾ ಎಸ್. ಘಂಟಿ ಅವರಿಗೆ ರಾಷ್ಟ್ರಕವಿ ಕುವೆಂಪು ಪ್ರಶಸ್ತಿ ನೀಡಿ ಗೌರವಿಸಲಾಯಿತು. ಕನ್ನಡ ಮತ್ತು ಸಂಸ್ಕೃತಿ ಸಚಿವ ಶಿವರಾಜ್ ತಂಗಡಗಿ, ಎಸ್.ಜನಾರ್ಧನ್, ಮಂಜುಳಾ ಮಾನಸ, ನಟಿ ಅಭಿನಯ, ಕವಿ ಕೆ.ಚಿದಾನಂದಗೌಡ, ಆದರ್ಶ ಸುಗಮ ಸಂಗೀತ ಅಧ್ಯಕ್ಷ ಕಿಕ್ಕೇರಿ ಕೃಷ್ಣಮೂರ್ತಿ, ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನ ಅಧ್ಯಕ್ಷ ಕುವೆಂಪು ಪ್ರಕಾಶ್, ರಾಜ್ಯ ರೈತ ಸಂಘಟನೆಗಳ ಒಕ್ಕೂಟದ ಅಧ್ಯಕ್ಷ ಕುರುಬೂರು ಶಾಂತಕುಮಾರ್, ಗಾಂಧಿ ಭವನದ ಅಧ್ಯಕ್ಷ ವೂಡೇ ಪಿ. ಕೃಷ್ಣ ಇದ್ದರು.

ಸಂಜೆವಾಣಿ
Wednesday 09 August 2023



ಕುವೆಂಪು ಕಲಾನಿಕೇತನ ವತಿಯಿಂದ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ರಾಷ್ಟ್ರಕವಿ ಕುವೆಂಪುರವರ 119ನೇ ಜಯಂತಿ ಕಾರ್ಯಕ್ರಮದಲ್ಲಿ ಡಾ. ಮಲ್ಲಿಕಾ ಎಸ್. ಘಂಟಿ ಹಾಗೂ ಡಾ. ಹೆಚ್. ರವಿಕುಮಾರ್‌ರವರಿಗೆ ಸಚಿವ ಶಿವರಾಜ್ ತಂಗಡಗಿರವರು ಕುವೆಂಪು ಕರ್ನಾಟಕ ರತ್ನ ಪ್ರಶಸ್ತಿ ನೀಡಿ ಗೌರವಿಸಿದರು. ಗಾಂಧಿ ಭವನ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ ಕೃಷ್ಣ, ಅಧ್ಯಕ್ಷ ಕುವೆಂಪು ಪ್ರಕಾಶ್ ಮತ್ತಿತರರು ಇದ್ದಾರೆ.

ಈ ಸಂಜೆ

Aug 9, 2023



ಕುವೆಂಪು ಕಲಾನಿಕೇತನ ವತಿಯಿಂದ ರವೀಂದ್ರ ಕಲಾಕ್ಷೇತ್ರದಲ್ಲಿಂದು ಹಮ್ಮಿಕೊಂಡಿದ್ದ ರಾಷ್ಟ್ರಕವಿ ಕುವೆಂಪು ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಡಾ.ಅನಿಲ್ ಶ್ರೀನಿವಾಸ್ ಹಾಗೂ ಸಂದೀಪ್ ಅವರಿಗೆ ಕುವೆಂಪು ವಿಶ್ವಮಾನವ ಕನ್ನಡರತ್ನ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಸಚಿವ ಶಿವರಾಜ್ ತಂಗಡಗಿ, ವಿಶ್ರಾಂತ ಕುಲಪತಿ ಮಲ್ಲಿಕಾ ಘಂಟಿ, ಎಚ್.ರವಿಕುಮಾರ್, ಡಾ.ತಾರಿಣಿ ಚಿದಾನಂದಗೌಡ, ಡಾ.ಪೂಜೆ ಪಿ.ಕೃಷ್ಣ, ಕುವೆಂಪು ಪ್ರಕಾಶ್ ಮತ್ತಿತರರು ಈ ಸಂದರ್ಭದಲ್ಲಿದ್ದರು.

ಸಂಯುಕ್ತ ಕರ್ನಾಟಕ
ಮಂಗಳವಾರ 8 ಆಗಸ್ಟ್ 2023
ಬೆಂಗಳೂರು | BENGALURU

# ಹೋರಾಟಗಾರರ ಕೊರತೆಗೆ ಕಳವಳ

ಬೆಂಗಳೂರು, : ಮಹಾತ್ಮಾಗಾಂಧಿ ಅವರು ದೇಶದ ಶ್ರೀಸಾಮಾನ್ಯನಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆಯನ್ನು ಅರ್ಥ ಮಾಡಿಸಿ ಹೋರಾಟವನ್ನು ಮಾಡಿದರು. ದುರ್ದೈವವಶಾತ್ ಇಂದು ಅಂತಹ ಹೋರಾಟಗಾರರ ಕೊರತೆ ಎದ್ದು ಕಾಣುತ್ತಿದೆ ಎಂದು ನಿವೃತ್ತ ನ್ಯಾ. ನಾಗಮೋಹನದಾಸ್ ಅಭಿಪ್ರಾಯಪಟ್ಟರು.

ನಗರದ ಗಾಂಧಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಎ.ಅಣ್ಣಾಮಲೈ ರಚಿಸಿದ ಗಾಂಧಿ ದಿ ಲಾಯರ್ ಎಂಬ ಪುಸ್ತಕವನ್ನು ಬಿಡುಗಡೆಗೊಳಿಸಿ, ಮಹಾತ್ಮಾ ಗಾಂಧೀಜಿ ಅವರ ತತ್ವ ಆದರ್ಶಗಳ ಕುರಿತು ಮಾತನಾಡಿದರು.

ಗಾಂಧಿ ದಿ ಲಾಯರ್ ಕೃತಿ ಬಿಡುಗಡೆ ಕಾರ್ಯಕ್ರಮ ಉದ್ಘಾಟಿಸಿದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಮಾತನಾಡಿ, ಇಂದಿನ ಯುವ ವಕೀಲರು ನ್ಯಾಯ ತೀರ್ಪು ನೀಡುವಲ್ಲಿ ಗಾಂಧೀಜಿಯವರ ಕಾನೂನು ವೃತಿಜೀವನವನ್ನು ಅಳವಡಿಸಿಕೊಳ್ಳಬೇಕು ಎಂದರು.

ಗಾಂಧಿ ದಿ ಲಾಯರ್' ಕೃತಿಯ ಕರ್ತ ಎ.ಅಣ್ಣಾಮಲೈ ಮಾತನಾಡಿ, ಮಾರುಕಟ್ಟೆಯಲ್ಲಿ ಗಾಂಧಿಯವರ ಬಗ್ಗೆ ಪುಸ್ತಕ, ಸಿನಿಮಾ ಬಂದಿದೆ.




ಗಾಂಧಿ ಭವನದಲ್ಲಿ ಸೋಮವಾರ ನಡೆದ ಕಾರ್ಯಕ್ರಮದಲ್ಲಿ ಎ.ಅಣ್ಣಾಮಲೈ ರಚಿಸಿದ ಗಾಂಧಿ ದಿ ಲಾಯರ್ ಪುಸ್ತಕವನ್ನು ನಿವೃತ್ತ ನ್ಯಾ. ನಾಗಮೋಹನದಾಸ್ ಬಿಡುಗಡೆ ಮಾಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಎ.ಅಣ್ಣಾಮಲೈ ಸುರೇಶ್ ನಾಡಗೌಡ ಉಪಸ್ಥಿತರಿದ್ದರು.

ಆದರೆ ಗಾಂಧೀಜಿಯವರ ಬಗ್ಗೆ ಇನ್ನೂ ಅನೇಕ ಸೂಕ್ಷ್ಮಗಳ ಬಗ್ಗೆ ಬೆಳಕು ಚೆಲ್ಲುವ ಕಾರ್ಯ ಆಗಬೇಕಿದೆ. ಈ ಕೃತಿ ಅಂತಹ ಕೆಲಸವನ್ನು ಮಾಡುತ್ತಿದೆ ಎಂದರು.

ಗಾಂಧಿಯವರ ಪ್ರತಿಯೊಂದು ಹೆಜ್ಜೆ, ಪ್ರತಿಯೊಂದು ಅನುಭವ ಇಂದಿಗೂ ಪ್ರಭಾವ ಬೀರುತ್ತದೆ. ಹೀಗಾಗಿ ಅವರ ವಿಚಾರಗಳು ಎಂದೆಂದಿಗೂ ಪ್ರಸ್ತುತವಾಗಿದೆ ಎಂದ ಅವರು, ಬ್ಯಾಂಕ್ ಬ್ಯಾಲೆನ್ಸ್, ಆಸ್ತಿ, ಚಿನ್ನಾಭರಣ ಸೇರಿ ಇತರೆ ಕಾರಣಕ್ಕಾಗಿ ಮೊಕದ್ದಮೆ ಹೂಡಿ ಕೋರ್ಟ್‌ನಲ್ಲಿ ಹೋರಾಡಿದವರನ್ನು ನೋಡಿದ್ದೇನೆ ಆದರೆ ತಂದೆ ತಾಯಿ ಬಿಟ್ಟುಹೋದ ಪುಸ್ತಕಗಳನ್ನು ತಮ್ಮದಾಗಿಸಿಕೊಳ್ಳಲು ಮೊಕದ್ದಮೆ ಹೂಡಲು ಮುಂದಾಗುವ ಕಾಲ ಬರಲಿ ಎಂದು ಆಶಿಸಿದರು.

> ಗಾಂಧಿಯವರ ಪ್ರತಿಯೊಂದು ಹೆಜ್ಜೆ, ಪ್ರತಿಯೊಂದು ಅನುಭವ ಇಂದಿಗೂ ಪ್ರಭಾವ ಬೀರುತ್ತದೆ. ಹೀಗಾಗಿ ಅವರ ವಿಚಾರಗಳು ಎಂದೆಂದಿಗೂ ಪ್ರಸ್ತುತವಾಗಿದೆ. ಬ್ಯಾಂಕ್ ಬ್ಯಾಲೆನ್ಸ್, ಆಸ್ತಿ, ಚಿನ್ನಾಭರಣ ಸೇರಿ ಇತರೆ ಕಾರಣಕ್ಕಾಗಿ ಮೊಕದ್ದಮೆ ಹೂಡಿ ಕೋರ್ಟ್‌ನಲ್ಲಿ ಹೋರಾಡಿದವರನ್ನು ನೋಡಿದ್ದೇನೆ. ಆದರೆ ತಂದೆ ತಾಯಿ ಬಿಟ್ಟುಹೋದ ಪುಸ್ತಕಗಳನ್ನು ತಮ್ಮದಾಗಿಸಿಕೊಳ್ಳಲು ಮೊಕದ್ದಮೆ ಹೂಡಲು ಮುಂದಾಗುವ ಕಾಲ ಬರಲಿ.
>
> "ಎ.ಅಣ್ಣಾಮಲೈ, | ಕೃತಿಕರ್ತ

ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ ರೆಡ್ಡಿ ಮಾತನಾಡಿ, ಗಾಂಧಿ ಹೋರಾಟವನ್ನು ರಕ್ತ ರಹಿತ ಕ್ರಾಂತಿ ಎಂದು ಕರೆದಿದ್ದಾರೆ. ಮಾನವನ ಹಕ್ಕುಗಳು ಹೇಗಿರಬೇಕು ಎಂಬುದರ ಬಗ್ಗೆ ವಿಶ್ವಸಂಸ್ಥೆಯ ಕರಡು ಸಿದ್ಧಪಡಿಸುವಾಗ ಗಾಂಧೀಜಿ ಅವರನ್ನು ಕೇಳುತ್ತಾರೆ ಎಂದು ತಿಳಿಸಿದರು.

ಬೆಂಗಳೂರು ಕಾನೂನು ವಿಶ್ವವಿದ್ಯಾಲಯದ ಡೀನ್ ಸುರೇಶ್ ನಾಡಗೌಡ ಹಾಗೂ ಗಾಂಧಿ ನಿಧಿ ಸ್ಮಾರಕದ ಉಪಾಧ್ಯಕ್ಷ ಜಿ.ಬಿ ಶಿವರಾಜು ಮಾತನಾಡಿದರು.

ಕನ್ನಡಪ್ರಭ
ಮಂಗಳವಾರ 8.8.2023

# ದೇಶದ್ರೋಹ ಕಾನೂನು ಮುಂದುವರಿಕೆ ಎಷ್ಟು ಸರಿ: ನ್ಯಾ.ನಾಗಮೋಹನ್ ಪ್ರಶ್ನೆ

## ಬ್ರಿಟಿಷರ ಕಾಯ್ದೆ ಈಗೇಕೆ? ಎ.ಅಣ್ಣಾಮಲೈ ವಿರಚಿತ 'ಗಾಂಧಿ ದಿ ಲಾಯರ್' ಲೋಕಾರ್ಪಣೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ದೇಶದ್ರೋಹ ಕಾನೂನಿನ ದುರ್ಬಳಕೆ ಹೆಚ್ಚಾಗಿರುವ ಸಂದರ್ಭದಲ್ಲಿ ಆ ಕಾನೂನು ಮುಂದುವರಿಯಬೇಕು ಎಂಬ ಕಾನೂನು ಆಯೋಗದ ಶಿಫಾರಸು ಎಷ್ಟು ಸಮಂಜಸವೆಂದು ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ಎಚ್.ಎನ್.ನಾಗಮೋಹನ್ ದಾಸ್ ಪ್ರಶ್ನಿಸಿದ್ದಾರೆ.

ಸೋಮವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎ.ಅಣ್ಣಾಮಲೈ ವಿರಚಿತ 'ಗಾಂಧಿ ದಿ ಲಾಯರ್' ಕೃತಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಗಾಂಧೀಜಿ ತಮ್ಮ ಹೇಳಿಕೆ ಹಾಗೂ ನಡವಳಿಕೆಗೆ ಬದ್ಧರಾಗಿದ್ದರು. ಇದರ ಪರಿಣಾಮ ಅವರು ದೇಶದ್ರೋಹ ಸೇರಿ ಇತರೆ ಪ್ರಕರಣ ಎದುರಿಸಿ ಮೂರುವರೆಸಾವಿರ ದಿನ ಜೈಲಿನಲ್ಲಿ ಕಳೆಯಬೇಕಾಯಿತು. ಬ್ರಿಟಿಷರು ತಂದಿದ್ದ ದೇಶದ್ರೋಹದ ಕಾಯ್ದೆಯನ್ನೇ ಈಗ ಮುಂದುವರಿಸಿಕೊಂಡು ಹೋಗುವುದು ಎಷ್ಟು ಸರಿ? ಅದರ ದುರ್ಬಳಕೆ ಹೆಚ್ಚಾಗಿರುವ ಹೊತ್ತಲ್ಲಿ ಅದರ ರದ್ದತಿಗೆ ಒತ್ತಾಯಿಸಿದ್ದೆವು. ಆದರೆ, ಕಾನೂನು ಆಯೋಗ ದೇಶದ್ರೋಹದ ಕಾನೂನು (ಐಪಿಸಿ 124ಎ) ರದ್ದುಗೊಳಿಸುವ ಅಗತ್ಯವಿಲ್ಲ. ಇನ್ನೂ ಹೆಚ್ಚಿನ ಸ್ಪಷ್ಟತೆಗಾಗಿ ತಿದ್ದುಪಡಿ ತರಬೇಕು. ಹೆಚ್ಚಿನ ಶಿಕ್ಷೆ ವಿಧಿಸಬೇಕು ಎಂದು ಶಿಫಾರಸು ನೀಡಿದೆ. ಇದು ಎಷ್ಟರ ಮಟ್ಟಿಗೆ ಸಮಂಜಸ, ಈ ಕಾನೂನು ರದ್ದಾಗಬೇಕು ಎಂಬುದು ನಮ್ಮ ಆಗ್ರಹ ಎಂದರು.

ಗಾಂಧಿಯವರು ದೇಶದ ಸಾಮಾನ್ಯ ರೈತರಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕುರಿತು ಅರ್ಥ ಮಾಡಿಸಿ, ಹೋರಾಟಕ್ಕಿಳಿಯುವಂತೆ ಮಾಡಿದ್ದರು. ಆದರೆ ಇಂದು ಅಂತಹ ಮುಖಂಡರ ಕೊರತೆ ಕಾಣುತ್ತಿದೆ ಎಂದರು.

ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ ಮಾತನಾಡಿ, ಐರೋಪ್ಯರು ಗಾಂಧಿ ಹೋರಾಟವನ್ನು ರಕ್ತ ರಹಿತ ಕ್ರಾಂತಿ ಎಂದು ಕರೆದಿದ್ದಾರೆ. ಮಾನವನ ಹಕ್ಕುಗಳು ಹೇಗಿರಬೇಕು ಎಂಬುದರ ಬಗ್ಗೆ ವಿಶ್ವ ಸಂಸ್ಥೆಯ ಕರಡು ಸಿದ್ಧಪಡಿಸುವಾಗ ಗಾಂಧೀಜಿ ಕರ್ತವ್ಯದ ಕುರಿತು ಒತ್ತುಕೊಟ್ಟು ಹೇಳಿಕೆ ನೀಡಿದ್ದರು. ಅವರ ಜೀವನ ಯುವ ವಕೀಲರಿಗೆ ಮಾದರಿ ಎಂದು ಹೇಳಿದರು.

ಕಾನೂನು ಕಾಲೇಜು ವಿಶ್ವವಿದ್ಯಾಲಯದ ಡೀನ್ ಪ್ರೊ. ಸುರೇಶ್ ವಿ.ನಾಡಗೌಡರ್, ಲೇಖಕ ಎ. ಅಣ್ಣಾಮಲೈ ಮಾತನಾಡಿದರು. ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಅಧ್ಯಕ್ಷತೆ ವಹಿಸಿದ್ದರು.



ಎ.ಅಣ್ಣಾಮಲೈ ವಿರಚಿತ 'ಗಾಂಧಿ ದಿ ಲಾಯರ್' ಕೃತಿಯ ಲೋಕಾರ್ಪಣೆ ಕಾರ್ಯಕ್ರಮ ಗಾಂಧಿ ಭವನದಲ್ಲಿ ನಡೆಯಿತು. ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಎಚ್.ಎನ್.ನಾಗಮೋಹನ್‌ದಾಸ್, ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ , ವೂಡೇ ಪಿ.ಕೃಷ್ಣ ಇದ್ದರು.

ಉದಯವಾಣಿ
ಮಂಗಳವಾರ, ಆಗಸ್ಟ್ 8, 2023

# 'ಗಾಂಧಿ ದಿ ಲಾಯರ್' ಕೃತಿ ಲೋಕಾರ್ಪಣೆ

**ಬೆಂಗಳೂರು:** ಬ್ರಿಟಿಷರು ತಂದಿದ್ದ ದೇಶದ್ರೋಹದ ಕಾಯ್ದೆಯನ್ನೇ ಈಗ ಮುಂದುವರಿಸಿಕೊಂಡು ಹೋಗುವುದು ಎಷ್ಟು ಸರಿ ಎಂದು ನಿವೃತ್ತ ನ್ಯಾಯಮೂರ್ತಿ ಎಚ್.ಎನ್. ನಾಗಮೋಹನ್ ದಾಸ್ ಹೇಳಿದರು.

ಸೋಮವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎ.ಅಣ್ಣಾಮಲೈ ವಿರಚಿತ 'ಗಾಂಧಿ ದಿ ಲಾಯರ್' ಕೃತಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಾತನಾಡಿ, ದೇಶದ್ರೋಹ ಕಾನೂನಿನ ದುರ್ಬಳಕೆ ಹೆಚ್ಚಾಗಿರುವ ಸಂದರ್ಭದಲ್ಲಿ ಆ ಕಾನೂನು ಮುಂದುವರಿಯಬೇಕು ಎಂಬ ಕಾನೂನು ಆಯೋಗದ ಶಿಫಾರಸು ಎಷ್ಟು ಸಮಂಜಸ ಎಂದರು. ಗಾಂಧಿಯವರು ದೇಶದ ಸಾಮಾನ್ಯ ರೈತರಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕುರಿತು ಅರ್ಥ ಮಾಡಿಸಿ ಹೋರಾಟಕ್ಕಿಳಿಯುವಂತೆ ಮಾಡಿದ್ದರು. ಆದರೆ ಇಂದು ಅಂತಹ ಮುಖಂಡರ ಕೊರತೆ ಕಾಣುತ್ತಿದೆ ಎಂದರು.

ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ಸುಬ್ಬಾರೆಡ್ಡಿ ಮಾತನಾಡಿ, ಐರೋಪ್ಯರು ಗಾಂಧಿ ಹೋರಾಟವನ್ನು ರಕ್ತ ರಹಿತ ಕ್ರಾಂತಿ ಎಂದು ಕರೆದಿದ್ದಾರೆ. ಮಾನವನ ಹಕ್ಕುಗಳು ಹೇಗಿರಬೇಕು ಎಂಬುದರ ಬಗ್ಗೆ ವಿಶ್ವಸಂಸ್ಥೆಯ ಕರಡು ಸಿದ್ಧಪಡಿಸುವಾಗ ಗಾಂಧೀಜಿ ಕರ್ತವ್ಯದ ಕುರಿತು ಒತ್ತುಕೊಟ್ಟು ಹೇಳಿಕೆ ನೀಡಿದ್ದರು. ಅವರ ಜೀವನ ಯುವ ವಕೀಲರಿಗೆ ಮಾದರಿ ಎಂದರು. ಈ ವೇಳೆ ಕಾನೂನು ಕಾಲೇಜು ವಿಶ್ವವಿದ್ಯಾಲಯದ ಡೀನ್ ಪ್ರೊ. ಸುರೇಶ್ ವಿ. ನಾಡಗೌಡರ್, ಲೇಖಕ ಎ.ಅಣ್ಣಾಮಲೈ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ ಸೇರಿದಂತೆ ಮತ್ತಿತರರು ಇದ್ದರು.

ವಿಜಯ ಕರ್ನಾಟಕ ಮಂಗಳವಾರ,8 ಆಗಸ್ಟ್ 2023

# ಗಾಂಧೀಜಿಯವರಂತಹ ಹೋರಾಟಗಾರರ ಕೊರತೆ ಇದೆ




■ **ವಿಕ ಸುದ್ದಿಲೋಕ** ಬೆಂಗಳೂರು

''ಗಾಂಧೀಜಿಯವರಂತಹ ಹೋರಾಟಗಾರರ ಕೊರತೆ ನಮ್ಮ ಸಮಾಜದಲ್ಲಿ ತೀವ್ರವಾಗಿ ಬಾಧಿಸುತ್ತಿದೆ,'' ಎಂದು ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ಎಚ್.ಎನ್. ನಾಗಮೋಹನ ದಾಸ್ ಬೇಸರ ವ್ಯಕ್ತಪಡಿಸಿದರು.

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎ.ಅಣ್ಣಾಮಲೈ ಅವರ 'ಗಾಂಧಿ ದಿ ಲಾಯರ್' ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಸೋಮವಾರ ಅವರು ಮಾತನಾಡಿದರು.

''ಗಾಂಧಿಯವರು ದೇಶದ ಸಾಮಾನ್ಯ ರೈತರಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆ ಅರ್ಥ ಮಾಡಿಸಿ, ಹೋರಾಟ ನಡೆಸಿದರು. ಆದರೆ, ಇಂದು ಅಂತಹ ಮುಖಂಡರ ಕೊರತೆ ಕಾಣುತ್ತಿದೆ. ಗಾಂಧೀಜಿಯವರ ಕುರಿತು ಮಾರುಕಟ್ಟೆಯಲ್ಲಿ ಹಲವು ಪುಸ್ತಕಗಳು, ಸಿನಿಮಾಗಳು ಬಂದಿವೆ. ಆದರೆ, ಗಾಂಧೀಜಿಯವರ ಬಗ್ಗೆ ಇನ್ನೂ ಅನೇಕ ಸೂಕ್ಷ್ಮಗಳ ಬಗ್ಗೆ ಬೆಳಕು ಚೆಲ್ಲುವ ಕಾರ್ಯವಾಗಬೇಕಿದೆ. ಈ ಕೃತಿ ಅಂತಹ ಕೆಲಸವನ್ನು ಮಾಡುತ್ತಿದೆ,'' ಎಂದರು.

''ಗಾಂಧಿಯವರ ಪ್ರತಿಯೊಂದು ಹೆಜ್ಜೆ, ಪ್ರತಿಯೊಂದು ಅನುಭವ ಇಂದಿಗೂ ಪ್ರಭಾವ ಬೀರುತ್ತದೆ. ಹೀಗಾಗಿ, ಅವರ ವಿಚಾರಗಳು ಎಂದೆಂದಿಗೂ ಪ್ರಸ್ತುತ. ಬ್ಯಾಂಕ್ ಬ್ಯಾಲೆನ್ಸ್, ಆಸ್ತಿ, ಚಿನ್ನಾಭರಣ ಸೇರಿ ಇತರೆ ಕಾರಣಕ್ಕಾಗಿ ಮೊಕದ್ದಮೆ ಹೂಡಿ ಕೋರ್ಟ್‌ನಲ್ಲಿ ಹೋರಾಡಿದ್ದನ್ನು ನೋಡಿದ್ದೇನೆ. ಆದರೆ ತಂದೆ- ತಾಯಿ ಬಿಟ್ಟುಹೋದ ಪುಸ್ತಕಗಳನ್ನು ತಮ್ಮದಾಗಿಸಿಕೊಳ್ಳಲು ಮೊಕದ್ದಮೆ ಹೂಡಲು ಮುಂದಾಗುವ ಕಾಲ ಬರಲಿ,'' ಎಂದು ಆಶಿಸಿದರು.

ಕಾರ್ಯಕ್ರಮದಲ್ಲಿ ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ರೆಡ್ಡಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಲೇಖಕ ಎ.ಅಣ್ಣಾಮಲೈ ಉಪಸ್ಥಿತರಿದ್ದರು.

# ಸಂಯುಕ್ತ ಕರ್ನಾಟಕ

ಮಂಗಳವಾರ 8 ಆಗಸ್ಟ್ 2023

ಬೆಂಗಳೂರು | BENGALURU




ಕರ್ನಾಟಕ ಸರ್ವೋದಯ ಮಂಡಲ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿ ಶೇಷಾದ್ರಿಪುರಂ ಪ್ರೌಢಶಾಲೆ ಸಭಾಂಗಣದಲ್ಲಿ 76ನೇ ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಏರ್ಪಡಿಸಿದ್ದ ಸ್ವತಂತ್ರ ಭಾರತದ ಇಂದಿನ ಸ್ಥಿತಿ–ಗತಿ ವಿಶೇಷ ಉಪನ್ಯಾಸವನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಡಾ.ವೂಡೇ ಪಿ. ಕಷ್ಣ ಉದ್ಘಾಟಿಸಿದರು. ಪ್ರಾಚಾರ್ಯ ಡಾ.ಗಣಪತಿ ಹೆಗಡೆ, ಕರ್ನಾಟಕ ಸರ್ವೋದಯ ಮಂಡಲ ಅಧ್ಯಕ್ಷ ಡಾ.ಎಚ್.ಎಸ್.ಸುರೇಶ್ ಹಾಗೂ ಇತರರು ಇದ್ದಾರೆ.


ಜನದನಿಯ ಸಾರಥಿ
ವಾರ್ತಾ ಭಾರತಿ

Aug 8, 2023


# ‘ಗಾಂಧಿ ದಿ ಲಾಯರ್’ ಕೃತಿ ಬಿಡುಗಡೆ

# ಇಂದು ಗಾಂಧೀಜಿಯವರಂತಹ ಹೋರಾಟಗಾರರ ಕೊರತೆ ಇದೆ

## ನಾಗಮೋಹನ್ ದಾಸ್

ಬೆಂಗಳೂರು, ಆ.7: ಗಾಂಧೀಜಿಯವರು ದೇಶದ ಸಾಮಾನ್ಯ ರೈತರಿಗೂ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರೋಧಿ ಧೋರಣೆ ಅರ್ಥ ಮಾಡಿಸಿ, ಹೋರಾಟವನ್ನು ನಡೆಸಿದ್ದರು. ಆದರೆ, ಇಂದು ಅಂತಹ ಮುಖಂಡರ ಕೊರತೆ ಕಾಣುತ್ತಿದೆ ಎಂದು ಹೈಕೋರ್ಟ್‌ನ ನಿವೃತ್ತ ನ್ಯಾ.ಎಚ್.ಎನ್.ನಾಗಮೋಹನ್ ದಾಸ್ ಬೇಸರ ವ್ಯಕ್ತಪಡಿಸಿದ್ದಾರೆ.

ಸೋಮವಾರ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಎ.ಅಣ್ಣಾಮಲೈರ ‘ಗಾಂಧಿ ದಿ ಲಾಯರ್’ ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಮಾರುಕಟ್ಟೆಯಲ್ಲಿ ಗಾಂಧೀಜಿಯ ಬಗ್ಗೆ ಪುಸ್ತಕ, ಸಿನೆಮಾ ಬಂದಿದೆ. ಆದರೆ, ಗಾಂಧೀಜಿಯ ಕುರಿತ ಇನ್ನೂ ಅನೇಕ ಸೂಕ್ಷ್ಮಗಳ ಬಗ್ಗೆ ಬೆಳಕು ಚೆಲ್ಲಬೇಕಿದೆ. ಈ ಕೃತಿ ಅಂತಹ ಕೆಲಸವನ್ನು ಮಾಡುತ್ತಿದೆ




ಎಂದು ತಿಳಿಸಿದರು.

ಗಾಂಧಿಯವರ ಪ್ರತಿಯೊಂದು ಹೆಜ್ಜೆ, ಪ್ರತಿಯೊಂದು ಅನುಭವ ಇಂದಿಗೂ ಪ್ರಭಾವ ಬೀರುತ್ತದೆ. ಹೀಗಾಗಿ ಅವರ ವಿಚಾರಗಳು ಎಂದೆಂದಿಗೂ ಪ್ರಸ್ತುತವಾಗಿದೆ ಎಂದು ಹೇಳಿದರು.

ಈ ಸಂದರ್ಭದಲ್ಲಿ ಬೆಂಗಳೂರು ವಕೀಲರ ಸಂಘದ ಅಧ್ಯಕ್ಷ ವಿವೇಕ್ ರೆಡ್ಡಿ, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಲೇಖಕ ಎ.ಅಣ್ಣಾಮಲೈ, ಮತ್ತಿತರ ಗಣ್ಯರು ಉಪಸ್ಥಿತರಿದ್ದರು.

# ಈ ಸಂಜೆ

Aug 7, 2023




ಕರ್ನಾಟಕ ಸರ್ವೋದಯ ಮಂಡಲ ಬೆಂಗಳೂರು ನಗರ ಜಿಲ್ಲಾ ಘಟಕ ಮತ್ತು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಯುಕ್ತಾಶ್ರಯದಲ್ಲಿ 76ನೇ ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಶೇಷಾದ್ರಿಪುರಂ ಪ್ರೌಢಶಾಲಾ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸ್ವತಂತ್ರ ಭಾರತದ ಇಂದಿನ ಸ್ಥಿತಿ-ಗತಿ ಕುರಿತ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ನಾಡೋಜ ಡಾ. ವೂಡೇ ಪಿ.ಕೃಷ್ಣ, ಎಂಎಲ್ಎ ಕಾಲೇಜಿನ ಪ್ರಾಂಶುಪಾಲ ಡಾ.ಗಣಪತಿ ಹೆಗಡೆ, ಸರ್ವೋದಯ ಮಂಡಲದ ಅಧ್ಯಕ್ಷ ಡಾ.ಎಚ್.ಎಸ್. ಸುರೇಶ್, ಕಾರ್ಯದರ್ಶಿ ಡಾ.ಬಿ. ದೊಡ್ಡಯ್ಯ, ಡಾ.ಗುರುರಾಜ ಪೋಶೆಟ್ಟಿಹಳ್ಳಿ ಮತ್ತಿತರರಿದ್ದರು.

ಸಂಜೆವಾಣಿ

Sunday 06 August 2023



ನಗರದ ಶೇಷಾದ್ರಿಪುರ ಸಂಜೆ ಪದವಿ ಪೂರ್ವ ಕಾಲೇಜಿನ ಪ್ರಥಮ ಪಿಯು ತರಗತಿಗಳನ್ನು ಡಾ.ಟಿ.ಹೆಚ್. ಆಂಜನಪ್ಪರವರು ಉದ್ಘಾಟಿಸಿದರು. ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ, ಸದಸ್ಯರಾದ ಅಶೋಕ್, ಲೋಕನಾಥ್, ಪ್ರಾಂಶುಪಾಲೆ ಆರ್. ಮಹಾಲಕ್ಷ್ಮಿ ಮತ್ತಿತರರು ಇದ್ದಾರೆ.

ಪ್ರಜಾ  ಪ್ರಗತಿ

Aug 4, 2023

# ನಾಡೋಜ ಡಾ.ವೂಡೇ.ಪಿ.ಕೃಷ್ಣ, ಪ್ರೊ.ಮಲ್ಲೇಪುರಂ ಸೇರಿ 16 ಮಂದಿಗೆ ಪರಿಮಳ ಪ್ರಶಸ್ತಿ



ಬೆಂಗಳೂರು : ಪರಿಮಳ ಗೆಳೆಯರ ಬಳಗ ನೀಡುವ ಪ್ರತಿಷ್ಠಿತ ಪರಿಮಳ ಪ್ರಶಸ್ತಿಗೆ ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌ.ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಸೇರಿದಂತೆ 16 ಮಂದಿ ಭಾಜನರಾಗಿದ್ದಾರೆ.

ಇವರೊಂದಿಗೆ ಪ್ರಜಾವಾಣಿ ಕಾರ್ಯನಿರ್ವಾಹಕ ಸಂಪಾದಕ ರವೀಂದ್ರಭಟ್ಟ, ನ್ಯಾಯಾಂಗ ಕ್ಷೇತ್ರದಿಂದ ಪಿ.ಎಸ್.ದಿನೇಶ್‌ಕುಮಾರ್, ವೇದಾಂತ ಕ್ಷೇತ್ರದಿಂದ ಶ್ರೀಹರಿ ವಾಳ್ವೇಕರ್ ಆಚಾರ್ಯ, ದಾಸಸಾಹಿತ್ಯ ಸಂಶೋಧನೆಗೆ ಸುಳಾದಿ ಹನುಮೇಶಾಚಾರ್ಯ, ಕನ್ನಡ ಪರಿಚಾರಕ ವಿಭಾಗದಿಂದ ಹಿರೇಮಗಳೂರು ಕಣ್ಣನ್, ವಿಜ್ಞಾನ ಕ್ಷೇತ್ರದಿಂದ ವೈ.ಎಲ್.ಮಧುಸೂದನ್, ಸುಗಮ ಸಂಗೀತ ಕ್ಷೇತ್ರದಿಂದ ಪುತ್ತೂರು ನರಸಿಂಹನಾಯಕ್, ವೇಣುವಾದನಕ್ಕೆ ಪ್ರವೀಣ್ ಗೋಡ್ಖಿಂಡಿ, ಮೃದಂಗ ವಿ.ಕೃಷ್ಣ, ವೈದ್ಯಕೀಯ ಡಾ.ಎಚ್.ಎನ್.ಸುಬ್ರಹ್ಮಣ್ಯ, ಡಾ.ಗಿರಿಧರ ಕಜೆ ಇತರರು ಸಹ ಪ್ರಶಸ್ತಿಗೆ ಭಾಜನರಾಗಿದ್ದು, ಆ.20ರಂದು ಸಂಜೆ 5.45ಕ್ಕೆ ಕೆ.ಆರ್.ರಸ್ತೆಯ ಗಾಯನ ಸಮಾಜದ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ನಡೆಯಲಿದೆ.

ಉದಯಕಾಲ

Aug 4, 2023




ಯಲಹಂಕದ ಶೇಷಾದ್ರಿಪುರಂ ಇನ್ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್ ವತಿಯಿಂದ ಇತ್ತೀಚೆಗೆ ಆಯೋಜಿಸಿದ್ದ ನಿರ್ವಹಣೆ ಮತ್ತು ಸಾಂಸ್ಕೃತಿಕ ಹಬ್ಬ 'ಆಕೃತಿ 2023 ' ಕಾರ್ಯಕ್ರಮವನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ನಿರ್ದೇಶಕ ಡಾ.ವಿನಯ್ ಎಸ್, ಕನ್ನಡ ಚಲನಚಿತ್ರ ನಿರ್ದೇಶಕ ಶಶಾಂಕ್ ಸೋಗಲ್, ಚಲನಚಿತ್ರ ಛಾಯಾಗ್ರಾಹಕ ಮಹೇನ್‌ಸಿಂಹ, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್.ಎನ್. ವೆಂಕಟೇಶ್ ಸೇರಿದಂತೆ ಇನ್ನಿತರ ಗಣ್ಯರಿದ್ದರು.

# ಮಲ್ಲೇಪುರಂ, ರವೀಂದ್ರ ಭಟ್ಟ ಸೇರಿ 16 ಮಂದಿಗೆ 'ಪರಿಮಳ ಪ್ರಶಸ್ತಿ'

ಪ್ರಜಾವಾಣಿ ವಾರ್ತೆ

Published 3 ಆಗಸ್ಟ್ 2023, 6:00 IST
Last Updated 3 ಆಗಸ್ಟ್ 2023, 6:00 IST

ಅಕ್ಷರ ಗಾತ್ರ ಅ ಅ ಅ

**ಬೆಂಗಳೂರು:** ಪರಿಮಳ ಗೆಳೆಯರ ಬಳಗ ನೀಡುವ 'ಪರಿಮಳ ಪ್ರಶಸ್ತಿ'ಗೆ ಬಹುಭಾಷಾ ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ್, 'ಪ್ರಜಾವಾಣಿ' ಕಾರ್ಯನಿರ್ವಾಹಕ ಸಂಪಾದಕ ರವೀಂದ್ರ ಭಟ್ಟ ಸೇರಿ 16 ಮಂದಿ ಆಯ್ಕೆಯಾಗಿದ್ದಾರೆ.

ನ್ಯಾಯಾಂಗ ಕ್ಷೇತ್ರದಿಂದ ಪಿ.ಎಸ್. ದಿನೇಶ್ ಕುಮಾರ್, ಶಿಕ್ಷಣ ಕ್ಷೇತ್ರದಿಂದ ವೂಡೇ ಪಿ. ಕೃಷ್ಣ, ಸಾಹಿತ್ಯ ಕ್ಷೇತ್ರದಿಂದ ಮಲ್ಲೇಪುರಂ ಜಿ. ವೆಂಕಟೇಶ್, ಪತ್ರಿಕೋದ್ಯಮ ಕ್ಷೇತ್ರದಿಂದ ರವೀಂದ್ರ ಭಟ್ಟ, ವೇದಾಂತ ಕ್ಷೇತ್ರದಿಂದ ಶ್ರೀಹರಿ ವಾಳ್ವೇಕರ್ ಆಚಾರ್ಯ, ದಾಸ ಸಾಹಿತ್ಯ ಸಂಶೋಧನೆಗೆ ಸುಳಾದಿ ಹನುಮೇಶಾಚಾರ್ಯ, ತಿಳಿಹಾಸ್ಯ ಹಾಗೂ ಕನ್ನಡ ಪರಿಚಾರಿಕೆಗೆ ಹಿರೇಮಗಳೂರು ಕಣ್ಣನ್ ಆಯ್ಕೆಯಾಗಿದ್ದಾರೆ.

ವಿಜ್ಞಾನ ಕ್ಷೇತ್ರದಿಂದ ವೈ.ಎಲ್. ಮಧುಸೂದನ್, ಸುಗಮ ಸಂಗೀತ ಕ್ಷೇತ್ರದಿಂದ ಪುತ್ತೂರು ನರಸಿಂಹ ನಾಯಕ್, ವೇಣುವಾದನಕ್ಕೆ ಪ್ರವೀಣ್ ಗೋಡ್ಖಿಂಡಿ, ಮೃದಂಗ ವಾದನಕ್ಕೆ ವಿ.ಕೃಷ್ಣ, ವೈದ್ಯಕೀಯ ಕ್ಷೇತ್ರಕ್ಕೆ ಡಾ.ಎಚ್.ಎನ್. ಸುಬ್ರಹ್ಮಣ್ಯ, ಡಾ.ಬಿ. ರವಿಶಂಕರ್ ಭಟ್, ಡಾ. ಗಿರಿಧರ ಕಜೆ, ಯೋಗ ಕ್ಷೇತ್ರಕ್ಕೆ ಎಚ್.ಎನ್. ಅರುಣ್ ಹಾಗೂ ಸಮಾಜ ಸೇವೆಗೆ ಶ್ರೀಪಾದರಾವ್ ದೇವನಹಳ್ಳಿ ಆಯ್ಕೆಯಾಗಿದ್ದಾರೆ.

48ನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ಸಾಹಿತ್ಯ, ಶಿಕ್ಷಣ, ನ್ಯಾಯಾಂಗ, ಪತ್ರಿಕೋದ್ಯಮ ಮೊದಲಾದ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗೈದ ಸಾಧಕರಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಇದೇ 20ರಂದು ಸಂಜೆ 5.45ಕ್ಕೆ ಇಲ್ಲಿನ ಕೆ.ಆರ್. ರಸ್ತೆಯಲ್ಲಿರುವ ಗಾಯನ ಸಮಾಜದ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ ಎಂದು ಬಳಗ ತಿಳಿಸಿದೆ.

ಈ ವೇಳೆ ದಾಸ ಸಾಹಿತ್ಯ ಸಂಶೋಧಕ, ಲೇಖಕ ಎಸ್. ಜಯಸಿಂಹ ಅವರು ರಚಿಸಿರುವ 'ಶ್ರೀಸುಮತೀಂದ್ರ ದರ್ಶನ' ಎಂಬ ಸಂಶೋಧನಾತ್ಮಕ ಕೃತಿಯನ್ನು ಸುವಿದ್ಯೇಂದ್ರತೀರ್ಥ ಸ್ವಾಮೀಜಿ ಬಿಡುಗಡೆ ಮಾಡುತ್ತಾರೆ. ಶ್ರೀಪಾದರಾಜ ಮಠಾಧೀಶ ಸುಜಯನಿಧಿತೀರ್ಥ ಸ್ವಾಮೀಜಿ ದಿವ್ಯ ಸಾನ್ನಿಧ್ಯ ವಹಿಸುತ್ತಾರೆ. ಪುತ್ತೂರು ನರಸಿಂಹ ನಾಯಕ್ ಮತ್ತು ವೃಂದದವರಿಂದ 'ಹರಿದಾಸ ವಾಣಿ' ಕಾರ್ಯಕ್ರಮವೂ ನಡೆಯಲಿದೆ ಎಂದು ಪ್ರಕಟಣೆಯಲ್ಲಿ ಹೇಳಿದೆ.

Bengaluru

ಪ್ರಜಾ ಪ್ರಗತಿ ತುಮಕೂರು ಆಗಸ್ಟ್ 10, 2023 ಗುರುವಾರ

# ದೇಶದ ಕೀರ್ತಿಗಾಗಿ ಯುವಕರು ಜಾಗೃತರಾಗಿರಿ

## ಕ್ವಿಟ್ ಇಂಡಿಯಾ ಚಳವಳಿಯ ವರ್ಷಾಚರಣೆ: ವೂಡೆ.ಪಿ.ಕೃಷ್ಣ ಇತರರು ಭಾಗಿ

■ ಪ್ರಜಾಪ್ರಗತಿ.ಕಾಂ

ತುಮಕೂರು: ಜನ್ಮ ನೀಡಿದ ತಾಯಿ ಮತ್ತು ಹುಟ್ಟಿದ ಮಣ್ಣನ್ನು ಎಂದಿಗೂ ಪೂಜ್ಯಭಾವದಿಂದ ಕಾಣಬೇಕು. ಯುವಕರು ಜಾಗೃತರಾಗಿದ್ದರೆ ದೇಶಕ್ಕೆ ಕೀರ್ತಿ ಸಿಗುತ್ತದೆ. ಯುವ ಸಮುದಾಯ ಜಾಗೃತರಾಗಿ ದೇಶ ಕಟ್ಟುವ ಮನಸ್ಥಿತಿಯನ್ನು ಬೆಳೆಸಿಕೊಳ್ಳಬೇಕೆಂದು ಭಾರತ ಸೇವಾದಳದ ಖಜಾಂಚಿ ಹೆಚ್.ಎಸ್. ಕಾಶಿನಕುಂಟೆ ತಿಳಿಸಿದರು.

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಭಾರತ ಸೇವಾದಳ, ಅಭಿಮಾನಿ ಬಳಗ ಬೆಂಗಳೂರು, ಕಾಲೇಜಿನ ಗಾಂಧಿ ಅಧ್ಯಯನ ಕೇಂದ್ರ ಮತ್ತು ಎನ್ ಎಸ್ ಎಸ್ ಸಂಯುಕ್ತ ಆಶ್ರಯದಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ 81 ನೇ ವರ್ಷಾಚರಣೆಯನ್ನು ಕ್ರೀಡಾ ಭಾರತಿ ಮೈದಾನದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕ್ರೀಡಾ ಭಾರತಿ ಮೈದಾನದಲ್ಲಿ ಧ್ವಜವಂದನೆ ಸಲ್ಲಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಲಾಯಿತು.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ವಿಶ್ರಾಂತ ಪ್ರಾಂಶುಪಾಲ ಹಾಗೂ ಲೇಖಕ ಎಂ.ಹೆಚ್. ನಾಗರಾಜು ಆಗಮಿಸಿ ಇಡೀ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಸಂಕ್ಷಿಪ್ತವಾಗಿ ಮನ ಮುಟ್ಟುವಂತೆ ವಿವರಿಸಿದರು.

ನಮ್ಮ ದೇಶದ ಎರಡು ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತದಂತೆ, ಭಾರತ ಸ್ವಾತಂತ್ರ್ಯ ಚಳುವಳಿಯ ಚರಿತ್ರೆಯು ಮೂರನೇ ಮಹಾಕಾವ್ಯ ಇದ್ದಂತೆ. ಅದರಲ್ಲಿ ಕ್ವಿಟ್ ಇಂಡಿಯ ಚಳುವಳಿಯು ಒಂದು ಭಾಗವಾಗಿದೆ. ಬ್ರಿಟಿಷರ ವಿರುದ್ಧದ ಆರಂಭದ ಯುದ್ಧಗಳು, ಹಿಂಸಾತ್ಮಕವಾಗಿದ್ದವು. ಆದರೆ ನಂತರದ ದಿನಗಳಲ್ಲಿ ವಿಶೇಷವಾಗಿ ಗಾಂಧಿಯುಗದಲ್ಲಿ ಅಹಿಂಸಾತ್ಮಕ ಹೋರಾಟಗಳು ನಡೆದವು. 1860 ರಿಂದ 1885 ರ ವರೆಗಿನ 25 ವರ್ಷಗಳ ಕಾಲವು ಭಾರತೀಯರಲ್ಲಿ ರಾಷ್ಟ್ರೀಯತೆಯನ್ನು ಬಿತ್ತನೆ ಮಾಡಿದ ಕಾಲಘಟ್ಟವಾಗಿದೆ. ಕ್ವಿಟ್ ಇಂಡಿಯ ಚಳುವಳಿಯನ್ನು ಕೆಲವು ಕಾಲ ಯಾವುದೇ ನಾಯಕರಿಲ್ಲದೆ ಜನಸಾಮಾನ್ಯರೇ ಮುಂದುವರೆಸಿಕೊಂಡು ಹೋದದ್ದರಿಂದ ಅದು. ಶ್ರೀಸಾಮಾನ್ಯರ ಚಳುವಳಿಯಾಗಿತ್ತು ಮತ್ತು ದೇಶವ್ಯಾಪ್ತಿ ಹಬ್ಬಿತು ಎಂದು ಹಲವಾರು ವಿಷಯಗಳನ್ನು ಹಂಚಿಕೊಂಡರು.



ಇಂದಿನ ವಿದ್ಯಾರ್ಥಿಗಳು ತರಗತಿ ಪಠ್ಯಕ್ರಮದ ಜೊತೆಯಲ್ಲಿ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ತಿಳಿದುಕೊಳ್ಳುವುದು ಅತ್ಯವಶ್ಯಕ ವಾಗಿದೆ. ಅಂದು ಭಾರತೀಯರ ಮೇಲೆ ಬ್ರಿಟಿಷರ ವಿರುದ್ಧ ಚಲೇಜಾವ್ ಚಳುವಳಿ ನಡೆದಿತ್ತು. ಶ್ರೀಸಾಮಾನ್ಯರ ತೆರಿಗೆ ಹಣವನ್ನು ದುರುಪಯೋಗಪಡಿಸಿಕೊಂಡು ಭ್ರಷ್ಟಾಚಾರದಲ್ಲಿ ನಿರತರಾಗಿರುವ ರಾಜರಾರಣಿಗಳ ವಿರುದ್ಧ ಚಲೇಜಾವ್ ಚಳುವಳಿ ನಡೆಸಬೇಕಾಗಿದೆ. ಗಾಂಧೀಜಿ ಯವರು ಅನ್ಯಾಯ ಕಂಡೊಡನೆ ಪ್ರತಿಭಟನೆ ಮಾಡುತ್ತಿದ್ದರು. ಆದರೆ ನಾವೆಲ್ಲ ಇಂದು ಅನ್ಯಾಯವನ್ನು ಕಂಡರೂ ಕೂಡ ಪ್ರತಿಭಟಿಸಲಾರದಿರುವ ಮಲಗಿರುವ ಗಾಂಧಿಗಳಾಗಿದ್ದೇವೆ. ಗಾಂಧೀಜಿಯವರಂತೆ ಸತ್ಯ ಮತ್ತು ಅಹಿಂಸೆಯ ಮಾರ್ಗದಲ್ಲಿ ಸಾಗಿ ಆದರ್ಶ ಮತ್ತು ಸದೃಢವಾದ ದೇಶ ಕಟ್ಟಬೇಕು ಎಂದು ಹೇಳಿದರು.

-ಎಂ.ಬಸವಯ್ಯ, ಬಾಪೂಜಿ ವಿದ್ಯಾಸಂಸ್ಥೆಯ ಸಂಸ್ಥಾಪಕ

ನಂತರ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ.ವೂಡೇ ಪಿ.ಕೃಷ್ಣರವರು ಮಾತನಾಡುತ್ತ, ಸ್ವಾತಂತ್ರ್ಯ ಹೋರಾಟದಂತಹ ಅರ್ಥಪೂರ್ಣವಾದ ಕಾರ್ಯಕ್ರಮಗಳನ್ನು ಆಯೋಜಿಸಲು ಸಂಸ್ಥೆಯ ಸದಾ ಸಿದ್ಧವಾಗಿರುತ್ತದೆ. ಎಂದು ಹೇಳಿದರು. ಮುಂದುವರೆದು ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆಯ ಮೂಲಕ ಬ್ರಿಟಿಷರನ್ನು ನಡುಗಿಸಿದ್ದರು. ಈಗಿನ ಪೀಳಿಗೆಯವರು ಅಂತಹ ಗಾಂಧಿ ತತ್ವಗಳನ್ನು ಅಳವಡಿಸಿಕೊಂಡು ರಾಷ್ಟ್ರೀಯತೆಯ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂದು ಕರೆ ನೀಡಿದರು.

ಈ ಕಾರ್ಯಕ್ರಮದಲ್ಲಿ ಭಾರತ ಸೇವಾದಳ ಅಭಿಮಾನಿ ಬಳಗದ ಪದಾಧಿಕಾರಿಗಳು, ಕಾಲೇಜಿನ ಆಡಳಿತ ಮಂಡಳಿಯ ಅಧ್ಯಕ್ಷ ಅಶೋಕ್, ಪ್ರಾಂಶುಪಾಲ ಡಾ. ಜಗದೀಶ ಜೆ.ಟಿ., ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಪ್ರೊ. ನಿವೇದಿತಾ, ಎನ್‌ಎಸ್‌ಎಸ್ ಸಂಚಾಲಕ ಪ್ರೊ. ಮನೋಹರ್ , ಕಾಲೇಜಿನ ಭೊದಕ ಸಿಬ್ಬಂಧಿ ಮತ್ತು ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.

ಸಂಯುಕ್ತ ಕರ್ನಾಟಕ
02 ಮಂಗಳವಾರ 1 ಆಗಸ್ಟ್ 2023
ಬೆಂಗಳೂರು | BENGALURU

# ಗೊರೂರು ಅನುಭವವೇ ಮಾರ್ಗದರ್ಶನ



ಗಾಂಧಿ ಭವನದಲ್ಲಿ ಆಯೋಜಿಸಿದ್ದ ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ 119ನೇ ಜನ್ಮ ದಿನಾಚರಣೆಯಲ್ಲಿ ಸಾಹಿತಿ ಡಾ.ಕಮಲ ನರಸಿಂಹ ಅವರಿಗೆ ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷೆ ಡಾ.ಎಸ್.ಜಿ. ಸುಶೀಲಮ್ಮ ಗೊರೂರು ಪ್ರಶಸ್ತಿ ನೀಡಿ ಸನ್ಮಾನಿಸಿದರು.

ಸಂ.ಕ.ಸಮಾಚಾರ, ಬೆಂಗಳೂರು

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಅನುಭವವೇ ಒಂದು ದೊಡ್ಡ ನಿಘಂಟು ಎಂದು ನಾಡೋಜ ಹಂಪ ನಾಗರಾಜಯ್ಯ ಹೇಳಿದ್ದರು.

ಗಾಂಧಿಭವನದಲ್ಲಿ ಆಯೋಜಿಸಿದ್ದ ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ 119ನೇ ಜನ್ಮ ದಿನಾಚರಣೆಯಲ್ಲಿ ಗೊರೂರಿನ ಸತ್ಯಾನ್ವೇಷಕ ರಾಮಸ್ವಾಮಿ ಅಯ್ಯಂಗಾರ್ ಅವರ ಕೃತಿ ಲೋಕಾರ್ಪಣೆಗೊಳಿಸಿ ಮಾತನಾಡಿದ ಅವರು, ನಾನು ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿದ್ದಾಗ ಗೊರೂರು ಅವರ ಜೊತೆ ರಾಯಚೂರು, ಕಲಬುರಗಿ ಸೇರಿ 20 ಜಿಲ್ಲೆಗಳಿಗೆ ಪ್ರವಾಸಕ್ಕೆ ತೆರಳಿದಾಗ ಪ್ರವಾಸದ ಸಂದರ್ಭದಲ್ಲಿ ಸ್ವ-ಅನುಭವನ್ನು ಹಂಚಿಕೊಂಡಿದ್ದ ಅವರ ಅನುಭವಗಳ ವಿಚಾರಗಳು ನನಗೆ ಮಾರ್ಗದರ್ಶನವಾಗಿವೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ ಮಾತನಾಡಿ, ಗೊರೂರು ಅವರ ಕೃತಿ, ಸಾಹಿತ್ಯಗಳು ಬದುಕಿನ ಸರಳ-ಸ್ವಭಾವ ತಿಳಿಸಿಕೊಡುತ್ತವೆ ಹಾಗೂ ಯುವಪೀಳಿಗೆ ಗೊರೂರು ಸಾಹಿತ್ಯ ಪುಸ್ತಕ ಲೇಖನಗಳನ್ನು ಓದುವ ಮೂಲಕ ಅವರ ತತ್ವಾದರ್ಶ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದರು.

ಸಾಹಿತಿಗಳಾದ ಡಾ.ಕಮಲನರಸಿಂಹ ಅವರಿಗೆ ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷೆ ಡಾ.ಎಸ್.ಜಿ. ಸುಶೀಲಮ್ಮ ಗೊರೂರು ಪ್ರಶಸ್ತಿ ನೀಡಿ ಸನ್ಮಾನಿಸಿದರು. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕೋಶಾಧ್ಯಕ್ಷ ಎಚ್.ಬಿ.ದಿನೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಪುತ್ರಿ ವಸಂತಿಮೂರ್ತಿ ಗೊರೂರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯ ಎನ್.ಆರ್. ವಿಶುಕುಮಾರ್ ಮತ್ತಿತರರಿದ್ದರು.

ಉದಯವಾಣಿ

ಭಾನುವಾರ, ಜುಲೈ 30, 2023

# ದೊಡ್ಡರಂಗೇಗೌಡರಿಗೆ ಇಂಡಿಯಾ ಬುಕ್ ಆಫ್ ರೆಕಾರ್ಡ್ಸ್ ಗೌರವ



ಬೆಂಗಳೂರು: ಭಾವ ಮತ್ತು ಭಾವನೆಯ ವಿಕಾಸವನ್ನುಂಟು ಮಾಡುವಲ್ಲಿ ಪ್ರಗಾಥದ ಮೂಲಕ ಅನೇಕ ಕವಿಗಳು ಯಶಸ್ವಿಯಾಗಿದ್ದಾರೆ ಎಂದು ಸಾಹಿತಿ ಡಾ. ದೊಡ್ಡರಂಗೇಗೌಡರು ಹೇಳಿದರು.

ನಗರದ ಎನ್.ಆರ್ ಕಾಲೋನಿಯ ಬಿ.ಎಂ. ಶ್ರೀ ಪ್ರತಿಷ್ಠಾನದ ಸಭಾಂಗಣದಲ್ಲಿ ಶನಿವಾರ ಕಾವ್ಯ ಸ್ಪಂದನ ಪಬ್ಲಿಕೇಷನ್ಸ್ ವತಿಯಿಂದ ಇಂಡಿಯಾ ಬುಕ್ ಆಫ್ ರೆಕಾರ್ಡ್ಸ್ ದಾಖಲೆ ಪತ್ರ ಸ್ವೀಕರಿಸಿ ಮಾತನಾಡಿದರು.

ನಾನು 25 ಸಾಲಿನ ಪ್ರಗಾಥ ಬರೆದಿದ್ದೇನೆ. ಇದು ಭಾವಗೀತೆಯಪ್ರಕಾರಪ್ರಾಸಬದ್ಧತೆಯನ್ನೊಳಗೊಂಡಿದೆ. ಕಥೆ ಕಾದಂಬರಿ ಯಾರು ಬೇಕಾದರೂ ಬರೆಯುತ್ತಾರೆ. ಆದರೆ, ಪ್ರಗಾಥ ಕಾವ್ಯ ಬರೆಯುವುದು ಕಷ್ಟ ಛಂದಸ್ಸು ಮತ್ತು ಸಂಗೀತ ಪ್ರಗಾಥಕ್ಕೆ ಎರಡು ದಡವಿದ್ದಂತೆ. ಭಾವನಾತ್ಮಕ ಬರವಣಿಗೆ ಇರುವವರು ಪ್ರಗಾಥದ ಕಡೆ ವಾಲುತ್ತಾರೆಂದು ನುಡಿದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ ಪ್ರಸಿದ್ಧ ಆಂಗ್ಲ ಕಾದಂಬರಿಗಾರ್ತಿ ಸಹನಾ, ಜನಪ್ರಿಯ ಮಹಿಳಾ ಸಂರಕ್ಷಣಾ ಸಮಿತಿ ಅಧ್ಯಕ್ಷೆ ಸುಮಾಲಿನಿ ರಾಮಾಚಾರಿ, ಮಾಜಿ ಶಾಸಕ ವೀರಯ್ಯ, ನಟ ಸುಚೇಂದ್ರ ಪ್ರಸಾದ್, ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ. ಶಾಂತರಾಜು ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ ಭಾನುವಾರ ● ಜುಲೈ 30, 2023






ಕಾವ್ಯಸ್ಪಂದನ ಪಬ್ಲಿಕೇಷನ್ಸ್ ನಗರದಲ್ಲಿ ಶನಿವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕವಿ ದೊಡ್ಡರಂಗೇಗೌಡ ಅವರಿಗೆ 'ಇಂಡಿಯನ್ ಬುಕ್ ಆಫ್ ರೆಕಾರ್ಡ್ಸ್' ದಾಖಲೆ ಪತ್ರ ಪ್ರದಾನ ಮಾಡಲಾಯಿತು. ಅವರ 'ನೀಳ್ಗವಿತೆಗಳು' ಕೃತಿ ಇಂಡಿಯನ್ ಬುಕ್ ಆಫ್ ರೆಕಾರ್ಡ್ಸ್‌ನಲ್ಲಿ ಸ್ಥಾನ ಪಡೆದುಕೊಂಡಿದೆ. (ಎಡದಿಂದ) ಸಂಶೋಧಕ ಸುಬ್ರಮಣಿ ಕೆ., ಕಾದಂಬರಿಗಾರ್ತಿ ಸಹನಾ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕಲಾವಿದ ಸುಚೇಂದ್ರ ಪ್ರಸಾದ್ ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ಇದ್ದರು

ಪ್ರಜಾವಾಣಿ
ಭಾನುವಾರ ● ಜುಲೈ 30, 2023




ಶೇಷಾದ್ರಿಪುರಂ ಕಾಲೇಜಿನಲ್ಲಿ ಸಾಹಿತ್ಯ ಸರಸ್ವತಿ ಕಲಾವೇದಿಕೆಯ ಪ್ರಥಮ ವಾರ್ಷಿಕೋತ್ಸವದ ಕಾರ್ಯಕ್ರಮದಲ್ಲಿ ಶಾಂತಿವಾಸು ಅವರ 'ಬಾಲ್ಯ ಕಾಣಿಸದ ಕನ್ನಡಿ' ಕೃತಿಯನ್ನು ಲೇಖಕ ಎಸ್.ಜಿ. ಸಿದ್ದರಾಮಯ್ಯ ಬಿಡುಗಡೆಮಾಡಿದರು. ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ, ಹೋರಾಟಗಾರರಾದ ಸಿ.ಕೆ. ರಾಮೇಗೌಡ, ಕೆ.ಎಂ. ರೇವಣ್ಣ, ಕನ್ನಡಪರ ಹೋರಾಟಗಾರ ಜಿ. ಪುರುಷೋತ್ತಮ್, ಲೇಖಕಿ ಶಾಂತಿವಾಸು ಇದ್ದರು.

ಈ ಸಂಜೆ

Jul 26, 2023



ಶೇಷಾದ್ರಿಪುರಂ ಸಂಜೆ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಸಂಧ್ಯಾ ಕಲರವ ಹಾಗೂ ವಾರ್ಷಿಕೋತ್ಸವ ಕಾರ್ಯಕ್ರಮವನ್ನು ನಟ ವಿಜಯರಾಘವೇಂದ್ರ ಅವರು ಉದ್ಘಾಟಿಸಿದರು. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷರಾದ ಎನ್.ಆರ್. ಪಂಡಿತಾರಾಧ್ಯ, ನಾಡೋಜ ಡಾ. ವೂಡೇ ಪಿ.ಕೃಷ್ಣ, ಉಪಾಧ್ಯಕ್ಷ ಹಂಪಾರಪ್ಪ, ಪ್ರಾಂಶುಪಾಲ ಸತೀಶ್, ಕೃಷ್ಣಸ್ವಾಮಿ, ರಾಘವೇಂದ್ರ ಶೆಟ್ಟಿ, ನಟಿ ಚಂದನ ಅನಂತಕೃಷ್ಣ ಮತ್ತಿತರರಿದ್ದರು.

ಕನ್ನಡಪ್ರಭ ಮಂಗಳವಾರ 25.07.2023

# ಬೆಂಗಳೂರು ಅಂದು-ಇಂದು ಕೃತಿ ಬಿಡುಗಡೆ

## ಸಪ್ನ ಬುಕ್ ಹೌಸ್ ಪ್ರಕಟಿಸಿದ ಪುಸ್ತಕ | ಡಿಸಿಎಂ ಡಿಕೆಶಿ ಲೋಕಾರ್ಪಣೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಸಪ್ನ ಬುಕ್‌ಹೌಸ್ ಪ್ರಕಟಿಸಿರುವ 'ಬೆಂಗಳೂರು ಅಂದು-ಇಂದು' ಕೃತಿಯನ್ನು ಬೆಂಗಳೂರಿನಲ್ಲಿ ಉಪ ಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ಅವರು ಲೋಕಾರ್ಪಣೆ ಮಾಡಿದರು.

ಈ ಸಂದರ್ಭದಲ್ಲಿ ಹಿರಿಯ ಸಂಶೋಧಕ ಡಾ| ಹಂಪ ನಾಗರಾಜಯ್ಯ, ಸಾಹಿತಿಗಳಾದ ಡಾ| ಕಮಲಾ ಹಂಪನಾ, ರಾ.ನಂ.ಚಂದ್ರ ಶೇಖರ, ಜೋಗಿ, ವೂಡೇ ಪಿ.ಕೃಷ್ಣ, ಡಾ| ಡಿ.ವಿ.ಗುರುಪ್ರಸಾದ್, ಸಪ್ನ ಬುಕ್‌ಹೌಸ್‌ನ ನಿತಿನ್ ಶಾ, ದೊಡ್ಡೇಗೌಡ, ವ.ಚ.ಚನ್ನೇಗೌಡ, ಸ್ಮಿತಾ ರೆಡ್ಡಿ, ರಮೇಶ್‌ಬಾಬು, ರಾಜೇಶ್ ಶೆಟ್ಟಿ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

'ಬೆಂಗಳೂರು ಅಂದು-ಇಂದು' ಕೃತಿಯೂ ಬೆಂಗಳೂರು ಬೆಳೆದ ಪಥ, ಇತಿಹಾಸದ ಹೆಜ್ಜೆಗಳು, ಪ್ರೇಕ್ಷಣೀಯ ಸ್ಥಳಗಳು, ಬೆಂಗಳೂರಿನ ಕಲೆ-ಸಾಹಿತ್ಯ, ಬೆಂಗಳೂರು ಅಂಕಿ ಅಂಶ, ಬೆಂಗಳೂರು ನೀರು ಸರಬರಾಜು ಎಂಬ ಆರು ಅಧ್ಯಾಯಗಳಲ್ಲಿ ಇತಿಹಾಸ ಪೂರ್ವದಿಂದ ಇಂದಿನವರೆಗಿನ ಬೆಂಗಳೂರು ಬೆಳವಣಿಗೆಯ ಮಾಹಿತಿಯನ್ನು ಒಳಗೊಂಡಿದೆ.



ಸಪ್ನ ಬುಕ್‌ಹೌಸ್ ಪ್ರಕಟಿಸಿರುವ 'ಬೆಂಗಳೂರು ಅಂದು-ಇಂದು' ಕೃತಿಯನ್ನು ಉಪ ಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ಇತ್ತೀಚೆಗೆ ನಗರದಲ್ಲಿ ಬಿಡುಗಡೆಗೊಳಿಸಿದರು.

ಕನ್ನಡ ಪರ ಹೋರಾಟಗಾರ ರಾ.ನಂ. ಚಂದ್ರಶೇಖರ ಮತ್ತು ಆರ್.ದೊಡ್ಡೇಗೌಡ ಅವರ ಬೆಂಗಳೂರು: ಅಂದು-ಇಂದು ಕೃತಿಯು ಹೆಸರಿಗೆ ಅನ್ವರ್ಥವಾಗಿ ಬೆಂಗಳೂರಿನ ಹೆಸರು ಹೇಗೆ ಬಂತು, ಇಲ್ಲಿನ ಪ್ರಾಚೀನತೆ ಎಷ್ಟು, ಕರಗ, ಕಡಲೆಕಾಯಿ ಪರಿಷೆ, ಹಲಸೂರು ಪಲ್ಲಕ್ಕಿಯಂತಹ ಆಚರಣೆ, ಬೆಂಗಳೂರಿನ ಪರಂಪರೆ, ಸಾಂಸ್ಕೃತಿಕ ಅನನ್ಯತೆಗಳ ಪರಿಚಯ, ವಿಧಾನಸಭಾ ಕ್ಷೇತ್ರ, ಬಿಬಿಎಂಪಿ ವಾರ್ಡ್‌ಗಳ ಪಟ್ಟಿ, ಆರಾಧನ ಕೇಂದ್ರ, ಶಿಕ್ಷಣ ಹೀಗೆ ಹತ್ತು ಹಲವು ಮಾಹಿತಿಯನ್ನು ಒಳಗೊಂಡಿದ್ದು ಬೆಂಗಳೂರಿನ ಬಗ್ಗೆ ತಿಳಿಯಬಯಸುವವರಿಗೆ ಅಪರೂಪದ ಮಾಹಿತಿಯನ್ನು ಒದಗಿಸುವ ಕೃತಿಯಾಗಿದೆ.

ಕನ್ನಡಪ್ರಭ ಸೋಮವಾರ 24.7.2023

# 'ವಚನ ಕಲಿಕೆಯಿಂದ ಬದುಕೆಲ್ಲ ಸಂತೋಷ'

## ವಚನಗಳು ಕನ್ನಡ ಸಾಂಸ್ಕೃತಿಕ ಸಂಪತ್ತು: ನಾಡೋಜ ವೂಡೇ ಪಿ.ಕೃಷ್ಣ ಪ್ರತಿಪಾದನೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಕನ್ನಡದ ಸಾಂಸ್ಕೃತಿಕ ಸಂಪತ್ತಾದ ವಚನಗಳನ್ನು ಕಲಿಯುವುದರಿಂದ ಬದುಕೆಲ್ಲ ಸಂತೋಷವಾಗಿ ಇರಬಹುದು ಎಂದು ನಾಡೋಜ ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ವಚನಜ್ಯೋತಿ ಬಳಗದಿಂದ ನಾಗರಬಾವಿಯ ಆರ್ಯನ್ ಪ್ರೆಸಿಡೆನ್ಸಿ ಶಾಲೆಯಲ್ಲಿ ಆಯೋಜಿಸಿದ್ದ 'ವಚನ ಕಲಿ ನಲಿ-ತರಗತಿಗಳಲ್ಲಿ ವಚನ ಬಿತ್ತನೆ' ಸಾಂಸ್ಕೃತಿಕ ಪಯಣ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿದರು.

ವಚನಗಳು ಕನ್ನಡದ ಸಾಂಸ್ಕೃತಿಕ ಸಂಪತ್ತಾಗಿವೆ. 25 ವರ್ಷದಿಂದ ವಚನದ ಮೂಲಕ ಕನ್ನಡ ಚಟುವಟಿಕೆಗಳನ್ನು ನಡೆಸುತ್ತಿರುವ ವಚನ ಬಳಗವು ಇದೀಗ ತರಗತಿಗಳಲ್ಲಿ ವಚನ ಬಿತ್ತನೆಗೆ ಹೊರಟಿರುವುದು ಎಲ್ಲರಿಗೂ ಮಾದರಿಯಾಗಿದೆ. ಇದರಿಂದ ಉತ್ತಮ ಸಮಾಜ ನಿರೀಕ್ಷಿಸಬಹುದು ಎಂದರು.

ಬಳಗದ ಅಧ್ಯಕ್ಷ ಎಸ್.ಪಿನಾಕಪಾಣಿ ಮಾತನಾಡಿ, ವಚನ ಚಳವಳಿಯ ಆಧುನಿಕ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ತರಗತಿಗಳಲ್ಲಿ ವಚನಗಳನ್ನು ಪಠ್ಯ ಕ್ರಮದಲ್ಲಿ ಬೋಧಿಸುವ ಕಾರ್ಯ ಆರಂಭವಾಗಿದೆ. ಇದಕ್ಕಾಗಿ ಕನ್ನಡ ಪಠ್ಯಪುಸ್ತಕದಂತೆ ವಚನ ಪಠ್ಯವನ್ನು ಅಭ್ಯಾಸ ಪಠ್ಯಪುಸ್ತಕವಾಗಿ ಸಿದ್ಧಗೊಳಿಸಲಾಗಿದೆ. ಈಗಾಗಲೇ ಹಲವು ಶಾಲೆಗಳು ವಚನ ಬಿತ್ತನೆಗೆ ಆಮಂತ್ರಿಸಿದ್ದು, ಮುಂದಿನ ದಿನಗಳಲ್ಲಿ ರಾಜ್ಯಾದ್ಯಂತ ವಚನ ಬಿತ್ತನೆ ನಡೆಸಲಾಗುವುದು ಎಂದು ಪ್ರಕಟಿಸಿದರು.

ಶಾಲೆಯ ಮಕ್ಕಳು ವಚನಕಾರರ ವೇಷ ಧರಿಸಿ ವಚನಗಳನ್ನು ಹಾಡಿ ನೃತ್ಯ ಮಾಡಿದರು. ಬೆಂಗಳೂರು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪುರಸ್ಕೃತರಾದ ವೂಡೇ ಪಿ. ಕೃಷ್ಣ ಶಾಲೆಯ ಮುಖ್ಯಸ್ಥ ಎ.ಎ.ಕುದ್ರೋಳಿ ಅವರನ್ನು ಅಭಿನಂದಿಸಲಾಯಿತು.

ವಚನಜ್ಯೋತಿ ಬಳಗದ ಮಹೇಶ ಬೆಲ್ಲದ, ಗುರುಪ್ರಸಾದ ಕುಚ್ಚಂಗಿ, ಪ್ರಭು ಇಸುವನಹಳ್ಳಿ, ರಾಜಾ ಗುರುಪ್ರಸಾದ್, ವೀರಯೋಧ ಗಂಗಾಧರ್, ಶಾಲೆಯ ಪ್ರಾಂಶುಪಾಲೆ ಗುಲ್ಜಾರ್ ಬೇಗಮ್, ನಿರ್ದೇಶಕ ರಾಣಾ ಹಾಜರಿದ್ದರು.



ವಚನಜ್ಯೋತಿ ಬಳಗದಿಂದ ನಾಗರಬಾವಿಯ ಆರ್ಯನ್ ಪ್ರೆಸಿಡೆನ್ಸಿ ಶಾಲೆಯಲ್ಲಿ ಆಯೋಜಿಸಿದ್ದ 'ವಚನ ಕಲಿ ನಲಿ-ತರಗತಿಗಳಲ್ಲಿ ವಚನ ಬಿತ್ತನೆ' ಕಾರ್ಯಕ್ರಮವನ್ನು ನಾಡೋಜ ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಬಳಗದ ಅಧ್ಯಕ್ಷ ಎಸ್.ಪಿನಾಕಪಾಣಿ, ಶಾಲೆಯ ಮುಖ್ಯಸ್ಥ ಎ.ಎ.ಕುದ್ರೋಳಿ, ಉದ್ಯಮಿ ಮಹೇಶ ಬೆಲ್ಲದ ಹಾಜರಿದ್ದರು.

ಉದಯವಾಣಿ ಸೋಮವಾರ, ಜುಲೈ 24, 2023

# ರಾಷ್ಟ್ರ ಮಟ್ಟದ ಅಣಕು ನ್ಯಾಯಾಲಯ ಸ್ಪರ್ಧೆಯಲ್ಲಿ ಪಿಇಎಸ್ ವಿವಿ ಮೊದಲು




**ಬೆಂಗಳೂರು:** ನಗರದ ಶೇಷಾದ್ರಿಪುರಂ ಕಾನೂನು ಮಹಾವಿದ್ಯಾಲಯದಿಂದ ಹಮ್ಮಿಕೊಂಡಿದ್ದ 5ನೇ ರಾಷ್ಟ್ರ ಮಟ್ಟದ ಅಣಕು ನ್ಯಾಯಾಲಯ ಸ್ಪರ್ಧೆಯಲ್ಲಿ ಪಿಇಎಸ್ ವಿಶ್ವವಿದ್ಯಾಲಯ ತಂಡ ಮೊದಲ ಸ್ಥಾನ ಪಡೆದುಕೊಂಡಿದೆ. ಈ ಸ್ಪರ್ಧೆಯಲ್ಲಿ ವಿವಿಧ ರಾಜ್ಯಗಳ ಒಟ್ಟು 26 ತಂಡಗಳು ಭಾಗಿಯಾಗಿದ್ದು, ಗಾಂಧಿಭವನದಲ್ಲಿ ಆಯೋಜಿಸಿದ್ದ ಅಂತಿಮ ಸ್ಪರ್ಧೆಯಲ್ಲಿ ರಾಮಯ್ಯ ಇನ್‌ಸ್ಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್ ಮತ್ತು ಪಿಇಎಸ್ ವಿಶ್ವವಿದ್ಯಾಲಯ ಭಾಗವಹಿಸಿದ್ದು, ವಿಜೇತರಾದ ಪಿಇಎಸ್ ವಿವಿ ತಂಡಕ್ಕೆ ಪ್ರಶಸ್ತಿ ಫಲಕ ಹಾಗೂ 30 ಸಾವಿರ ರೂ. ನಗದು ಬಹುಮಾನ ಮತ್ತು ದ್ವಿತೀಯ ಸ್ಥಾನಗಳಿಸಿದ ರಾಮಯ್ಯ ಇನ್‌ಸ್ಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್ ತಂಡಕ್ಕೆ ಪ್ರಶಸ್ತಿ ಫಲಕದ ಜತೆಗೆ 20 ಸಾವಿರ ನಗದು ಬಹುಮಾನ ನೀಡಲಾಯಿತು. ಕಾರ್ಯಕ್ರಮದಲ್ಲಿ ಹೈಕೋರ್ಟ್ ನ್ಯಾಯಮೂರ್ತಿ ಜಸ್ಟೀಸ್ ಅನಂತ್ ರಾಮನಾಥ್ ಹೆಗ್ಡೆ ಜಸ್ಟೀಸ್ ಸಿ.ಎಂ ಪೂಣಚ್ಚ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳ ಟ್ರಸ್ಟ್ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ, ಟ್ರಸ್ಟಿ ಮೃತ್ಯುಂಜಯ ಇತರರಿದ್ದರು.

# ನೀರಿನ ದರ ಪರಿಷ್ಕರಣೆ ಸುಳಿವು

ಬೆಂಗಳೂರು: ರಾಜಧಾನಿ ಬೆಂಗಳೂರಿನಲ್ಲಿ ಕುಡಿಯುವ ನೀರು ಪೂರೈಕೆಯಲ್ಲಿ ಶೇ.32ರಷ್ಟು ನೀರು ಪೋಲಾಗುತ್ತಿದೆ. ಇದರ ನಿಯಂತ್ರಣಕ್ಕೆ ಕ್ರಮ ಅಗತ್ಯವಿದೆ. 2014ರಿಂದ ನೀರಿನ ದರ ಪರಿಷ್ಕರಣೆ ಆಗಿಲ್ಲ. ಈ ಬಗ್ಗೆ ಸರ್ಕಾರ ಗಂಭೀರ ಚಿಂತನೆ ನಡೆಸಿದೆ ಎನ್ನುವ ಮೂಲಕ ನೀರಿನ ಶುಲ್ಕ ಹೆಚ್ಚಳದ ಸುಳಿವನ್ನು ಉಪಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ನೀಡಿದ್ದಾರೆ.

ಕುಮಾರಕೃಪಾ ಅತಿಥಿಗೃಹದಲ್ಲಿ ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದ ಅವರು, ಬಿಡಬ್ಲ್ಯೂಎಸ್‌ಎಸ್‌ಬಿ ಅವರಿಗೆ ಸಿಬ್ಬಂದಿ ವೇತನ ನೀಡಲು ಸಾಧ್ಯವಾಗುತ್ತಿಲ್ಲ. ಹೀಗೆ ಅನೇಕ ಆಂತರಿಕ ಸಮಸ್ಯೆಗಳು ಇವೆ. ಬೆಂಗಳೂರನ್ನು ಯಾವುದೇ ಸರ್ಕಾರ ಬೆಳೆಸುತ್ತಿಲ್ಲ. ಇಲ್ಲಿನ ವಾತಾವರಣಕ್ಕೆ ಜನ ವಲಸೆ ಬಂದು ತಾನಾಗಿಯೇ ಬೆಳೆಯುತ್ತಿದೆ. ಇದಕ್ಕೆ ಒಂದು ಸ್ವರೂಪ ನೀಡಬಹುದು. ಇದಕ್ಕಾಗಿ ನಾನು ಸಲಹೆ ಪಡೆಯುತ್ತಿದ್ದೇನೆ. 30 ಲಕ್ಷ ಇದ್ದ ಜನಸಂಖ್ಯೆ 1.30 ಕೋಟಿ ಆಗಿದೆ. ಹವಾಮಾನ ನಮಗೆ ಬೆಂಬಲವಾಗಿ ನಿಂತಿದೆ ಎಂದು ವಿಶ್ಲೇಷಿಸಿದರು.

ಬೆಂಗಳೂರು ಮಹಾನಗರದ ಪರಿವರ್ತನೆಗೆ ಸಾರ್ವಜನಿಕರು ಸೇರಿದಂತೆ ವಿವಿಧ ಕ್ಷೇತ್ರಗಳ ಗಣ್ಯರ ಸಲಹೆ ಕೇಳಿದ್ದು, ಈವರೆಗೆ 70 ಸಾವಿರ ಸಲಹೆ ಬಂದಿವೆ. ಶೀಘ್ರವೇ ಮಕ್ಕಳ ಅಭಿಪ್ರಾಯವನ್ನು ಪಡೆಯಲಿದ್ದೇನೆ. ನಂತರ ಎಷ್ಟು ಸಾಧ್ಯವೋ ಅಷ್ಟು ಸಲಹೆಗಳನ್ನು ಒಂದೊಂದಾಗಿ ಜಾರಿ ಮಾಡುವ ಮೂಲಕ ರಾಜಧಾನಿಯನ್ನು ಭವಿಷ್ಯದ ಹೊಸದಿಕ್ಕಿಗೆ ಕೊಂಡೊಯ್ಯಲಾಗುವುದು ಎಂದರು.

ರಾಜಧಾನಿ ರಸ್ತೆಗಳು 60-80 ಅಡಿಗಳಿವೆ. 2013ರ ನಂತರ ಈ ರಸ್ತೆಗಳ ಅಗಲೀಕರಣ ಕಷ್ಟವಾಗುತ್ತಿದೆ.

ಇದರಿಂದ ಟ್ರಾಫಿಕ್ ಹೆಚ್ಚಿದೆ. ಬೆಂಗಳೂರಿನ ಅಭಿವೃದ್ಧಿಗೆ 8 ಸಾವಿರ ಕೋಟಿ ಮಾತ್ರ ಸಂಪನ್ಮೂಲ ಇದೆ. ಮೆಟ್ರೋ ಸೇರಿದಂತೆ ಇತರೆ ಅಭಿವೃದ್ಧಿ ಕಾಮಗಾರಿಗೆ ಸಾಲ ಪಡೆಯಲಾಗಿದೆ. ಈ 8 ಸಾವಿರ ಕೋಟಿಯಲ್ಲಿ ಏನೆಲ್ಲಾ ಮಾಡಬಹುದು? ಇದರಲ್ಲಿ ತೆರಿಗೆ ಮೂಲಕ 3 ಸಾವಿರ ಕೋಟಿ ಸಂಗ್ರಹವಾಗಿದೆ ಎಂದು ಮಾಹಿತಿ ನೀಡಿದರು.

ಬೆಂಗಳೂರಿನ ಶಿಕ್ಷಣದ ಗುಣಮಟ್ಟ ಉತ್ತಮವಾಗಿದೆ. ಹೆಚ್ಚು ಎಂಜಿನಿಯರ್, ಡಾಕ್ಟರ್, ತಂತ್ರಜ್ಞರು ತಯಾರಾಗುತ್ತಿದ್ದು, ಆದರೂ ನಿರುದ್ಯೋಗ ಪ್ರಮಾಣ ಇದೆ. ಇದಕ್ಕಾಗಿ ಹಳ್ಳಿಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಹಾಗೂ ಎರಡು ಮೂರನೇ ಹಂತದ ನಗರಗಳಲ್ಲಿ ಕೈಗಾರಿಕೆಗೆ ಆದ್ಯತೆ ನೀಡಲಾಗುವುದು. ಬೆಂಗಳೂರಿನ ಟ್ರಾಫಿಕ್ ಸಮಸ್ಯೆ ಕುರಿತು ಬಗ್ಗೆ ಟ್ರಾಫಿಕ್ ಸಮಸ್ಯೆ ಬಗ್ಗೆ ಚರ್ಚೆ ಮಾಡಲಾಗುವುದು. ಎಲ್ಲಾ ಸಲಹೆ ಪಡೆದ ನಂತರ ಏನು ಮಾಡಬಹುದು ಎಂದು ಘೋಷಣೆ ಮಾಡುತ್ತೇವೆ ಎಂದು ವಿವರಿಸಿದರು.



ಉಪಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ಅವರು ರಾ.ನಂ.ಚಂದ್ರಶೇಖರ್ ಮತ್ತು ದೊಡ್ಡೇಗೌಡರು ರಚಿಸಿರುವ ಬೆಂಗಳೂರು ಅಂದು-ಇಂದು ಎಂಬ ಕೃತಿಯನ್ನು ಶನಿವಾರ ಕುಮಾರಕೃಪಾದಲ್ಲಿ ನಡೆದ ಸಮಾರಂಭದಲ್ಲಿ ಲೋಕಾರ್ಪಣೆ ಮಾಡಿದರು. ನಿವೃತ್ತ ಡಿಜಿಪಿ ಡಾ.ಡಿ.ವಿ.ಗುರುಪ್ರಸಾದ್, ಹಿರಿಯ ಸಾಹಿತಿ ಹಂ.ಪ. ನಾಗರಾಜಯ್ಯ, ಶಿಕ್ಷಣತಜ್ಞ ಡಾ. ವೂಡೇ ಪಿ ಕೃಷ್ಣ, ಸ್ವಪ್ನಾ ಬುಕ್‌ಹೌಸ್‌ನ ನಿತಿನ್ ಶಾ, ಪತ್ರಕರ್ತರಾದ ಜೋಗಿ ಮತ್ತಿತರರಿದ್ದರು.

# ಈ ಸಂಜೆ

Aug 1, 2023



ನಗರದ ಚೌಡಯ್ಯ ಸ್ಮಾರಕ ಭವನದಲ್ಲಿಂದು ಹಮ್ಮಿಕೊಂಡಿದ್ದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ಪ್ರಥಮ ಪಿಯುಸಿ ವಿದ್ಯಾರ್ಥಿಗಳಿಗೆ ಪುನಶ್ಚೇತನ ಕಾರ್ಯಾಗಾರ ಹಾಗೂ ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ವಿಶ್ರಾಂತ ಐಎಎಸ್ ಅಧಿಕಾರಿ ಡಾ.ಮುದ್ದುಮೋಹನ್ ಅವರನ್ನು ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಸನ್ಮಾನಿಸಿದರು. ಉಪಾಧ್ಯಕ್ಷ ಹೊಂಬಾರಪ್ಪ , ಪ್ರಾಂಶುಪಾಲ ಪ್ರೊ.ಮಂಜುನಾಥ್ , ಆಡಳಿತ ಮಂಡಳಿ ಅಧ್ಯಕ್ಷ ಕಾರ್ತಿಕ್ ಮತ್ತಿತರರು ಹಾಜರಿದ್ದರು.

# ಗಾಂಧಿ ಹೆಸರಿನಲ್ಲಿ ಧೋಖಾ ಮಾಡುತ್ತಿರುವ ಕಂತ್ರಿ ಜಿ.ಬಿ.ಶಿವರಾಜ

ಯಾಕೋ ಏನೋ ಬೆಂಗಳೂರಿನ ಗಾಂಧಿ ಭವನ ಇತ್ತೀಚಿನ ದಿನಗಳಲ್ಲಿ ನಿವೃತ್ತರಾದವರ ಅಡ್ಡ ಆಗುತ್ತಿರುವುದು ಶೋಚನೀಯ. ಹೊ.ಶ್ರೀನಿವಾಸಯ್ಯನವರು ಕಟ್ಟಿಬೆಳೆಸಿದ ಗಾಂಧಿ ಭವನ ಇಂದು ಯಾರೂ ಹೇಳುವವರು ಕೇಳುವವರು ಒಬ್ಬರೂ ಇದ್ದಂತಿಲ್ಲ. ಯಾಕೆಂದರೆ ವೂಡೇ ಪಿ.ಕೃಷ್ಣ ಅವರಿಗೆ ಬೇಕೇಬೇಕು ಬೇಡವೇ ಬೇಡ.. ಹತ್ತಾರು ಸಂಘ-ಸಂಸ್ಥೆಗಳಲ್ಲಿ ಪದಾಧಿಕಾರಿಗಳಾಗಿರೋದ್ರಿಂದ ಗಾಂಧಿ ಭವನವನ್ನು ಕಾಲೇಜಿನಲ್ಲಿ ಪಾಠ ಮಾಡದೆ ಪ್ರೊಫೆಸರ್ ಅನ್ನಿಕೊಂಡು ರಿಟೈರ್ಡ್ ಆಗಿ ಪರ್ಮ್‌ನೆಂಟಾಗಿ ಅಡ್ಡಾಯಿಸಿಕೊಂಡಿರುವ ಶಿವರಾಜನಿಗೆ ಧಾರೆಯೆರೆದು ಕೊಟ್ಟಿರುವಂತಿದೆ.

ಗಾಂಧಿ ಭವನದ ಬೈಲಾದಲ್ಲಿರದ ಉಪಾಧ್ಯಕ್ಷ ಹುದ್ದೆಗೆ ಮೊಳೆ ಹೊಡೆದುಕೊಂಡು ಕುಳಿತಿರುವ ಈತ ಆಡಿದ್ದೇ ಆಟ ಆಗೋಗಿದೆ. ಬೇರೆಯವರು ಯಾರೂ ಗಾಂಧಿ ಭವನದಲ್ಲಿ ಪ್ರಾಮಾಣಿಕರಿಲ್ಲ.. ನಾನೊಬ್ಬನೇ ಪ್ರಾಮಾಣಿಕ, ಹರಿಶ್ಚಂದ್ರನ ವಂಶದ ತುಂಡು ಎಂದು ತನಗೆ ತಾನೇ ಹೊಗಳಿಕೊಳ್ಳುವ ಶಿವರಾಜನನ್ನು ಖಾಲಿ ಮಾಡುವಂತೆ ಗಾಂಧಿ ಭವನ ಹಾಗೂ ಗಾಂಧಿವಾದಿಗಳು ಯಾರೊಬ್ಬರೂ ಹೇಳದೇ ಇರುವುದು ಸೋಜಿಗವೇ ಸರಿ. ಶಿವರಾಜನಿಂದ ಗಾಂಧಿ ಭವನಕ್ಕೆ ಯಾವ ಸಹಾಯ, ಸಹಕಾರ ಪ್ರೋತ್ಸಾಹ ಆಗಿದೆ ಎಂದು ಯಾರಾದರೂ ಹೇಳಲಿ, ನೋಡೋಣ... ಗಾಂಧಿ ಭವನದ ಪ್ರತಿಯೊಂದನ್ನೂ ವಸ್ತು ಕದ್ದು ಹೊತ್ತು ಹೋಗುವ ಈತನನ್ನು ಯಾಕಾಗಿ, ಏನು ಮಾಡಲು ಸಾಧ್ಯವಿಲ್ಲ.

ಹಾರ, ಶಾಲು, ಪುಸ್ತಕ, ಹಣ ,ಜೇಬು ಇಷ್ಟೆಲ್ಲಾ ತುಂಬಿಕೊಂಡು ಅಲ್ಲಿ ಇಲ್ಲಿ ಕಾರ್ಯಕ್ರಮ ಎಂದು ಬರೀ ಸುಳ್ಳು ಲೆಕ್ಕ ತೋರಿಸಿ, ಹೊತ್ತು ಹೊದದ್ದಕ್ಕೆ ಯಾವಲೆಕ್ಕವೂ ಇದೂವರೆಗೂ ಕೊಟ್ಟಿಲ್ಲ ಕೊಡುವುದೂ ಇಲ್ಲ. ಇವನು ಮಾಡುವ ಕಾರ್ಯಕ್ರಮಕ್ಕೆ ಲೆಕ್ಕ ಬುಕ್ ಏನೂ ಇಲ್ಲ... ರಾಮನ ಲೆಕ್ಕ ಕೃಷ್ಣನ ಲೆಕ್ಕದಲ್ಲಿ ಲಕ್ಷಾಂತರ ರೂಪಾಯಿಗಳನ್ನು, ವಸ್ತುಗಳನ್ನು ಹೊತ್ತು ಹೋಗುವ ಇವನಿಗೆ ಯಾವುದೇ ಸಭೆ ಕಾರ್ಯಕಾರಿ ಸಮಿತಿಯ ಅನುಮೋದನೆಯೂ ಇರುವುದಿಲ್ಲ.

ಗಾಂಧಿ ಭವನದ ಅಧ್ಯಕ್ಷರು, ಕಾರ್ಯದರ್ಶಿ ಆಟಕ್ಕುಂಟು ಲೆಕ್ಕಕ್ಕಿಲ್ಲ ಎಂಬಂತಾಗಿದೆ. ಶಿವರಾಜನನ್ನು ಪ್ರಶ್ನಿಸಿದರೆ ಅವರನ್ನು ಅವನದೇ ಪಟಾಲಂ ಗಾಂಧಿ ಭವನದಲ್ಲಿ ಇದೆ. ಅವನೇ ನೇಮಿಸಿಕೊಂಡಿರುವ ಬೇರೆ ಬೇರೆ ಇಲಾಖೆಗಳಲ್ಲಿ ಯಾವ ಒಂದು ಒಳ್ಳೆಯ ಹೆಸರು ಮಾಡದೇ ಇರುವ ನಿವೃತ್ತ ಸಂಘದವರನ್ನು ಸದಸ್ಯರುಗಳು ಮಾಡಿಕೊಂಡು ಇವನು ಹೇಳುವ , ಮಾಡುವ ಭ್ರಷ್ಟಾಚಾರಕ್ಕೆ ಕೈಎತ್ತಿಸಿಕೊಂಡು ಬದುಕುತ್ತಿದ್ದಾನೆ. ಅವರಲ್ಲಿ ವಾರ್ತಾ ಇಲಾಖೆ ಹಾಳು ಮಾಡಿ ಬಂದ , ಶಿಕ್ಷಣ ಇಲಾಖೆಯಲ್ಲಿ ಪಿಟಿ.ಮೇಷ್ಟ್ರು ಕೆಲಸ ಮಾಡದ ಅಬಿದಾಬೇಗಂ, ಗಾಂಧಿಭವನವನ್ನು



ತಮ್ಮ ಪುಸ್ತಕ ಬಿಡುಗಡೆ, ತಮಗೆ ಬೇಕಾದಾಗ ಯಾವುದಾದರೂ ಸಭೆ ಸಮಾರಂಭಗಳಿಗೆ ಉಚಿತವಾಗಿ ಬಳಸಿಕೊಳ್ಳಲು ಬರುವ ಎಸ್.ಜಿ.ಸಿದ್ದರಾಮಯ್ಯ, ಮಾಜಿ ಶಿಕ್ಷಣ ಸಚಿವ ಚಂದ್ರಶೇಖರ್ ಮಗ ನರೇಂದ್ರ ಈತನಿಗೆ ಗಾಂಧಿ ಭವನ ಬೇಕೇಬೇಕು ಬೇಡವೇ ಬೇಡ.. ಆದರೂ ಶಿವರಾಜನ ತಾಳಕ್ಕೆ ತಕ್ಕಂತೆ ಕುಣಿಯುವವರು... ಇವರಿಂದ ಗಾಂಧಿ ಭವನ ಇದೂವರೆಗೂ ಉದ್ಧಾರ ಆಗಿಲ್ಲ, ಆಗೋದೂ ಬೇಕಾಗಿಲ್ಲ. ಸನ್ಮಾನ್ಯ ಅಧ್ಯಕ್ಷರು ತಮ್ಮ ಶೇಷಾದ್ರಿಪುರಂ ಶಿಕ್ಷಣ-ಸಂಸ್ಥೆಗಳ ಎಡೆಬಿಡದ ಕೆಲಸಗಳಲ್ಲಿ ತೊಡಗಿಕೊಂಡಿರುವುದರಿಂದ ಇಲ್ಲಿನ ಆಗುಹೋಗುಗಳ ಬಗ್ಗೆ ಕಿಂಚಿತ್ತೂ ಕಾಳಜಿ ಕಳಕಳಿ ಇಲ್ಲ. ಸರ್ಕಾರದಿಂದ, ಎನ್.ಎಸ್.ಎಸ್ ಇಂದ ಒಂದಿಷ್ಟು 40/50 ಲಕ್ಷ ಹಣ ಬರೋದ್ರಿಂದ ಹೇಗೋ ಹಾಗೆ ನಡೆದುಕೊಂಡು ಹೋಗುತ್ತಿದೆ. ಆದರೆ, ಇಲ್ಲಿ ನಡೆಯುವ ಅವ್ಯವಹಾರ ದೇವರಿಗೇ ಗೊತ್ತು. ಆರ್.ಟಿ.ಐ. ಇಂದ ಮಾಹಿತಿ ಕೇಳಿದರೆ ಕೊಡುವುದೇ ಇಲ್ಲ. ನೂರೆಂಟು ಸಬೂಬು ಹೇಳುತ್ತಾರೆ. ದಕ್ಷಿಣ ಭಾರತ ರಾಜ್ಯಗಳ ಗಾಂಧಿ ಪ್ರತಿನಿಧಿಗಳು, ಪದಾಧಿಕಾರಿಗಳ ಸಮಾವೇಶ ಏರ್ಪಡಿಸಲಾಗಿತ್ತು. ಒಂದು ರೂಪಾಯಿ ಕೂಡಾ ಖರ್ಚಾಗುವುದಿಲ್ಲ ಎಂದು ಕಾರ್ಯಕಾರಿ ಸಭೆಯಲ್ಲಿ ಹೇಳಿ ಬರೆಸಿ ಹತ್ತು ಲಕ್ಷಕ್ಕೂ ಹೆಚ್ಚು ಹಣವನ್ನು ಖರ್ಚು ಮಾಡಿಸಿ ಗಾಂಧಿ ಭವನವನ್ನು ಹಾಳು ಮಾಡಿರುವ ಶಿವರಾಜನು ಆ ಸಭೆಯಿಂದ ಆದ ಅನುಕೂಲವೇನು ಎಂಬುದು ಯಾರಿಗೂ ತಿಳಿಯದು.

ಗಾಂಧಿ ಭವನದಲ್ಲಿ ಹಾಸಿಗೆ ಮಂಚ ಇದ್ದರೂ 50 ಸಾವಿರದಷ್ಟು ಹಣವನ್ನು ಎ.ಸಿ.ಲಾಡ್ಜಿಂಗ್ ಮಾಡಿಸಿ ಬೇರೆ ಬೇರೆ ಗಾಂಧಿಗಳನ್ನು ಮತ್ತು ತಾನು ಮತ್ತು ತನ್ನ ಪಟಾಲಂ ಮಲಗಿದ್ದು ನಾಚಿಕೆಯಾಗಬೇಕು. ವೂಡೇ ಕೃಷ್ಣ ಅವರು ಮತ್ತು ತಾನು ಕೇಂದ್ರ ಗಾಂಧಿ ಭವನದ ಸದಸ್ಯರಾಗಿ ನೇಮಕಗೊಂಡರು. ಅನೇಕ ಬಾರಿ ರಾಜಿನಾಮೆ ನೀಡಿ ಹೆದರಿಕೆ ಬೆದರಿಕೆ,ಹಾಗೆ-ಹಾಗೇ ಗಾಂಧಿ ಭವನದ ಪರ್ಮನೆಂಟ್ ಸದಸ್ಯ, ಪದಾಧಿಕಾರಿ ಆಗಿ ಜಾಂಡಾ ಹೂಡಿರುವ ಶಿವರಾಜನು ತಾನು ಸಾಯೋದ್ರೊಳಗೊಮ್ಮೆ ಗಾಂಧಿ ಭವನದ ಅಧ್ಯಕ್ಷನಾಗೇ ಸಾಯಬೇಕೆಂದು ನಿರ್ಧರಿಸಿ.. ಅಧ್ಯಕ್ಷರು, ಕಾರ್ಯದರ್ಶಿಗಳನ್ನು ಹೆದರಿಸಿ ಬೆದರಿಸಿಕೊಂಡು ಗಾಂಧಿ ಭವನವನ್ನು ತನ್ನ ಸ್ವಂತ ಆಸ್ತಿ ಮಾಡಿಕೊಂಡು ಬದುಕುತ್ತಿದ್ದಾನೆ. ಗಾಂಧಿ ಭವನದಲ್ಲಿ ತನಗೆ ಬೇಕಾದವರನ್ನು ತನಗೆ ಅನುಕೂಲ ಮಾಡಿಕೊಡುವ ಜನರಿಗೆ ಊಟ, ವಸತಿ, ಸಭಾಂಗಣ ಕೊಡಿಸಿ ತಾನೇ ಎಲ್ಲಾ ನೋಡಿಕೊಳ್ಳುವುದೆಂದು ಹೇಳಿ ಲಕ್ಷಾಂತರ ರೂಪಾಯಿಗಳನ್ನು ನಷ್ಟವುಂಟು ಮಾಡುತ್ತಿದ್ದಾನೆ. ಸರ್ಕಾರ ಸರಿಯಾಗಿ ಆಡಿಟ್ ವರದಿ ಮಾಡಿಸಿ ಅಲ್ಲಿಯ ಹಣ ಪೋಲಾಗುತ್ತಿರುವುದನ್ನು ತಡೆಗಟ್ಟಬೇಕಾಗಿದೆ.

ಯಾವ ಲಂಗುಲಗಾಮು ಇಲ್ಲದೆ ಗಾಂಧಿ ಭವನದ ಹಿತಾಸಕ್ತಿಗೆ ಧಕ್ಕೆ ತರುತ್ತಿರುವ , ತಾನೇ ತನ್ನದೇ , ನನ್ನ ಬಿಟ್ಟು ಯಾರೂ ಏನೂ ಮಾಡಬಾರದು, ನನ್ನ ಅನುಮತಿ ಇಲ್ಲದೆ ಯಾವ ಕೆಲಸವೂ ಆಗಕೂಡದೆಂದು ಭಾವಿಸಿ, ನನ್ನ ಬಿಟ್ಟು ಗಾಂಧಿ ಭವನ ಯಾರ ಕೈಗೂ ಹೋಗಬಾರದು, ನಾನೇ ಪ್ರಾಮಾಣಿಕ, ತಾನೇ ಕಳ್ಳ, ಪರರ ನಂಬದ ಶಿವರಾಜನನ್ನು ಅವನ ಪಟಾಲಂ ಗಾಂಧಿ ಭವನದ ಖಾಲಿಯಾಗುವಂತೆ ಮಾಡಿ ವೂಡೇ ಕೃಷ್ಣ ಅವರು ಒಂದು ದಿಟ್ಟ ನಿರ್ಧಾರ ತೆಗೆದುಕೊಳ್ಳುವ ಅತ್ಯಾವಶ್ಯಕತೆ ಜರೂರಿದೆ. ಅರಸೀಕೆರೆ ಕಸ್ತೂರಬಾ ಆಶ್ರಮದಲ್ಲಿ ಮಹಿಳೆಯರು ಇರಬೇಕಾದ ಜಾಗದಲ್ಲಿ ಅಲ್ಲೂ ಆಟವಾಡುತ್ತಿರುವನು,ತಾನು ಹೇಳಿದಂತೆ ಕೇಳಲಿಲ್ಲ ಎಂದು ಸಿವಿಜಿ ಪಬ್ಲಿಕೇಶನ್ ಮತ್ತು ಗಾಂಧಿ ಪುಸ್ತಕಗಳನ್ನು ಮಾರಾಟ ಮಾಡುತ್ತಿದ್ದ ಅವರನ್ನು ಹೇಳದೆ ಕೇಳದೆ ಖಾಲಿ ಮಾಡುವಂತೆ ಲಾಯರ್ ನೋಟೀಸ್ ಕೊಡಿಸಿದ ಶಿವರಾಜನು ಐದಾರು ವರ್ಷಗಳಿಂದ ನ್ಯಾಯಾಲಯುದಲ್ಲಿ ವ್ಯಾಜ್ಯ ನಡೆಯುವಂತೆ ಮಾಡಿ , ಮಾತಿನಲ್ಲಿ ಇತ್ಯರ್ಥ ಆಗೋ ಕೆಲಸವನ್ನು ಕೋರ್ಟ್ ಮೆಟ್ಟಿಲೇರಿ ಲಕ್ಷಾಂತರ ಹಣ ಕೋರ್ಟ್, ಲಾಯರ್‌ಗೆ ಗಾಂಧಿ ಭವನದ ಹಣ ವ್ಯಯವಾಗುತ್ತಿದೆ. ಗಾಂಧಿ ಭವನದಲ್ಲಿ "ಅಮರಬಾಪು ಚಿಂತನ" ಪತ್ರಿಕೆ , ಕಟ್ಟಡ ನಿರ್ಮಾಣ ಮಾಡಲು ಅನುಮತಿ ನೀಡಿಸಿ, ಈಗ ನೋಟೀಸು ಕೊಟ್ಟು ಸಾಮಾಜಿಕ ಹೋರಾಟಗಾರ, ಸಮಾಜ ಸೇವಕ, ಕೊಡುಗೈ ದಾನಿ ಜೇರಿಗೆ ಲೋಕೇಶ್ ಅವರಿಗೆ ನೋಟೀಸ್ ಕೊಡಿಸಿ ಚಿತ್ರಹಿಂಸೆ ನೀಡುತ್ತಿರುವ ಶಿವರಾಜನ ಆಟಗಳಿಗೆ ಕೊನೆಮೊದಲಿಲ್ಲವಾಗಿದೆ. ಗಾಂಧಿ ಭವನದಿಂದ ಈ ಎಲ್ಲರನ್ನು ಖಾಲಿ ಮಾಡಿಸಿ ಹೊಸ ಹೊಸ ನಿಜವಾದ ಗಾಂಧಿ ತತ್ವ ಚಿಂತಕರಿಗೆ ಜನರಿಗೆ, ಯುವಕರಿಗೆ ಆದ್ಯತೆ ನೀಡಲಿ, ಶಿವರಾಜ ಇಲ್ಲದೆ ಗಾಂಧಿ ಭವನ ಚೆನ್ನಾಗಿಯೆ ನಡೆಯುತ್ತದೆ ಎಂದು ಇದು ಕರೋನ ಕಾಲದಲ್ಲಿ ಸಾಬೀತಾಗಿದೆ.

ಗಾಂಧಿ ಭವನದ ಕಷ್ಟಕಾಲದಲ್ಲಿ ಎಳ್ಳಷ್ಟೂ ಕಾಳಜಿ ವಹಿಸಿದೆ, ರಾಜಕಾರಿಣಿಗಳು ಬಂದಾಗ ಮಾತ್ರ ಬಂದು ಪೋಜು ಕೊಟ್ಟು ಓಡಿಹೋಗುವ, ತನಗೆ ಬೇಕಾದದ್ದನ್ನು ಹೊತ್ತು ಹೋಗುವ ಸಲುವಾಗಿಯೇ ಬರುವ ಈತನಿಗೆ ನಿಜವಾಗಿಯೂ ಮಾನ ಮರ್ಯಾದೆ ಇದ್ದರೆ ಬಿಟ್ಟು ಹೋಗಬೇಕು.. ಗಾಂಧಿಭವನವು ಶಿವರಾಜನಿಂದಾಗಿ ಒಂದು ಜಾತಿಯ ಸಂಸ್ಥೆಯಾಗದೆ ಗಾಂಧಿ ಭವನ ಸರ್ವಧರ್ಮ ಜನಾಂಗದ ಸಂಸ್ಥೆಯಾಗಲಿ, ಏನೇನಿರ್ಧಾರವಾದರೂ ಪಾರದರ್ಶವಾಗಿರಲಿ, ಪ್ರಾಮಾಣಿಕ ಅಲ್ಲದ, ಗೋಸುಂಬೆ ವ್ಯಕ್ತಿತ್ವದ ಗಾಂಧಿ ಹೆಸರೇಳಿ ಕೊಂಡು ಲೂಟಿಮಾಡಲೆಂದೇ ಬರುವ ಇವನನ್ನು ದೂರವಿಟ್ಟು ಗಾಂಧಿ ಭವನದ ನೌಕರರು ನೆಮ್ಮದಿಯಾಗಿ ಕೆಲಸ ಕಾರ್ಯಗಳನ್ನು ಮಾಡುವಂತಾಗಲಿ, ಇನ್ನೂ ಒಳ್ಳೆಯ ಚೆನ್ನಾಗಿ ಕೆಲಸ ಕಾರ್ಯಗಳನ್ನು ಮಾಡುವಂತೆ, ನಿಜವಾದ ಗಾಂಧಿ ಮನೆತನ, ಸ್ವಾತಂತ್ರ್ಯ ಹೋರಾಟಗಾರರ ಮನೆತನ , ಸಮಾಜಸೇವಕರು ಎಂಬುದನ್ನು ವೂಡೇ ಕೃಷ್ಣ ಅವರು ಧೈರ್ಯ ಸಾಹಸ ಮಾಡಿ ಸಾಬೀತು ಪಡಿಸಲೆಂಬ ಆಶಯ ಪತ್ರಿಕೆಯದ್ದಾಗಿದೆ.

– ಕಂಡವ

ಸಂಜೆವಾಣಿ

Monday 31 July 2023



ನಗರದ ಗಾಂಧಿ ಭವನದಲ್ಲಿಂದು ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ 119ನೇ ಜನ್ಮದಿನಾಚರಣೆ ಆಚರಿಸಲಾಯಿತು. ಕ.ಗಾಂ. ಸ್ಮಾ. ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕೋಶಾಧ್ಯಕ್ಷ ಹೆಚ್. ಬಿ. ದಿನೇಶ್, ಸಾಹಿತಿ ನಾಡೋಜ ಹಂಪ ನಾಗರಾಜಯ್ಯ, ವಿಶ್ರಾಂತ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ್, ವಸಂತಿಮೂರ್ತಿ ಗೊರೂರು, ಇಂದಿರಾ ಕೃಷ್ಣಪ್ಪ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಭಾನುವಾರ 30 ಜುಲೈ 2023




ಕಾವ್ಯನಂದನ ಪಬ್ಲಿಕೇಷನ್ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಡಾ.ದೊಡ್ಡರಂಗೇಗೌಡರಿಗೆ ದಾಖಲೆ ಪತ್ರ ಪ್ರದಾನ ಮಾಡಲಾಯಿತು. ಈ ವೇಳೆ ವೂಡೇ ಪಿ. ಕೃಷ್ಣ, ಬೈರಮಂಗಲ ರಾಮೇಗೌಡ, ನಟ ಸುಚೇಂದ್ರ ಪ್ರಸಾದ್, ಪತ್ರಕರ್ತೆ ಸಹನಾ, ಬಿಎಂಶ್ರೀ ಪ್ರತಿಷ್ಠಾನದ ಡಾ. ಶಾಂತರಾಜು ಮತ್ತಿತರರಿದ್ದರು.

ಸಂಯುಕ್ತ ಕರ್ನಾಟಕ
ಭಾನುವಾರ 10 ಸೆಪ್ಟೆಂಬರ್ 2023



# ಇಂದಿನ ಕಾರ್ಯಕ್ರಮ

**10–09–2023 । ಭಾನುವಾರ**

ತಜ್ಞ ಡಾ.ಗುರುರಾಜ ಕರಜಗಿ. ಸ್ವಾಗತ: ಲೋಕಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಅಶೋಕ ಹಾರನಹಳ್ಳಿ. ಅತಿಥಿಗಳು: ಸಚಿವ ಎಚ್.ಕೆ.ಪಾಟೀಲ್, ಮಾಜಿ ಸಚಿವ ಪಿ.ಜಿ.ಆರ್.ಸಿಂಧ್ಯಾ. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ. ಭಾರತೀಯ ವಿದ್ಯಾಭವನ ನಿರ್ದೇಶಕ ಎಚ್.ಎನ್.ಸುರೇಶ್. ಸ್ಥಳ: ಅರಮನೆ ರಸ್ತೆ, ಸ್ಕೌಟ್ಸ್ ಮತ್ತು ಗೈಡ್ಸ್ ಸಭಾಂಗಣ. 10.30



ಪ್ರಜಾವಾಣಿ
ಗುರುವಾರ • ಆಗಸ್ಟ್ 3, 2023

# ಮಲ್ಲೇಪುರಂ, ರವೀಂದ್ರ ಭಟ್ಟ ಸೇರಿ 16 ಮಂದಿಗೆ 'ಪರಿಮಳ ಪ್ರಶಸ್ತಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: ಪರಿಮಳ ಗೆಳೆಯರ ಬಳಗ ನೀಡುವ 'ಪರಿಮಳ ಪ್ರಶಸ್ತಿ'ಗೆ ಬಹು ಭಾಷಾ ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ್, 'ಪ್ರಜಾವಾಣಿ' ಕಾರ್ಯನಿರ್ವಾಹಕ ಸಂಪಾದಕ ರವೀಂದ್ರ ಭಟ್ಟ ಸೇರಿ 16 ಮಂದಿ ಆಯ್ಕೆಯಾಗಿದ್ದಾರೆ.

ನ್ಯಾಯಾಂಗ ಕ್ಷೇತ್ರದಿಂದ ಪಿ.ಎಸ್. ದಿನೇಶ್ ಕುಮಾರ್, ಶಿಕ್ಷಣ ಕ್ಷೇತ್ರದಿಂದ ವೂಡೇ ಪಿ. ಕೃಷ್ಣ, ಸಾಹಿತ್ಯ ಕ್ಷೇತ್ರದಿಂದ ಮಲ್ಲೇಪುರಂ ಜಿ.ವೆಂಕಟೇಶ್, ಪತ್ರಿಕೋದ್ಯಮ ಕ್ಷೇತ್ರದಿಂದ ರವೀಂದ್ರ ಭಟ್ಟ, ವೇದಾಂತ ಕ್ಷೇತ್ರದಿಂದ ಶ್ರೀಹರಿ ವಾಳ್ವೇಕರ್ ಆಚಾರ್ಯ, ದಾಸ ಸಾಹಿತ್ಯ ಸಂಶೋಧನೆಗೆ ಸುಳಾದಿ ಹನುಮೇಶಾಚಾರ್ಯ, ತಿಳಿಹಾಸ್ಯ ಹಾಗೂ ಕನ್ನಡ ಪರಿಚಾರಿಕೆಗೆ ಹಿರೇಮಗಳೂರು ಕಣ್ಣನ್ ಆಯ್ಕೆಯಾಗಿದ್ದಾರೆ.

ವಿಜ್ಞಾನ ಕ್ಷೇತ್ರದಿಂದ ವೈ.ಎಲ್. ಮಧುಸೂದನ್, ಸುಗಮ ಸಂಗೀತ ಕ್ಷೇತ್ರದಿಂದ ಪುತ್ತೂರು ನರಸಿಂಹ ನಾಯಕ್, ವೇಣುವಾದನಕ್ಕೆ ಪ್ರವೀಣ್ ಗೋಡ್ಖಿಂಡಿ, ಮೃದಂಗ ವಾದನಕ್ಕೆ ವಿ.ಕೃಷ್ಣ, ವೈದ್ಯಕೀಯ ಕ್ಷೇತ್ರಕ್ಕೆ ಡಾ.ಎಚ್.ಎನ್. ಸುಬ್ರಹ್ಮಣ್ಯ, ಡಾ.ಬಿ. ರವಿಶಂಕರ್ ಭಟ್, ಡಾ. ಗಿರಿಧರ ಕಜೆ, ಯೋಗ ಕ್ಷೇತ್ರಕ್ಕೆ ಎಚ್.ಎನ್. ಅರುಣ್ ಹಾಗೂ ಸಮಾಜ ಸೇವೆಗೆ ಶ್ರೀಪಾದರಾವ್ ದೇವನಹಳ್ಳಿ ಆಯ್ಕೆಯಾಗಿದ್ದಾರೆ.

48ನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ಸಾಹಿತ್ಯ, ಶಿಕ್ಷಣ, ನ್ಯಾಯಾಂಗ, ಪತ್ರಿಕೋದ್ಯಮ ಮೊದಲಾದ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗೈದ ಸಾಧಕರಿಗೆ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಇದೇ 20ರಂದು ಸಂಜೆ 5.45ಕ್ಕೆ ಇಲ್ಲಿನ ಕೆ.ಆರ್. ರಸ್ತೆಯಲ್ಲಿರುವ ಗಾಯನ ಸಮಾಜದ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ ಎಂದು ಬಳಗ ತಿಳಿಸಿದೆ.

ಈ ವೇಳೆ ದಾಸ ಸಾಹಿತ್ಯ ಸಂಶೋಧಕ, ಲೇಖಕ ಎಸ್. ಜಯಸಿಂಹ ಅವರು ರಚಿಸಿರುವ 'ಶ್ರೀಸುಮತೀಂದ್ರ ದರ್ಶನ' ಎಂಬ ಸಂಶೋಧನಾತ್ಮಕ ಕೃತಿಯನ್ನು ಸುವಿದ್ಯೇಂದ್ರತೀರ್ಥ ಸ್ವಾಮೀಜಿ ಬಿಡುಗಡೆ ಮಾಡುತ್ತಾರೆ. ಶ್ರೀಪಾದರಾಜ ಮಠಾಧೀಶ ಸುಜಯನಿಧಿತೀರ್ಥ ಸ್ವಾಮೀಜಿ ದಿವ್ಯ ಸಾನ್ನಿಧ್ಯ ವಹಿಸುತ್ತಾರೆ. ಪುತ್ತೂರು ನರಸಿಂಹ ನಾಯಕ್ ಮತ್ತು ವೃಂದದವರಿಂದ 'ಹರಿದಾಸ ವಾಣಿ' ಕಾರ್ಯಕ್ರಮವೂ ನಡೆಯಲಿದೆ ಎಂದು ಪ್ರಕಟಣೆಯಲ್ಲಿ ಹೇಳಿದೆ.

ಪ್ರಜಾ ಪ್ರಗತಿ

Aug 2, 2023

# ಗೊರೂರು ಆದರ್ಶ ಜೀವನವನ್ನು ವಿದ್ಯಾರ್ಥಿಗಳು ಪಾಲಿಸಿ

## ರಾಮಸ್ವಾಮಿ ಅಯ್ಯಂಗಾರ್ ಅವರ 119ನೇ ಜನ್ಮ ದಿನಾಚರಣೆ ಉದ್ಘಾಟಿಸಿ ವೂಡೇ ಪಿ. ಕೃಷ್ಣ ನುಡಿ

■ ಪ್ರಜಾಪ್ರಗತಿ.ಕೆಸಿ

**ಬೆಂಗಳೂರು :** ಗೊರೂರು ಅವರು ಗಾಂಧೀಜಿಯವರ ಸರಳ ಜೀವನವನ್ನು ಬದುಕಿನಲ್ಲಿ ಅಳವಡಿಸಿಕೊಂಡು ಆದರ್ಶವನ್ನು ಪಾಲಿಸಿದ್ದರು. ವಿದ್ಯಾರ್ಥಿಗಳು ಗೊರೂರು ಅವರ ಪುಸ್ತಕಗಳನ್ನು ಓದುವ ಮೂಲಕ ಅವರ ಆದರ್ಶ ಜೀವನವನ್ನು ಪಾಲಿಸಬೇಕು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ತಿಳಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ ಯುವ ಸಬಲೀಕರಣ ಇಲಾಖೆ ಬೆಂಗಳೂರು ನಗರ ವಿಶ್ವವಿದ್ಯಾಲಯ ಹಾಗೂ ಪದವಿಪೂರ್ವ ಶಿಕ್ಷಣ ಇಲಾಖೆ ಇವರ ಸಂಯುಕ್ತ ಆಶ್ರಯದಲ್ಲಿ ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 119ನೇ ಜನ್ಮ ದಿನಾಚರಣೆಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಉದ್ಘಾಟಿಸಿ ಮಾತನಾಡುತ್ತಾ, ಗಾಂಧೀಜಿಯವರ ದೇಶಪ್ರೇಮ, ಸತ್ಯ, ಧರ್ಮ, ಅಹಿಂಸೆ ಮುಂತಾದ ಆದರ್ಶಗಳನ್ನು ಗೊರೂರು ಅವರು ಜೀವನದಲ್ಲಿ ಅಳವಡಿಸಿಕೊಂಡಿದ್ದರು ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕೋಶಾಧ್ಯಕ್ಷರಾದ ಹೆಚ್.ಬಿ. ದಿನೇಶ್ ಅವರು ಗೊರೂರರ ದತ್ತಿಯನ್ನು ಉದ್ಘಾಟಿಸಿ ಮಾತನಾಡಿ, ಗಾಂಧೀಜಿಯವರ ಆತ್ಮಕಥೆಯನ್ನು ಆಂಗ್ಲ ಭಾಷೆಯಿಂದ ಕನ್ನಡಕ್ಕೆ ಅನುವಾದಿಸಿದ ಕೀರ್ತಿ ಅವರದ್ದು, ಆದ್ದರಿಂದ ನಾವು ಚಿಕ್ಕಂದಿನಿಂದಲೇ ಗಾಂಧೀಜಿಯವರ ಜೀವನ ತತ್ವವನ್ನು ತಿಳಿಯಲು ಸಾಧ್ಯವಾಯಿತು ಎಂದು ತಿಳಿಸಿದರು.



ಬೆಂಗಳೂರಿನ ಗಾಂಧಿಭವನದಲ್ಲಿ ನಾಡೋಜ ಡಾ.ಹಂಪಾ ನಾಗರಾಜಯ್ಯನವರು ಡಾ. ಕಮಲಾ ನರಸಿಂಹರವರಿಗೆ ಡಾ. ಗೋರೂರು ಪ್ರಶಸ್ತಿಯನ್ನು ನೀಡಿ ಸನ್ಮಾನಿಸಿದರು ಚಿತ್ರದಲ್ಲಿ ಗಾಂಧಿಭವನದ ಅಧ್ಯಕ್ಷರಾದ ನಾಡೋಜ ದಾ. ವೂಡೇ ಪಿ. ಕೃಷ್ಣ, ವಸಂತಿಮೂರ್ತಿ ಗೂರೂರು ಡಾ. ಮಲ್ಲೇಪುರಂ.ಜಿ.ವೆಂಕಟೇಶ್, ಡಾ. ಎಸ್.ಜಿ. ಸುಶೀಲಮ್ಮ ಇಂದ್ರಮ್ಮ ಇತರರಿದ್ದಾರೆ.

ಸಾಹಿತಿಗಳು ಹಾಗೂ ಚಿಂತಕರಾದ ನಾಡೋಜ ಹಂಪ ನಾಗರಾಜಯ್ಯ ಮಾತನಾಡಿ, ಗೊರೂರು ಸಜ್ಜನ ಮತ್ತು ಹಾಸ್ಯ ಪ್ರವೃತ್ತಿ ಹೊಂದಿದ್ದವರು. ನಾನು ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿದ್ದಾಗ ಗೊರೂರು ಅವರ ಜೊತೆ ಕನಿಷ್ಠ 20 ಜಿಲ್ಲೆಗಳಿಗೆ ಪ್ರವಾಸ ಕೈಗೊಂಡಿದ್ದೆ. ಪ್ರವಾಸದ ಸಂದರ್ಭದಲ್ಲಿ ಅವರು ಸ್ವ-ಅನುಭವನ್ನು ಹಂಚಿಕೊಂಡಿದ್ದರು. ಅವರ ಮಾತಿನ ಮಾಧುರ್ಯದಿಂದ ಪ್ರವಾಸದ ಆಯಾಸ ತಿಳಿಯುತ್ತಿರಲಿಲ್ಲ ಎಂದರು.

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಡಾ. ಮಲ್ಲೇಪುರಂ ಜಿ. ವೆಂಕಟೇಶ ಮಾತನಾಡಿ, ಗೊರೂರು ಅವರು ಚಿಕ್ಕವರು, ದೊಡ್ಡವರು, ಸಮಕಾಲೀನರನ್ನು ತುಂಬು ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ತಮ್ಮನ್ನು ತಾವೇ ಹಾಸ್ಯ ಮಾಡಿಕೊಳ್ಳುತ್ತಿದ್ದರು. ಎಲ್ಲರನ್ನೂ ನಗಿಸುವ ಗುಣ ಹೊಂದಿದ್ದರು. ಅವರ ಬರವಣಿಗೆಯು ರಸಭರಿತೆಯಿಂದ ಕೂಡಿರುತ್ತಿತ್ತು. ಗಾಂಧೀಜಿಯವರ ಸರಳ ಜೀವನವನ್ನು ಅಳವಡಿಸಿ ಅದನ್ನೇ ಪರಿಪಾಠವಾಗಿಸಿಕೊಂಡಿದ್ದರು ಎಂದರು.

ಇದೇ ಸಂದರ್ಭದಲ್ಲಿ ಸಾಹಿತಿಗಳು ಹಾಗೂ ಚಿಂತಕರಾದ ನಾಡೋಜ ಹಂಪ ನಾಗರಾಜಯ್ಯ ಅವರು ಗೊರೂರಿನ ಸತ್ಯಾನ್ವೇಷಕ ರಾಮಸ್ವಾಮಿ ಅಯ್ಯಂಗಾರ್ ಮತ್ತು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಡಾ, ಮಲ್ಲೇಪುರಂ ಜಿ. ವೆಂಕಟೇಶ ಅವರು ಹೇಮಾವತಿಯ ತೀರದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಎಂಬ ಕೃತಿ ಲೋಕಾರ್ಪಣೆ ಮಾಡಿದರು.

ಸಾಹಿತಿಗಳು ಹಾಗೂ ಚಿಂತಕರಾದ ನಾಡೋಜ ಹಂಪ ನಾಗರಾಜಯ್ಯ ಮಾತನಾಡಿ, ಗೊರೂರು ಸಜ್ಜನ ಮತ್ತು ಹಾಸ್ಯ ಪ್ರವೃತ್ತಿ ಹೊಂದಿದ್ದವರು. ನಾನು ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷನಾಗಿದ್ದಾಗ ಗೊರೂರು ಅವರ ಜೊತೆ ಕನಿಷ್ಠ 20 ಜಿಲ್ಲೆಗಳಿಗೆ ಪ್ರವಾಸ ಕೈಗೊಂಡಿದ್ದೆ. ಪ್ರವಾಸದ ಸಂದರ್ಭದಲ್ಲಿ ಅವರು ಸ್ವ-ಅನುಭವನ್ನು ಹಂಚಿಕೊಂಡಿದ್ದರು. ಅವರ ಮಾತಿನ ಮಾಧುರ್ಯದಿಂದ ಪ್ರವಾಸದ ಆಯಾಸ ತಿಳಿಯುತ್ತಿರಲಿಲ್ಲ ಎಂದರು.

ಪ್ರಾಧ್ಯಾಪಕರು ಮತ್ತು ಸಾಹಿತಿಗಳಾದ ಡಾ. ಕಮಲ ನರಸಿಂಹ ಅವರಿಗೆ ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷರಾದ ಡಾ.ಎಸ್.ಜಿ. ಸುಶೀಲಮ್ಮ ಅವರು ಗೊರೂರು ಪ್ರಶಸ್ತಿಯನ್ನು ನೀಡಿ ಗೌರವಿಸಿದರು.

ಕಾರ್ಯಕ್ರಮದಲ್ಲಿ ಪ್ರಾಸ್ತಾವಿಕವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಅವರು ಮಾತನಾಡಿದರು. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಸುಪುತ್ರಿ ವಸಂತಿ ಮೂರ್ತಿ ಗೊರೂರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯರಾದ ಎಸ್.ಆರ್. ವಿಶುಕುಮಾರ್ ಹಾಗೂ ಪದವಿಪೂರ್ವ ಶಿಕ್ಷಣ ಇಲಾಖೆಯ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಹೊಸ ದಿಗಂತ ಮಂಗಳವಾರ, 1 ಆಗಸ್ಟ್ 2023, ಬೆಂಗಳೂರು

# ಗೊರೂರರ ಆದರ್ಶ ಪಾಲಿಸಿ: ವೂಡೇ ಪಿ.ಕೃಷ್ಣ

**ಬೆಂಗಳೂರು:** ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಗಾಂಧೀಜಿಯವರ ಸರಳ ಜೀವನವನ್ನು ಬದುಕಿನಲ್ಲಿ ಅಳವಡಿಸಿ ಕೊಂಡು ಅವರ ತತ್ವಾದರ್ಶಗಳನ್ನು ಪಾಲಿಸಿದ್ದರು.ವಿದ್ಯಾರ್ಥಿಗಳು ಗೊರೂರು ಅವರ ಪುಸ್ತಕಗಳನ್ನು ಓದುವ ಮೂಲಕ ಅವರ ಆದರ್ಶ ಜೀವನವನ್ನು ಪಾಲಿಸಬೇಕು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ತಿಳಿಸಿದರು.

ನಗರದ ಗಾಂಧಿ ಭವನದಲ್ಲಿ ಆಯೋಜಿಸ ಲಾಗಿದ್ದ ಡಾ.ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 119ನೇ ಜನ್ಮ ದಿನಾ ಚರಣೆಯನ್ನು ಉದ್ಘಾಟಿಸಿ ಮಾತನಾಡಿದ ಅವರು, ಗಾಂಧೀಜಿಯವರ ದೇಶಪ್ರೇಮ, ಸತ್ಯ, ಧರ್ಮ, ಅಹಿಂಸೆ ಮುಂತಾದ ಆದರ್ಶ ಗಳನ್ನು ಗೊರೂರು ಅವರು ಜೀವನದಲ್ಲಿ ಅಳವಡಿಸಿಕೊಂಡಿದ್ದರು ಎಂದರು.

ನಾಡೋಜ ಹಂಪಾ ನಾಗರಾಜಯ್ಯ ಅವರುಮಾತನಾಡಿ,ಗೊರೂರುರಾಮಸ್ವಾಮಿ ಅಯ್ಯಂಗಾರ್ ಅವರು ಸಜ್ಜನರಾಗಿದ್ದು, ಹಾಸ್ಯ ಪ್ರವೃತ್ತಿ ಹೊಂದಿದ್ದವರಾಗಿದ್ದರು. ನಾನು ಗೊರೂರು ಅವರ ಜೊತೆ ಕನಿಷ್ಠ 20 ಜಿಲ್ಲೆಗಳಿಗೆ ಪ್ರವಾಸ ಕೈಗೊಂಡಿದ್ದೆ. ಪ್ರವಾಸದ ಸಂದರ್ಭದಲ್ಲಿ ಅವರು ಸ್ವ ಅನುಭವನ್ನು ಹಂಚಿಕೊಂಡಿದ್ದರು ಎಂದರು.



ಇದೇ ಸಂದರ್ಭದಲ್ಲಿ ನಾಡೋಜ ಹಂಪನಾ ಅವರು ಗೊರೂರಿನ ಸತ್ಯಾನ್ವೇಷಕ ರಾಮಸ್ವಾಮಿ ಅಯ್ಯಂಗಾರ್ ಮತ್ತು ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ, ಮಲ್ಲೇಪುರಂ ಜಿ. ವೆಂಕಟೇಶ ಅವರು ಹೇಮಾವತಿಯ ತೀರದಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಎಂಬ ಕೃತಿ ಲೋಕಾರ್ಪಣೆ ಮಾಡಿದರು. ಪ್ರಾಧ್ಯಾಪಕರು ಮತ್ತು ಸಾಹಿತಿಗಳಾದ ಡಾ. ಕಮಲ ನರಸಿಂಹ ಅವರಿಗೆ ಸುಮಂಗಲಿ ಸೇವಾ ಆಶ್ರಮದ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ ಅವರು ಗೊರೂರು ಪ್ರಶಸ್ತಿಯನ್ನು ನೀಡಿ ಗೌರವಿಸಿದರು.

ಈ ಸಂದರ್ಭದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ, ಗೊರೂರು ರಾಮಸ್ವಾಮಿ ಅಯ್ಯಂ ಗಾರ್ ಅವರ ಸುಪುತ್ರಿ ವಸಂತಿ ಮೂರ್ತಿ ಗೊರೂರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸದಸ್ಯ ಎನ್.ಆರ್.ವಿಶ್ವಕುಮಾರ್ ಹಾಗೂ ಪದವಿಪೂರ್ವ ಶಿಕ್ಷಣ ಇಲಾಖೆಯ ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ವಿಜಯ ಕರ್ನಾಟಕ
ಮಂಗಳವಾರ,1 ಆಗಸ್ಟ್ 2023

# ಇಂದು ಶೇಷಾದ್ರಿಪುರ ಕಾಲೇಜಿನಲ್ಲಿ ಪುನಶ್ಚೇತನ ಕಾರ್ಯಕ್ರಮ

**ಬೆಂಗಳೂರು:** ಶೇಷಾದ್ರಿಪುರಂ ಸಂಯುಕ್ತ ಪದವಿ ಪೂರ್ವ ಕಾಲೇಜು ಆ.1ರಂದು ಬೆಳಗ್ಗೆ 9.30ಕ್ಕೆ ಮಲ್ಲೇಶ್ವರದಲ್ಲಿರುವ ಚೌಡಯ್ಯ ಸ್ಮಾರಕ ಸಭಾಂಗಣದಲ್ಲಿ ಪ್ರಥಮ ಪಿಯು ವಿದ್ಯಾರ್ಥಿಗಳಿಗೆ ಪುನಶ್ಚೇತನ ಹಾಗೂ ಪ್ರತಿಭಾ ಪುರಸ್ಕಾರ ಕಾರ್ಯಕ್ರಮ ಆಯೋಜಿಸಿದೆ. ಕಾರ್ಯಕ್ರಮದ ಮುಖ್ಯ ಅತಿಥಿಯಾಗಿ ಪಾವಗಡ ಶ್ರೀರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಜಪಾನಂದಜೀ ಮಹಾರಾಜ್ ಭಾಗವಹಿಸಲಿದ್ದಾರೆ. ಶೇಷಾದ್ರಿಪುರ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ ವಿದ್ಯಾರ್ಥಿಗಳನ್ನು ಅಭಿನಂದಿಸಲಿದ್ದಾರೆ. ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಲಿದ್ದಾರೆ.

ನಂ.1 ವಿಜಯವಾಣಿ
● VIJAYAVANI >> BENGALURU

ಭಾನುವಾರ 23 ಜುಲೈ 2023
23 JULY 2023

ವಿಜಯವಾಣಿ ಚಿತ್ರ



ಸಪ್ನ ಬುಕ್ ಹೌಸ್ ಪ್ರಕಟಿಸಿರುವ 'ಬೆಂಗಳೂರು ಅಂದು-ಇಂದು' ಕೃತಿಯನ್ನು ಉಪಮುಖ್ಯಮಂತ್ರಿ ಡಿ.ಕೆ. ಶಿವಕುಮಾರ್ ಶನಿವಾರ ಬಿಡುಗಡೆ ಮಾಡಿದರು. ಹಿರಿಯ ಸಾಹಿತಿ ಡಾ. ಹಂಪ ನಾಗರಾಜಯ್ಯ, ಶಿಕ್ಷಣ ತಜ್ಞ ಡಾ. ವೂಡೇ. ಪಿ. ಕೃಷ್ಣ, ಸಂಶೋಧಕಿ ಡಾ. ಸ್ಮಿತಾ ರೆಡ್ಡಿ, ಕನ್ನಡ ಪರ ಹೋರಾಟಗಾರ ವ.ಚ. ಚನ್ನೇಗೌಡ, ರಾ.ನಂ. ಚಂದ್ರಶೇಖರ್, ಸಪ್ನದ ಮಾಲೀಕ ನಿತಿನ್ ಷಾ, ಪತ್ರಕರ್ತ ಜೋಗಿ ಮತ್ತಿತರರಿದ್ದರು.

ಉದಯವಾಣಿ ಭಾನುವಾರ, ಜುಲೈ 23, 2023

# ಬೆಂಗಳೂರನ್ನು ಹೊಸದಿಕ್ಕಿಗೆ ಕೊಂಡೊಯ್ಯುವ ಯತ್ನ

**ಬೆಂಗಳೂರು:** ಸಿಲಿಕಾನ್ ಸಿಟಿ ಬೆಂಗಳೂರನ್ನು ಹೊಸ ದಿಕ್ಕಿಗೆ ತೆಗೆದುಕೊಂಡು ಹೋಗುವ ಪ್ರಯತ್ನವನ್ನು ಸರ್ಕಾರ ಮಾಡುತ್ತಿದೆ ಎಂದು ಉಪ ಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ಹೇಳಿದರು.

ಕುಮಾರ ಕೃಪಾ ಅತಿಥಿಗೃಹದಲ್ಲಿ ಶನಿವಾರ ಕನ್ನಡಪರ ಹೋರಾಟಗಾರ ಮತ್ತು ಲೇಖಕ ರಾ.ನಂ. ಚಂದ್ರಶೇಖರ ಮತ್ತು ದೊಡ್ಡೇಗೌಡ ಹೊರತಂದಿರುವ 'ಬೆಂಗಳೂರು ಅಂದು ಇಂದು' ಕೃತಿ ಬಿಡುಗಡೆಗೊಳಿಸಿ ಮಾತನಾಡಿದರು.

ರಾಜಧಾನಿ ಬೆಂಗಳೂರು ಪೂರ್ವಯೋಜಿತ ನಗರವಲ್ಲ, ರಸ್ತೆಗಳು 60-80 ಅಡಿಗಳಿವೆ. 2013ರ ನಂತರ ಈ ರಸ್ತೆಗಳ ಅಗಲೀಕರಣ ಕಷ್ಟವಾಗುತ್ತಿದೆ. ಆ ಹಿನ್ನೆಲೆಯಲ್ಲಿ ಇವತ್ತು ರಾಜಧಾನಿಯಲ್ಲಿ ಸಂಚಾರ ದಟ್ಟಣೆ ಹೆಚ್ಚಿದೆ. ಸಿಡಿಪಿ ಹಾಗೂ ಕಂದಾಯ ವಿಲೀನ ನಂತರ ಬೆಂಗಳೂರಿಗೆ ಹೊಸ ರೂಪ ನೀಡಲು ಪ್ರಯತ್ನ ಮಾಡುತ್ತಿದೆ ಎಂದು ಹೇಳಿದರು.

ಈಗಾಗಲೇ ರಾಜಧಾನಿಯ ಪರಿವರ್ತನೆಗೆ ಸಲಹೆ ಕೇಳಿದ್ದು 70 ಸಾವಿರ ಸಲಹೆ ಬಂದಿವೆ. ಜತೆಗೆ ಮಕ್ಕಳ ಅಭಿಪ್ರಾಯವನ್ನು ಕೂಡ ಸರ್ಕಾರ ಪಡೆಯಲಿದೆ. ಬಳಿಕ ಎಷ್ಟು ಸಾಧ್ಯವೋ ಅಷ್ಟು ಸಲಹೆಗಳನ್ನು ಒಂದೊಂದಾಗಿ ಜಾರಿ ಮಾಡುತ್ತೇವೆ. ತೆರಿಗೆ ಮೂಲಕ 3 ಸಾವಿರ ಕೋಟಿ ಸಂಗ್ರಹವಾಗಿದೆ. ಬೆಂಗಳೂರಿನ ಅಭಿವೃದ್ಧಿಗೆ 8 ಸಾವಿರ ಕೋಟಿ ರೂ.ಮಾತ್ರ ಸಂಪನ್ಮೂಲ ಇದೆ. ಮೆಟ್ರೋ ಸೇರಿದಂತೆ ಇತರೆ ಅಭಿವೃದ್ಧಿ ಕಾಮಗಾರಿಗೆ ಸಾಲ ಪಡೆಯಲಾಗಿದೆ. ಈ 8 ಸಾವಿರ ಕೋಟಿ ರೂ.ನಲ್ಲಿ ಏನೆಲ್ಲಾ ಅಭಿವೃದ್ಧಿ ಕಾರ್ಯಗಳನ್ನು ಮಾಡಬಹುದು ಆ ಕಾರ್ಯ ನಡೆಯಲಿದೆ ಎಂದರು.

ಹಿರಿಯ ಸಾಹಿತಿ ಹಂಪ ನಾಗರಾಜಯ್ಯ ಮಾತನಾಡಿ, 'ಕನ್ನಡ ಭಾಷೆಯ ಅಭಿವೃದ್ಧಿ ಮತ್ತು ರಕ್ಷಣೆ ಬಗ್ಗೆ ಸಲಹೆ ಪಡೆಯಲು ಸಮಿತಿ ರಚನೆ ಮಾಡಬೇಕು. ಆ ಸಮಿತಿ ಅಭಿಪ್ರಾಯ ಪಡೆದು ಕ್ರಮ ಕೈಗೊಳ್ಳಬೇಕು ಎಂದು ಮನವಿ ಮಾಡಿದರು. ಈ ವೇಳೆ ಕನ್ನಡಪರ ಹೋರಾಟಗಾರ ಮತ್ತು ಲೇಖಕ ರಾ. ನಂ ಚಂದ್ರಶೇಖರ್, ನಿವೃತ್ತ ಹಿರಿಯ ಪೊಲೀಸ್ ಅಧಿಕಾರಿಗೆ ಡಾ.ಡಿ.ವಿ.ಗುರುಪ್ರಸಾದ್, ನಿತಿನ್ ಷಾ, ದೊಡ್ಡೇಗೌಡ, ವ.ಚ ಚನ್ನೆಗೌಡ, ಸ್ಮಿತಾ ರೆಡ್ಡಿ ಸೇರಿದಂತೆ ಮತ್ತಿತರರು ಇದ್ದರು.


'ಬೆಂಗಳೂರು ಅಂದು ಇಂದು' ಕೃತಿಯನ್ನು ಡಿಕೆಶಿ ಬಿಡುಗಡೆಗೊಳಿಸಿದರು. ಹಿರಿಯ ಸಾಹಿತಿ ಹಂ.ಪ.ನಾಗರಾಜಯ್ಯ, ನಿವೃತ್ತ ಪೊಲೀಸ್ ಅಧಿಕಾರಿ ಡಿ.ವಿ.ಗುರುಪ್ರಸಾದ್ ಇತರರಿದ್ದರು.

## ಜಲ ಮಂಡಳಿ ಸಿಬ್ಬಂದಿ ವೇತನ ನೀಡಲು ಕಷ್ಟ

ಕುಡಿಯುವ ನೀರು ಪೂರೈಕೆ ವಿಚಾರದಲ್ಲಿ ಶೇ.32ರಷ್ಟು ನೀರು ಪೋಲಾಗುತ್ತಿದೆ. 2014ರಲ್ಲಿ ನೀರಿನ ದರ ಪರಿಷ್ಕರಣೆ ಆಗಿದ್ದು ನಂತರ ಆಗಿಲ್ಲ. ಜಲಮಂಡಳಿಯ ಸಿಬ್ಬಂದಿಗೆ ವೇತನ ನೀಡಲು ಸಾಧ್ಯವಾಗುತ್ತಿಲ್ಲ. ಅನೇಕ ರೀತಿಯ ಆಂತರಿಕ ಸಮಸ್ಯೆಗಳು ಎದುರಿಸುತ್ತಿದೆ.ಬೆಂಗಳೂರನ್ನು ಯಾವುದೇ ಸರ್ಕಾರ ಬೆಳೆಸುತ್ತಿಲ್ಲ, ಇಲ್ಲಿನ ವಾತಾವರಣಕ್ಕೆ ಜನ ವಲಸೆ ಬಂದು ಬೆಳೆಯುತ್ತಿದೆ. ಇದಕ್ಕೆ ಒಂದು ಸ್ವರೂಪ ನೀಡಬಹುದು. ಇದಕ್ಕಾಗಿ ನಾನು ವಿವಿಧ ಕ್ಷೇತ್ರದ ಸಲಹೆ ಪಡೆಯುತ್ತಿರುವುದಾಗಿ ಡಿ.ಕೆ. ಶಿವಕುಮಾರ್ ತಿಳಿಸಿದರು.

## ಬೆಂಗಳೂರಿಗೆ ಬಂದವರು ವಾಪಸ್ ಹೋಗುವುದಿಲ್ಲ

ಬೆಂಗಳೂರಿಗೆ ಬರುವ ಜನ ಮತ್ತೆ ವಾಪಸ್ ಹೋಗುವುದಿಲ್ಲ. 30 ಲಕ್ಷ ಇದ್ದ ಜನಸಂಖ್ಯೆ ಇದೀಗ 1.30 ಕೋಟಿ ಆಗಿದೆ. ಇದರಲ್ಲಿ ಕೇವಲ ಶೇ.40ರಷ್ಟು ಮಂದಿಗೆ ಕುಡಿಯಲು ಕಾವೇರಿ ನೀರು ಪೂರೈಕೆಯಾಗುತ್ತಿದೆ. ಬೆಂಗಳೂರಿನ ಶಿಕ್ಷಣದ ಗುಣಮಟ್ಟ ಉತ್ತಮವಾಗಿದೆ. ಅಧಿಕ ಸಂಖ್ಯೆಯಲ್ಲಿ ಎಂಜಿನಿಯರ್, ವೈದ್ಯರು ಮತ್ತು ತಂತ್ರಜ್ಞರು ತಯಾರಾಗುತ್ತಿದ್ದು, ಆದರೂ ನಿರುದ್ಯೋಗ ಪ್ರಮಾಣ ಇದೆ. ಇದಕ್ಕಾಗಿ ಹಳ್ಳಿಗಳಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಹಾಗೂ ಎರಡು ಮೂರನೇ ಹಂತದ ನಗರಗಳಲ್ಲಿ ಕೈಗಾರಿಕೆಗೆ ಆದ್ಯತೆ ನೀಡಲಾಗುವುದು ಎಂದು ಡಿಕೆಶಿ ಹೇಳಿದರು.

ಈ ಸಂಜೆ

Jul 23, 2023



ಸಾಹಿತಿಗಳಾದ ರಾ.ನಂ. ಚಂದ್ರಶೇಖರ್ ಹಾಗೂ ದೊಡ್ಡೆಗೌಡ ರಂಗೇಗೌಡರು ರಚಿಸಿರುವ ಬೆಂಗಳೂರು ಅಂದು-ಇಂದು ಕೃತಿಯನ್ನು ಉಪಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ಬಿಡುಗಡೆ ಮಾಡಿದರು. ಸಾಹಿತಿಗಳಾದ ಹಂಪ ನಾಗರಾಜಯ್ಯ, ನಾಡೋಜ, ಡಾ. ವೂಡೇ ಪಿ. ಕೃಷ್ಣ, ನಿತೀನ್ ಷಾ, ಡಾ. ಗುರುಪ್ರಸಾದ್, ವಾ.ಚ. ಚನ್ನೇಗೌಡ, ಜೋಗಿ, ರಮೇಶ್ ಬಾಬು, ಡಾ. ಸ್ಮಿತಾ ರೆಡ್ಡಿ, ರಮೇಶ್ ಶೆಟ್ಟಿ ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಶುಕ್ರವಾರ 21 ಜುಲೈ 2023
VIJAYAVANI » 21 JULY 2023

# ವಚನ ಮೌಲ್ಯಗಳಿಂದ ಬದುಕಿನಲ್ಲಿ ಸಂತೋಷ

## ಡಾ. ವೂಡೇ ಪಿ. ಕೃಷ್ಣ ಅಭಿಮತ । ವಚನ ಕಲಿ ನಲಿ- ತರಗತಿಗಳಲ್ಲಿ ವಚನ ಬಿತ್ತನೆ

**ಬೆಂಗಳೂರು:** ಕನ್ನಡದ ಸಾಂಸ್ಕೃತಿಕ ಸಂಪತ್ತು ಎನಿಸಿಕೊಂಡಿರುವ ವಚನಗಳ ಮೌಲ್ಯವನ್ನು ಅರಿತುಕೊಂಡರೆ ಬದುಕಿನಲ್ಲಿ ಸಂತೋಷ ಕಾಣಬಹುದು ಎಂದು ಶಿಕ್ಷಣತಜ್ಞ ಡಾ. ವೂಡೇ ಪಿ. ಕೃಷ್ಣ ಹೇಳಿದ್ದಾರೆ.

ವಚನಜ್ಯೋತಿ ಬಳಗ ನಾಗರಬಾವಿಯ ಆರ್ಯನ್ ಪ್ರೆಸಿಡೆನ್ಸಿ ಶಾಲೆಯಲ್ಲಿ ಆಯೋಜಿಸಿದ್ದ 'ವಚನ ಕಲಿ ನಲಿ- ತರಗತಿಗಳಲ್ಲಿ ವಚನ ಬಿತ್ತನೆ' ಸಾಂಸ್ಕೃತಿಕ ಪಯಣವನ್ನು ಉದ್ಘಾಟಿಸಿ ಮಾತನಾಡಿದರು. 25 ವರ್ಷಗಳಿಂದ ವಚನಗಳ ಬೆಳಕು ಹಬ್ಬಿಸುವ ಕಾರ್ಯ ನಡೆಸುತ್ತಿರುವ ವಚನಜ್ಯೋತಿ ಬಳಗ, ಇದೀಗ ತರಗತಿ ನಡೆಸಿ ವಚನ ಬೋಧಿಸುತ್ತಿರುವುದು ಶ್ಲಾಘನೀಯ. ಇದರಿಂದ ಉತ್ತಮ ಸಮಾಜ ನಿರ್ಮಾಣ ಸಾಧ್ಯವಿದೆ ಎಂದರು.



ನಾಗರಬಾವಿಯ ಆರ್ಯನ್ ಪ್ರೆಸಿಡೆನ್ಸಿ ಶಾಲೆಯಲ್ಲಿ ಆಯೋಜಿಸಿದ್ದ 'ವಚನ ಕಲಿ ನಲಿ- ತರಗತಿಗಳಲ್ಲಿ ವಚನ ಬಿತ್ತನೆ' ಕಾರ್ಯಕ್ರಮದ ಉದ್ಘಾಟನೆ ವೇಳೆ ಡಾ. ವೂಡೇ ಪಿ. ಕೃಷ್ಣ, ಎಸ್. ಪಿನಾಕಪಾಣಿ, ಮಹೇಶ ಬೆಲ್ಲದ, ಗುರುಪ್ರಸಾದ ಕುಬ್ಚಂಗಿ ಇತರರಿದ್ದರು.

ವಚನಜ್ಯೋತಿ ಬಳಗದ ಅಧ್ಯಕ್ಷ ಎಸ್. ಪಿನಾಕಪಾಣಿ ಮಾತನಾಡಿ, ವಚನ ಚಳವಳಿಯ ಆಧುನಿಕ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ತರಗತಿಗಳಲ್ಲಿ ವಚನಗಳನ್ನು ಬೋಧಿಸುವ ಕಾರ್ಯ ಆರಂಭ ಮಾಡಿದ್ದೇವೆ. ಇದಕ್ಕಾಗಿ ಕನ್ನಡ ಪಠ್ಯಪುಸ್ತಕ ಮಾದರಿಯಲ್ಲಿ ವಚನಗಳನ್ನು ಮುದ್ರಿಸಿ ಅಭ್ಯಾಸ ಪುಸ್ತಕವಾಗಿ ಸಿದ್ಧಗೊಳಿಸಲಾಗಿದೆ. ಈಗಾಗಲೆ ಹಲವು ಶಾಲೆಗಳು ವಚನ ಬೋಧನೆಗೆ ಆಹ್ವಾನಿಸಿದ್ದು, ಮುಂದಿನ ದಿನಗಳಲ್ಲಿ ರಾಜ್ಯಾದ್ಯಂತ ಅಭಿಯಾನ ಕೈಗೊಳ್ಳಲಾಗುವುದು ಎಂದು ತಿಳಿಸಿದರು. ವಚನಜ್ಯೋತಿ ಬಳಗದ ಪದಾಧಿಕಾರಿಗಳಾದ ಮಹೇಶ ಬೆಲ್ಲದ, ಗುರುಪ್ರಸಾದ ಕುಬ್ಚಂಗಿ, ಪ್ರಭು ಇಸುವನಹಳ್ಳಿ ಮತ್ತಿತರರು ಉಪಸ್ಥಿತರಿದ್ದರು.

## ವಚನ ಬಿತ್ತನೆ ಸಾಂಸ್ಕೃತಿಕ ಪಯಣದಲ್ಲಿ ನಾಡೋಜ ಡಾ. ವೂಡೇ ಪಿ. ಕೃಷ್ಣ ಅಭಿಮತ

# ವಚನಗಳು ಬದುಕಿಗೆ ಬುನಾದಿ

**ಬೆಂಗಳೂರು:** ವಚನ ಕಲಿಕೆಯಿಂದ ಬದುಕು ನಲಿವಾಗುತ್ತದೆ ಎಂದು ನಾಡೋಜ ಡಾ. ವೂಡೇ ಪಿ. ಕೃಷ್ಣ ಹೇಳಿದ್ದಾರೆ.

ವಚನಜ್ಯೋತಿ ಬಳಗ ನಾಗರಬಾವಿಯ ಆರ್ಯನ್ ಪ್ರೆಸಿಡೆನ್ಸಿ ಶಾಲೆಯಲ್ಲಿ ಆಯೋಜಿಸಿದ್ದ ವಚನ ಕಲಿ ನಲಿ – ತರಗತಿಗಳಲ್ಲಿ ವಚನ ಬಿತ್ತನೆ ಸಾಂಸ್ಕೃತಿಕ ಪಯಣವನ್ನು ಉದ್ಘಾಟಿಸಿ ಮಾತನಾಡಿ, ಕನ್ನಡದ ಸಾಂಸ್ಕೃತಿಕ ಸಂಪತ್ತಾದ ವಚನಗಳನ್ನು ಕಲಿತರೆ ಬದುಕಿನಾದ್ಯಂತ ಸಂತೋಷದಿಂದ ಇರಬಹುದು. 25 ವರ್ಷಗಳಿಂದ ವಚನದ ಮೂಲಕ ಕನ್ನಡ ಚಟುವಟಿಕೆಗಳನ್ನು ನಡೆಸುತ್ತಿರುವ ವಚನಜ್ಯೋತಿ ಬಳಗವು ಇದೀಗ ತರಗತಿಗಳಲ್ಲಿ ವಚನ ಬಿತ್ತನೆಗೆ ಹೊರಟಿರುವುದು ಎಲ್ಲರಿಗೂ ಮಾದರಿಯಾಗಿದ್ದು, ಇದರಿಂದ ಉತ್ತಮ ಸಮಾಜ ನಿರ್ಮಾಣ ನಿರೀಕ್ಷಿಸಬಹುದು ಎಂದು ಅಭಿಪ್ರಾಯಪಟ್ಟರು.

ವಚನಜ್ಯೋತಿ ಬಳಗದ ಅಧ್ಯಕ್ಷ ಎಸ್.ಪಿನಾಕಪಾಣಿ ಮಾತನಾಡಿ, ವಚನ ಚಳವಳಿಯ ಆಧುನಿಕ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ತರಗತಿಗಳಲ್ಲಿ ವಚನಗಳನ್ನು ಪಠ್ಯ ಕ್ರಮದಲ್ಲಿ ಬೋಧಿಸುವ ಕಾರ್ಯ ಆರಂಭವಾಗಿದ್ದು, ಇದಕ್ಕಾಗಿ ಕನ್ನಡ ಪಠ್ಯಪುಸ್ತಕದಂತೆ ವಚನ ಪಠ್ಯವನ್ನು ಅಭ್ಯಾಸ ಪಠ್ಯಪುಸ್ತಕವಾಗಿ ಸಿದ್ಧಗೊಳಿಸಲಾಗಿದೆ ಎಂದು ಹೇಳಿದರು.

ಆರ್ಯನ್ ಪ್ರೆಸಿಡೆನ್ಸಿ ಶಾಲೆಯ ಮಕ್ಕಳು ವಚನಕಾರರ ವೇಷ ಧರಿಸಿ ವಚನಗಳನ್ನು ಹಾಡಿ ನೃತ್ಯ ಮಾಡಿದರು.

ಇದೇ ಸಂದರ್ಭದಲ್ಲಿ ಬೆಂಗಳೂರು ವಿವಿಯಿಂದ ಗೌರವ ಡಾಕ್ಟರೇಟ್ ಪುರಸ್ಕೃತ ನಾಡೋಜ ಡಾ.ವೂಡೇ. ಪಿ. ಕೃಷ್ಣ ಮತ್ತು ಶಾಲೆಯ ಮುಖ್ಯಸ್ಥ ಎ.ಎ. ಕುದ್ರೋಳಿ ಅವರನ್ನು ಅಭಿನಂದಿಸಲಾಯಿತು. ವಚನಜ್ಯೋತಿ ಬಳಗದ ಪದಾಧಿಕಾರಿಗಳಾದ ಮಹೇಶ ಬೆಲ್ಲದ, ಗುರುಪ್ರಸಾದ ಕುಚ್ಚಂಗಿ, ಪ್ರಭು ಇಸುವನಹಳ್ಳಿ, ರಾಜಾ ಗುರುಪ್ರಸಾದ್, ರುದ್ರಪ್ಪ ದೇಸಾಯಿ, ಅನೀಲ ಹಾರಕೂಡೆ, ಗುಂಡೀಗೆರೆ ವಿಶ್ವನಾಥ್, ಶಕುಂತಲ ಬಾಗಲಕೋಟ, ರತ್ನಾ ದೇಸಾಯಿ, ವಿದ್ಯಾಶ್ರೀ ಹಾರಕೂಡೆ, ವೀರಯೋಧ ಗಂಗಾಧರ್, ಶಾಲೆಯ ಪ್ರಾಂಶುಪಾಲೆ ಗುಲ್ಜಾರ್ ಬೇಗಮ್, ನಿರ್ದೇಶಕ ರಾಣಾ, ಶಿಕ್ಷಕ ವೀರೇಶ್ ಇದ್ದರು.



ವಚನಜ್ಯೋತಿ ಬಳಗ ಆಯೋಜನೆಯ ವಚನ ಕಲಿ ನಲಿ – ತರಗತಿಗಳನ್ನು ಉದ್ಘಾಟನೆಯನ್ನು ನಾಡೋಜ ಡಾ. ವೂಡೇ ಪಿ. ಕೃಷ್ಣ ನೆರವೇರಿಸಿದರು. ಈ ವೇಳೆ ವಚನಜ್ಯೋತಿ ಬಳಗದ ಎಸ್. ಪಿನಾಕಪಾಣಿ, ಆರ್ಯನ್ ಪ್ರೆಸಿಡೆನ್ಸಿ ಶಾಲೆಯ ಎ.ಎ. ಕುದ್ರೋಳಿ, ಉದ್ಯಮಿ ಮಹೇಶ ಬೆಲ್ಲದ ಇದ್ದರು.



ಈಗಾಗಲೇ ಹಲವಾರು ಶಾಲೆಗಳು ವಚನ ಬಿತ್ತನೆಗೆ ಆಮಂತ್ರಿಸಿದ್ದು, ಮುಂದಿನ ದಿನಗಳಲ್ಲಿ ರಾಜ್ಯಾದ್ಯಂತ ತರಗತಿಗಳಲ್ಲಿ ವಚನ ಕಲಿ ನಲಿಯ ಮೂಲಕ ವಚನ ಬಿತ್ತನೆ ನಡೆಸಲಾಗುವುದು.

-ಎಸ್.ಪಿನಾಕಪಾಣಿ,
ವಚನಜ್ಯೋತಿ ಬಳಗದ ಅಧ್ಯಕ್ಷ

ಪ್ರಜಾವಾಣಿ

ಬುಧವಾರ • ಜುಲೈ 12, 2023



ಬೆಂಗಳೂರು ನಗರ ವಿಶ್ವವಿದ್ಯಾಲಯದ ಎರಡನೇ ವಾರ್ಷಿಕ ಘಟಿಕೋತ್ಸವದಲ್ಲಿ ಪ್ರೆಸಿಡೆನ್ಸಿ ವಿಶ್ವವಿದ್ಯಾಲಯದ ಕುಲಪತಿ ನಿಸ್ಸಾರ್ ಅಹಮದ್, ಶೇಷಾದ್ರಿಪುರ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೆ ಪಿ. ಕೃಷ್ಣ ಮತ್ತು ಲೇಖಕಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು. ಡೀನ್ ಪ್ರೊ. ಹರಿಪ್ರಸಾದ್, ಕುಲಪತಿ ಪ್ರೊ. ಲಿಂಗರಾಜ ಗಾಂಧಿ, ರಾಜ್ಯಪಾಲ ಥಾವರ್ ಚಂದ್ ಗೆಹಲೋತ್, ಡಾ.ಸಿ.ಎನ್.ಮಂಜುನಾಥ್, ಪ್ರೊ. ವಿ. ಲೋಕೇಶ್ ಇದ್ದರು.

ಕನ್ನಡಪ್ರಭ ಮಂಗಳವಾರ 11.7.2023

# 25 ವರ್ಷ ಭಾರತಕ್ಕೆ ಅಮೃತ ಕಾಲ: ರಾಜ್ಯಪಾಲ

## ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ಘಟಿಕೋತ್ಸವ | ನಿಸಾರ್, ವೂಡೇಕೃಷ್ಣ, ತಾರಿಣಿ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ



ಬೆಂಗಳೂರು ನಗರ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್‌ಗೆ ಭಾಜನರಾದ ನಿಸಾರ್ ಅಹಮದ್, ವೂಡೇ ಪಿ. ಕೃಷ್ಣ, ತಾರಿಣಿ ಚಿದಾನಂದ ಅವರನ್ನು ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್ ಅಭಿನಂದಿಸಿದರು. ಡಾ| ಸಿ.ಎನ್.ಮಂಜುನಾಥ್, ಲಿಂಗರಾಜು ಗಾಂಧಿ ಹಾಜರಿದ್ದರು.

### ಸಂಶೋಧನೆಗೆ ಅನುದಾನ ಸಾಲದು: ಡಾ| ಮಂಜುನಾಥ್ ಅಸಮಾಧಾನ

ನಿಧಿಯ ಕೊರತೆಯಿಂದಾಗಿ ಬಹುತೇಕ ಎಲ್ಲ ವಿವಿಗಳಲ್ಲಿ ಸಂಶೋಧನಾ ಕಾರ್ಯಗಳಿಗೆ ಹಿನ್ನಡೆ ಉಂಟಾಗಿದೆ. ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯ ಅನುದಾನ ಆಯೋಗವು ಸಾಕಷ್ಟು ಅನುದಾನ ನೀಡಬೇಕು ಎಂದು ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ.ಸಿ.ಎನ್. ಮಂಜುನಾಥ್ ಒತ್ತಾಯಿಸಿದರು. ವಿದ್ಯಾರ್ಥಿಗಳು ಪದವಿ, ಪದಕ ಪಡೆದರೆ ಮಾತ್ರ ಸಾಲದು. ಜ್ಞಾನದ ಜೊತೆಗೆ ಸಂಸ್ಕಾರ, ವಿವೇಕ, ಮಾನವೀಯತೆ ಬೆಳೆಸಿಕೊಳ್ಳಬೇಕು. ಇಂದು ಅನೇಕ ವಿದ್ಯಾವಂತರು ದುಷ್ಕೃತ್ಯಗಳಲ್ಲಿ ತೊಡಗಿಕೊಳ್ಳುತ್ತಿರುವುದು ಕಳವಳಕಾರಿ. ನಮ್ಮ ಬುದ್ಧಿವಂತಿಕೆಯನ್ನು ರಚನಾತ್ಮಕ ಉದ್ದೇಶಗಳಿಗೆ ಬಳಸಬೇಕು. ಸೋಲುಗಳಿಗೆ ಎದೆಗುಂದಬೇಡಿ. ಆತ್ಮ ವಿಶ್ವಾಸ, ನಂಬಿಕೆ, ಕಠಿಣ ಪರಿಶ್ರಮದಿಂದ ಏನನ್ನು ಬೇಕಾದರೂ ಸಾಧಿಸಬಹುದು ಎಂದು ಸಲಹೆ ನೀಡಿದರು.



ತಲಾ ಮೂರು ಚಿನ್ನದ ಪದಕಕ್ಕೆ ಭಾಜನರಾಗಿರುವ ಪದ್ಮಾವತಿ ವಿ.ಕೆ.ನಾಯರ್, ಎಂ.ಅಜಿತ್‌ಕುಮಾರ್, ಎಸ್.ದೀಪ್ತಿ ಅವರು ರಾಜ್ಯಪಾಲರಿಂದ ಪದಕ ಸ್ವೀಕರಿಸಿ ಸಂತಸ ವ್ಯಕ್ತಪಡಿಸಿದರು.

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಭವ್ಯ ಭಾರತ ನಿರ್ಮಿಸಲು ಮುಂದಿನ 25 ವರ್ಷ ಅಮೃತ ಕಾಲವಾಗಿದ್ದು, ಇದರಲ್ಲಿ ನಾವೆಲ್ಲರೂ ಪಾಲುದಾರರಾಗಬೇಕು ಎಂದು ರಾಜ್ಯಪಾಲ ಥಾವರ್ ಚಂದ್ ಗೆಹಲೋತ್ ಅಭಿಪ್ರಾಯಪಟ್ಟರು.

ಜ್ಞಾನಜ್ಯೋತಿ ಸಭಾಂಗಣದಲ್ಲಿ ಆಯೋಜಿಸಿದ್ದ ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ಸ್ವಾತಂತ್ರ್ಯದ 75 ವರ್ಷದಲ್ಲಿ ದೇಶವು ಎಲ್ಲಾ ಕ್ಷೇತ್ರಗಳಲ್ಲಿ ಅಭೂತಪೂರ್ವ ಪ್ರಗತಿ ಸಾಧಿಸಿದ್ದು ಆರ್ಥಿಕತೆಯೂ ಬಲಗೊಂಡಿದೆ. ವಿಶ್ವದ 5 ನೇ ಅತಿ ದೊಡ್ಡ ಆರ್ಥಿಕತೆ ನಮ್ಮದಾಗಿದ್ದು ಭವ್ಯ ಭಾರತ ನಿರ್ಮಿಸಲು ಇನ್ನು 25 ವರ್ಷ ಅಮೃತ ಕಾಲವಾಗಿದೆ. ಇದರಲ್ಲಿ ನಾವೆಲ್ಲರೂ ಭಾಗಿಯಾಗಿ ನಮ್ಮ ಕರ್ತವ್ಯ ನಿರ್ವಹಿಸೋಣ ಎಂದು ಕರೆ ನೀಡಿದರು.

ದೇಶದ ಸರ್ವತೋಮುಖ ಅಭಿವೃದ್ಧಿಗಾಗಿ ಶಿಕ್ಷಣದಲ್ಲಿ ಮಾನವೀಯ ಮೌಲ್ಯಗಳನ್ನು ಸೇರ್ಪಡೆ ಮಾಡುವುದು ಶಿಕ್ಷಣ ತಜ್ಞರು, ನೀತಿ ನಿರೂಪಕರು, ಸಮಾಜದ ಜವಾಬ್ದಾರಿಯಾಗಿದೆ. ವಿಶ್ವವಿದ್ಯಾನಿಲಯಗಳು ಆರೋಗ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಪರಿಹರಿಸುತ್ತಿದ್ದು ವಿಶೇಷವಾಗಿ ಬಡವರು, ಅತ್ಯಂತ ದುರ್ಬಲರು ಹಾಗೂ ನಮ್ಮ ಪರಿಸರದ ಕಾಳಜಿಗೆ ಆದ್ಯತೆ ನೀಡಬೇಕು ಎಂದು ಸಲಹೆ ನೀಡಿದರು.

ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್‌ಗೆ ಭಾಜನರಾದ ಪ್ರೆಸಿಡೆನ್ಸಿ ವಿವಿ ಕುಲಾಧಿಪತಿ ನಿಸಾರ್ ಅಹಮದ್(ಶಿಕ್ಷಣ), ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ(ಸಮಾಜ ಸೇವೆ), ರಾಷ್ಟ್ರಕವಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ (ಸಾಹಿತ್ಯ ಕ್ಷೇತ್ರ) ಅವರನ್ನು ಅಭಿನಂದಿಸಿದ ರಾಜ್ಯಪಾಲರು, ನಿಮ್ಮ ಸಮಾಜಮುಖಿ ಕಾರ್ಯಗಳು ನಿರಂತರವಾಗಿರಲಿ ಎಂದು ಆಶಿಸಿದರು. ಪದವಿ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೂ ಇದೇ ಸಂದರ್ಭದಲ್ಲಿ ಶುಭ ಕೋರಿದರು.

ವಿವಿ ಕುಲಪತಿ ಲಿಂಗರಾಜು ಗಾಂಧಿ ಮಾತನಾಡಿ, 38 ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕ ಒಳಗೊಂಡಂತೆ ವಿವಿಯ 29,914 ಸ್ನಾತಕ, 5997 ಸ್ನಾತಕೋತ್ತರ ಸೇರಿದಂತೆ ಒಟ್ಟು 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಗುವುದು. ಇದರಲ್ಲಿ 21,239 ವಿದ್ಯಾರ್ಥಿನಿಯರು, 14,672 ವಿದ್ಯಾರ್ಥಿಗಳಿದ್ದಾರೆ. 61 ವಿದ್ಯಾರ್ಥಿಗಳು ರ್‍ಯಾಂಕ್ ಪಡೆದಿದ್ದಾರೆ. ಹೊಸ ವಿವಿ ಆಗಿರುವುದರಿಂದ ವಿಶ್ವವಿದ್ಯಾಲಯವೇ 38 ಚಿನ್ನದ ಪದಕ ಮತ್ತು ದಾನಿಗಳು 13 ಚಿನ್ನದ ಪದಕ ನೀಡುತ್ತಿದ್ದಾರೆ ಎಂದು ಮಾಹಿತಿ ನೀಡಿದರು.

ಸೆಂಟ್ರಲ್ ಕಾಲೇಜಿನ ಎಂಎಸ್ಸಿ ರಸಾಯನಶಾಸ್ತ್ರ ವಿಭಾಗದ ಪದ್ಮಾವತಿ ವಿ.ಕೆ.ನಾಯರ್, ಕೃಪಾನಿಧಿ ಕಾಲೇಜಿನ ಬಿಕಾಂ ವಿಭಾಗದ ಎಂ.ಅಜಿತ್‌ಕುಮಾರ್, ಶೇಷಾದ್ರಿಪುರಂ ಕಾಲೇಜಿನ ಬಿಬಿಎ ವಿದ್ಯಾರ್ಥಿನಿ ಎಸ್.ದೀಪ್ತಿ ತಲಾ 3 ಚಿನ್ನದ ಪದಕಕ್ಕೆ ಭಾಜನರಾಗಿದ್ದು ಪ್ರಮುಖರಾಗಿದ್ದಾರೆ.

### ವಿದ್ಯಾರ್ಥಿಗಳಿಗೆ ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಕಿವಿಮಾತು | ರಾಷ್ಟ್ರದ ಅಭಿವೃದ್ಧಿಗೆ ಪಾಲುದಾರರಾಗಿ

# ಶಿಕ್ಷಣದಲ್ಲಿ ಜಾತಿ ಪಂಥಗಳಿಂದ ದೂರವಿರಿ



ಬೆಂಗಳೂರು ನಗರ ವಿವಿ ಘಟಿಕೋತ್ಸವದಲ್ಲಿ ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್ ಅವರು ಮೂವರು ಸಾಧಕರಿಗೆ ಡಾಕ್ಟರೇಟ್ ನೀಡಿ ಗೌರವಿಸಿದರು.

## ಚಿನ್ನದ ವಿದ್ಯಾರ್ಥಿಗಳ ಚೆಂದದ ಮಾತು

ಎಂಎಸ್ಸಿ ರಸಾಯನ ಶಾಸ್ತ್ರದಲ್ಲಿ ಮೂರು ಚಿನ್ನದ ಪದಕ ಪಡೆದಿರುವುದು ನನಗೆ ಖುಷಿ ನೀಡಿದೆ. ಶಿಕ್ಷಣ ಕ್ಷೇತ್ರದಲ್ಲಿಯೇ ನಾನು ಮುಂದುವರೆಯುತ್ತೇನೆ. ಶಿಕ್ಷಣದಿಂದ ವಂಚಿತರಾಗಿರುವವರಿಗೆ ಬೋಧನೆ ಮಾಡುವ ಆಸೆ ಇದೆ.

■ ಪದ್ಮಾವತಿ ನಾಯರ್ | ವಿಜ್ಞಾನ ವಿಭಾಗದಲ್ಲಿ 3 ಚಿನ್ನದ ಪದಕ

ನನಗೆ ಇದು ನಿರೀಕ್ಷೆ ಇರಲಿಲ್ಲ. ಸತತ ಅಧ್ಯಯನ ಮಾಡುತ್ತಿದ್ದೆ. ಹಿಂದೆ ಗುರುಗಳು ಇದ್ದರು ಮುಂದೆ ಗುರಿ ಇತ್ತು. ನನಗೆ ವಾಣಿಜ್ಯಶಾಸ್ತ್ರ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಮಾಡುವ ಆಸೆ ಇದೆ.

■ ಅಜಿತ್ ಕುಮಾರ್ | ವಾಣಿಜ್ಯಶಾಸ್ತ್ರದಲ್ಲಿ 3 ಚಿನ್ನದ ಪದಕ

ನನಗೆ ಚಿನ್ನದ ಪದಕಗಳು ಲಭಿಸಿರುವುದಕ್ಕೆ ನನ್ನ ಸತತ ಅಧ್ಯಯನವೇ ಕಾರಣ. ಶಿಕ್ಷಕ ಮತ್ತು ಪ್ರೋತ್ಸಾಹದಿಂದ ನನಗೆ ಈ ಸಾಧನೆ ಸಾಧ್ಯವಾಯಿತು.

■ ಎಸ್. ದೀಪ್ತಿ | [illegible] 3 ಚಿನ್ನದ ಪದಕ



ಸಂ.ಕ.ಸಮಾಚಾರ, ಬೆಂಗಳೂರು

ಜಾತಿ ಮತ, ಪಂಥಗಳನ್ನು ದೂರವಿಟ್ಟು ಶಿಕ್ಷಣದ ಮೂಲಕ ಗುರಿ ಸಾಧಿಸಿ ವಿದ್ಯಾರ್ಥಿಗಳು ರಾಷ್ಟ್ರದ ಅಭಿವೃದ್ಧಿಯಲ್ಲಿ ಪಾಲುದಾರರಾಗಬೇಕೆಂದು ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಕರೆ ನೀಡಿದರು.

ಬೆಂಗಳೂರು ನಗರ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಹಾಗೂ ರ್‍ಯಾಂಕ್ ಪ್ರಶಸ್ತಿ ಪ್ರಮಾಣ ಪತ್ರ ವಿತರಿಸಿ ಮಾತನಾಡಿದ ಅವರು, ನಮ್ಮ ದೇಶದ ಅನೇಕ ಹಳ್ಳಿಗಳು ಶಿಕ್ಷಣದ ಕೊರತೆಯಿಂದ ಹಿಂದುಳಿದಿವೆ ಆದ್ದರಿಂದ ಶಿಕ್ಷಣದಿಂದ ಎಲ್ಲವನ್ನೂ ಸಾಧಿಸಲು ಸಾಧ್ಯವಾಗುತ್ತದೆ ಎಂದು ಹೇಳಿದರು.

ಜಯದೇವ ಹೃದ್ರೋಗ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ.ಸಿ.ಎನ್.ಮಂಜುನಾಥ್ ಮಾತನಾಡಿ, ಇಂದು ನೀವೆಲ್ಲರೂ ಪದಕಗಳು, ಪ್ರಶಸ್ತಿಗಳು, ಪ್ರಮಾಣಪತ್ರಗಳು ಮತ್ತು ಪದವಿಗಳನ್ನು ಸ್ವೀಕರಿಸುತ್ತಿದ್ದೀರಿ. ಪದವಿಗಳು, ಪದಕಗಳು, ರ್‍ಯಾಂಕ್‌ಗಳನ್ನು ಪಡೆಯುವುದು ಮಾತ್ರ ಸಾಕಾಗುವುದಿಲ್ಲ. ವಿದ್ಯಾರ್ಥಿಗಳು ಜ್ಞಾನದ ಜೊತೆಗೆ ಉತ್ತಮ ಸಂಸ್ಕಾರ, ವಿವೇಕ, ಮಾನವೀಯತೆ, ಸಾಮಾನ್ಯಜ್ಞಾನ ಮತ್ತು ಉತ್ತಮ ನಡವಳಿಕೆಯನ್ನು ಬೆಳೆಸಿಕೊಳ್ಳುವುದು ಅಷ್ಟೇ ಮುಖ್ಯ ಎಂದರು.

ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಲಿಂಗರಾಜ ಗಾಂಧಿ ಮಾತನಾಡಿ, 5,997 ಸ್ನಾತಕೋತ್ತರ ವಿದ್ಯಾರ್ಥಿಗಳು ಸೇರಿದಂತೆ 35,911 ವಿದ್ಯಾರ್ಥಿಗಳು ಪದವಿಗೆ ಅರ್ಹರಾಗಿದ್ದಾರೆ. ಹೊಸದಾಗಿ ಸ್ಥಾಪಿತವಾದ ವಿಶ್ವವಿದ್ಯಾಲಯವಾದ ಕಾರಣ ವಿಶ್ವವಿದ್ಯಾಲಯವೇ 38 ಚಿನ್ನದ ಪದಕ ನೀಡುತ್ತಿದೆ. ದಾನಿಗಳು 13 ಚಿನ್ನದ ಪದಕ ಸ್ಥಾಪಿಸಿದ್ದಾರೆಂದು ತಿಳಿಸಿದರು. ವಿವಿ ಕುಲಸಚಿವ ಸಿ.ಎನ್.ಶ್ರೀಧರ್, ಮೌಲ್ಯಮಾಪನ ಕುಲಸಚಿವ ವಿ.ಲೋಕೇಶ್ ಮತ್ತಿತರರಿದ್ದರು.

## ಸಾಧಕರಿಗೆ ಸನ್ಮಾನ

ಪ್ರೆಸಿಡೆನ್ಸಿ ಗ್ರೂಪ್ ಆಫ್ ಇನ್ಸ್‌ಟಿಟ್ಯೂಷನ್ ಅಧ್ಯಕ್ಷ ನಿಸಾರ್ ಅಹಮದ್, ಶಿಕ್ಷಣ ತಜ್ಞ ಡಾ. ವೂಡೇ ಪಿ. ಕೃಷ್ಣ ಹಾಗೂ ಸಾಹಿತಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಲಾಯಿತು.

ನಮ್ಮ ಬೆಂಗಳೂರು ಮಂಗಳವಾರ, 11 ಜುಲೈ, 2023

### ಬೆಂಗಳೂರು ನಗರ ವಿವಿ ಘಟಿಕೋತ್ಸವದಲ್ಲಿ ಡಾ.ಸಿ.ಎನ್.ಮಂಜುನಾಥ್ ಸಲಹೆ | 35 ಸಾವಿರ ವಿದ್ಯಾರ್ಥಿಗಳಿಗೆ ಪದವಿ ಪ್ರದಾನ

# ಸಂಶೋಧನೆಗೆ ಹೆಚ್ಚಿನ ಅನುದಾನ ಒದಗಿಸಿ

**ವಿಕ ಸುದ್ದಿಲೋಕ** ಬೆಂಗಳೂರು

''ಹಣಕಾಸಿನ ಕೊರತೆಯಿಂದಾಗಿ ರಾಜ್ಯದ ಬಹುತೇಕ ವಿಶ್ವವಿದ್ಯಾಲಯಗಳು ಸಂಶೋಧನೆಯಲ್ಲಿ ಹಿಂದುಳಿದಿವೆ. ಸಂಶೋಧನೆಗಾಗಿ ರಾಜ್ಯ ಸರಕಾರ ಮತ್ತು ಯುಜಿಸಿ ವಿವಿಗಳಿಗೆ ಹೆಚ್ಚಿನ ಅನುದಾನ ಒದಗಿಸಿಕೊಡಬೇಕು,'' ಎಂದು ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ.ಸಿ.ಎನ್.ಮಂಜುನಾಥ್ ಹೇಳಿದರು.

ಬೆಂಗಳೂರು ನಗರ ವಿಶ್ವವಿದ್ಯಾಲಯ ಸೆಂಟ್ರಲ್ ಕಾಲೇಜು ಆವರಣದಲ್ಲಿರುವ ಜ್ಞಾನಜ್ಯೋತಿ ಸಭಾಂಗಣದಲ್ಲಿ ಸೋಮವಾರ ಆಯೋಜಿಸಿದ್ದ 2ನೇ ವಾರ್ಷಿಕ ಘಟಿಕೋತ್ಸವದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದ ಅವರು, ''ಸಂಶೋಧನೆ ಇಲ್ಲದಿದ್ದರೆ ಯಾವುದೇ ಪ್ರಗತಿ, ಹೊಸತನ ಮತ್ತು ಹೊಸ ಆಲೋಚನೆಗಳಿರುವುದಿಲ್ಲ, ಇತರೆ ವಿಶ್ವವಿದ್ಯಾಲಯಗಳಿಗೆ ಹೋಲಿಕೆ ಮಾಡಿದರೆ, ನಮ್ಮ ವಿಶ್ವವಿದ್ಯಾಲಯಗಳು ಸಂಶೋಧನಾ ಚಟುವಟಿಕೆಯಲ್ಲಿ ಹಿಂದುಳಿದಿವೆ. ಸಂಶೋಧನೆ ಮತ್ತು ನಾವೀನ್ಯತೆಗಳು ಜೀವಸೆಲೆಯಾಗದಿದ್ದರೆ, ಕಲಿಕೆಯು ನಿಂತ ನೀರಾಗಲಿದೆ,'' ಎಂದರು.



ಘಟಿಕೋತ್ಸವ ಸಮಾರಂಭದಲ್ಲಿ ತಾರಿಣಿ ಚಿದಾನಂದ, ಡಾ.ವೂಡೇ ಪಿ. ಕೃಷ್ಣ, ನಿಸಾರ್ ಅಹಮದ್ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು.

ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್, ''ವಿದ್ಯಾರ್ಥಿಗಳ ಕೆಲಸ, ನಡವಳಿಕೆ ಮತ್ತು ಆಲೋಚನೆಗಳನ್ನು ಸಮಾಜದ ಸಿದ್ಧಾಂತ, ಸಂಸ್ಕೃತಿ ಮತ್ತು ನಾಗರಿಕತೆಯೊಂದಿಗೆ ಜೋಡಿಸಬೇಕು. ಹೊಸ ಆಲೋಚನೆಗಳು, ಪ್ರಯೋಗಗಳಿಗೆ ಸ್ಫೂರ್ತಿದಾಯಕ ಪ್ರಭಾವಶಾಲಿ ವಾತಾವರಣ ಸೃಷ್ಟಿಸುವುದು ಶಿಕ್ಷಣ ಸಂಸ್ಥೆಗಳ ಜವಾಬ್ದಾರಿಯಾಗಿದೆ,'' ಎಂದರು.

38 ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕ ಒಳಗೊಂಡಂತೆ ವಿಶ್ವವಿದ್ಯಾಲಯದ 29,914 ಸ್ನಾತಕ ಮತ್ತು 5,997 ಸ್ನಾತಕೋತ್ತರ ವಿಭಾಗ ಸೇರಿ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಯಿತು.

ವಿವಿ ಕುಲಪತಿ ಪ್ರೊ.ಲಿಂಗರಾಜು ಗಾಂಧಿ, ಕುಲಸಚಿವ ಸಿ.ಎನ್.ಶ್ರೀಧರ್, ಮೌಲ್ಯಮಾಪನ ಕುಲಸಚಿವ ಪ್ರೊ.ವಿ.ಲೋಕೇಶ್ ಇದ್ದರು.

## ಮೂವರಿಗೆ ಗೌರವ ಡಾಕ್ಟರೇಟ್

ಸಾಹಿತ್ಯ ಕ್ಷೇತ್ರದಲ್ಲಿ ರಾಷ್ಟ್ರಕವಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ ಹಾಗೂ ಸಮಾಜ ಸೇವೆಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ಶಿಕ್ಷಣ ಕ್ಷೇತ್ರದಲ್ಲಿ ಪ್ರೆಸಿಡೆನ್ಸಿ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ನಿಸಾರ್ ಅಹಮದ್ ಅವರಿಗೆ ಬೆಂಗಳೂರು ನಗರ ವಿವಿ ಗೌರವ ಡಾಕ್ಟರೇಟ್ ಪದವಿ ನೀಡಿ ಅಭಿನಂದಿಸಿತು.



ಘಟಿಕೋತ್ಸವ ಸಮಾರಂಭದಲ್ಲಿ ಪಾಲ್ಗೊಂಡ ವಿದ್ಯಾರ್ಥಿಗಳು.



ಇಂದಿನ ದಿನಗಳಲ್ಲಿ ಒತ್ತಡ ಎಂಬುದು ಮಗುವಿನ ಶಿಶುವಿಹಾರಗಳಿಂದಲೇ ಆರಂಭವಾಗುತ್ತಿದೆ. ಮಕ್ಕಳ ಲಾಲನೆ ಮತ್ತು ಪಾಲನೆಯಲ್ಲಿ ತಾಯಂದಿರು 50ನೇ ವಯಸ್ಸಿಗೆ ಒತ್ತಡಕ್ಕೆ ಸಿಲುಕುತ್ತಾರೆ. ಇದರ ಪರಿಣಾಮ 40 ವರ್ಷದೊಳಗೆ ಶೇ.30 ಜನರು ಇಂದು ಹೃದಯ ಸಂಬಂಧಿ ಕಾಯಿಲೆಗಳಿಗೆ ತುತ್ತಾಗುತ್ತಿದ್ದಾರೆ. ಹೃದಯದ ಆರೋಗ್ಯ ಕಾಪಾಡಿಕೊಳ್ಳಲು ರಕ್ತದೊತ್ತಡ, ಸಕ್ಕರೆ, ಕೊಲೆಸ್ಟ್ರಾಲ್, ಅಧಿಕ ತೂಕ ಮತ್ತು ಸೊಂಟದ ಸುತ್ತಳತೆ, ಅತಿಯಾಸೆಗಳನ್ನು ನಿಯಂತ್ರಿಸುವುದು ಬಹಳ ಮುಖ್ಯ.

**-ಡಾ.ಸಿ.ಎನ್.ಮಂಜುನಾಥ್** ನಿರ್ದೇಶಕರು, ಜಯದೇವ ಹೃದ್ರೋಗ ಸಂಸ್ಥೆ

## ಬೆಂಗಳೂರು ನಗರ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಥ್

# ವಿವಿಗಳು ಶಿಕ್ಷಣದ ಜತೆ ಮೌಲ್ಯಗಳನ್ನೂ ತುಂಬಬೇಕು

**ಬೆಂಗಳೂರು:** ವಿಶ್ವವಿದ್ಯಾಲಯಗಳು ಸಾಮಾಜಿಕ ಸಂಪ್ರದಾಯದ ಸಂಶೋಧನೆಯನ್ನು ಉತ್ತೇಜಿಸುತ್ತವೆ ಎಂದು ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಥ್ ಹೇಳಿದ್ದಾರೆ.

ಸೆಂಟ್ರಲ್ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಬೆಂಗಳೂರು ನಗರ ವಿವಿಯ 2ನೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸಿ ಮಾತನಾಡಿ, ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ತಾಂತ್ರಿಕ ಅಭಿವೃದ್ಧಿಗಾಗಿ ಶಿಕ್ಷಣದಲ್ಲಿ ಸಾಂಸ್ಕೃತಿಕ ಮತ್ತು ಮಾನವೀಯ ಮೌಲ್ಯಗಳನ್ನು ಸೇರಿಸುವುದನ್ನು ಖಚಿತಪಡಿಸಿಕೊಳ್ಳುವುದು ಶಿಕ್ಷಣ ತಜ್ಞರು, ಅನುದಾನ ಸಂಸ್ಥೆಗಳು, ನೀತಿ ನಿರೂಪಕರು, ಮಾನವತಾವಾದಿಗಳು ಮತ್ತು ಸಮಾಜದ ಜವಾಬ್ದಾರಿಯಾಗಿದೆ ಎಂದು ಅಭಿಪ್ರಾಯಪಟ್ಟರು. ವಿಶ್ವವಿದ್ಯಾನಿಲಯಗಳು ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಮಾನವಕುಲಕ್ಕೆ ಹವಾಮಾನ ಬದಲಾವಣೆಯಿಂದ ಉಂಟಾಗುವ ಆರೋಗ್ಯ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತವೆ. ಹಾಗೆಯೇ ಸುಲಭವಾಗಿ ಪ್ರವೇಶಿಸಬಹುದಾದಂತಹ ಜೀವನಶೈಲಿಯ ಮಾದರಿಗಳ ಬಗ್ಗೆ ಯೋಚಿಸುವ ಅವಶ್ಯಕತೆಯಿದೆ. ವಿಶೇಷವಾಗಿ ಬಡವರ, ಅತ್ಯಂತ ದುರ್ಬಲರ ಹಾಗೂ ನಮ್ಮ ಪರಿಸರದ ಕಾಳಜಿಗೆ ಆದ್ಯತೆ ನೀಡಬೇಕು ಎಂದರು.

ಪ್ರಸ್ತುತ, ಸ್ವಾವಲಂಬಿ ಮತ್ತು ಬಲಿಷ್ಠ ಭಾರತದ ಬಗ್ಗೆ ಮಾತನಾಡಲಾಗುತ್ತಿದೆ. ಇಂತಹ ಸಮಯದಲ್ಲಿ ಡಿಜಿಟಲ್ ಚಟುವಟಿಕೆಗಳನ್ನು ಹೆಚ್ಚು



ಬೆಂಗಳೂರು ನಗರ ವಿವಿ ಘಟಿಕೋತ್ಸವದಲ್ಲಿ ಗೌರವ ಡಾಕ್ಟರೇಟ್ ಪಡೆದ ನಿಸಾರ್ ಅಹಮದ್, ಡಾ.ವೂಡೆ ಪಿ.ಕೃಷ್ಣ, ತಾರಿಣಿ ಚಿದಾನಂದ ಹಾಗೂ ರ‍್ಯಾಂಕ್, ಚಿನ್ನದ ಪದಕ ಪಡೆದ ವಿದ್ಯಾರ್ಥಿಗಳೊಂದಿಗೆ ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಥ್, ಡಾ.ಸಿ.ಎನ್.ಮಂಜುನಾಥ್, ಡಾ.ಲಿಂಗರಾಜು ಗಾಂಧಿ ಮತ್ತಿತರರು ಇದ್ದರು.

ಹರಡಲು ಬಳಕೆದಾರರಿಗೆ ತಂತ್ರಜ್ಞಾನವನ್ನು ಸರಳ ಮತ್ತು ವೈಶಿಷ್ಟ್ಯಗಳಿಂದ ಸಮೃದ್ಧಗೊಳಿಸುವುದು ಅವಶ್ಯಕವಾಗಿದೆ ಎಂದು ಹೇಳಿದರು.

ನಮ್ಮ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಪ್ರದಾಯವು ಬಹಳ ಪುರಾತನವಾಗಿದೆ ಮತ್ತು ಪ್ರಾಚೀನ ಕಾಲದಿಂದಲೂ, ಸರ್ವೇ ಭವಂತು ಸುಖಿನಃ ಸರ್ವೇ ಸಂತು ನಿರಾಮಯ ಎಂಬ ಮನೋಭಾವದಿಂದ ಪ್ರೇರಿತವಾದ ವಸುದೈವ ಕುಟುಂಬಕಂ ತತ್ವಶಾಸ್ತ್ರ ಮತ್ತು ಧ್ಯಾನವನ್ನು ಕೇಂದ್ರೀಕರಿಸಿ, ಸಾರ್ವತ್ರಿಕ ಸಹೋದರತ್ವ ಮತ್ತು ವಿಶ್ವ ಶಾಂತಿ ಮತ್ತು ಸಮಾನತೆ ಮತ್ತು ಸಾಮರಸ್ಯವನ್ನು ಕಲಿಸುತ್ತದೆ. ನಮ್ಮ ಪ್ರಾಚೀನ ಶಿಕ್ಷಣ ಪದ್ಧತಿಯು ವ್ಯಕ್ತಿತ್ವ ನಿರ್ಮಾಣ, ಆಧ್ಯಾತ್ಮಿಕ ಜ್ಞಾನದ ಜತೆಗೆ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯ ಮೇಲೆ ಕೇಂದ್ರೀಕೃತವಾಗಿತ್ತು, ಇದರಿಂದಾಗಿ ನಾವು ವಿಶ್ವಗುರು ಎಂದು ಪರಿಗಣಿಸಲ್ಪಟ್ಟಿದ್ದವು ಎಂದು ತಿಳಿಸಿದರು. ಶಿಕ್ಷಣ, ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಅತ್ಯುತ್ತಮ ಕೆಲಸ ಮಾಡಿ, ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪಡೆದ ಸಾಧಕ ನಿಸಾರ್ ಅಹಮದ್, ಡಾ.ವೂಡೆ ಪಿ ಕೃಷ್ಣ ತಾರಿಣಿ ಚಿದಾನಂದ ಅವರಿಗೆ ಅಭಿನಂದಿಸಿದ ರಾಜ್ಯಪಾಲರು, ಅವರ ಸಮಾಜ ಕಾರ್ಯ ನಿರಂತರವಾಗಿರಲಿ ಎಂದು ಆಶಿಸಿದರು ಹಾಗೂ ಪದವಿ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ಶುಭಕೋರಿದರು.

ಕಾರ್ಯಕ್ರಮದಲ್ಲಿ ಬೆಂಗಳೂರಿನ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಸಿ.ಎನ್.ಮಂಜುನಾಥ್ ಘಟಿಕೋತ್ಸವ ಭಾಷಣ ಮಾಡಿದರು. ಕುಲಪತಿ ಲಿಂಗರಾಜು ಗಾಂಧಿ ಮತ್ತಿತರರು ಇದ್ದರು.

### 35,911 ಮಂದಿಗೆ ಪದವಿ ಪ್ರದಾನ

**ಘಟಿಕೋತ್ಸವದಲ್ಲಿ 5,997 ಸ್ನಾತಕೋತ್ತರ ವಿದ್ಯಾರ್ಥಿಗಳು ಸೇರಿದಂತೆ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಯಿತು. 61 ವಿದ್ಯಾರ್ಥಿಗಳಿಗೆ ರ‍್ಯಾಂಕ್, 51 ವಿದ್ಯಾರ್ಥಿಗಳಿಗೆ ಚಿನ್ನದ ಪದಕ ವಿತರಿಸಲಾಯಿತು. ಎಂಎಸ್ಸಿ ರಸಾಯನ ಶಾಸ್ತ್ರದಲ್ಲಿ ಪದ್ಮಾವತಿ ಕೆ.ವಿ. ನಾಯರ್, ಬಿ.ಕಾಂನಲ್ಲಿ ಕೃಪಾನಿಧಿ ವಾಣಿಜ್ಯ ಕಾಲೇಜಿನ ಅಜಿತ್ ಕುಮಾರ್ ಎಂ., ಬಿಬಿಎನಲ್ಲಿ ಶೇಷಾದ್ರಿಪುರಂ ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜಿನ ಎಸ್.ದೀಪ್ತಿ ತಲಾ ಮೂರು ಚಿನ್ನದ ಪದಕ ಪಡೆದಿದ್ದಾರೆ. ಇದೇ ವೇಳೆ ಶಿಕ್ಷಣ ಕ್ಷೇತ್ರದಲ್ಲಿ ನಿಸಾರ್ ಅಹಮದ್, ಸಮಾಜ ಸೇವೆ ಕ್ಷೇತ್ರದಲ್ಲಿ ಡಾ.ವೂಡೆ ಪಿ.ಕೃಷ್ಣ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು.**

**ಸ್ಮಾರ್ಟ್, ಅದ್ಭುತ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳು ಆದರ್ಶ ಸಮಾಜದ ರಚನೆಯ ಆಧಾರ ಸ್ತಂಭಗಳು. ವಿದ್ಯಾರ್ಥಿಗಳ ಕೆಲಸ, ನಡವಳಿಕೆ ಮತ್ತು ಆಲೋಚನೆಯನ್ನು ಸಮಾಜದ ಸಿದ್ಧಾಂತ, ಸಂಸ್ಕೃತಿ ಮತ್ತು ನಾಗರಿಕತೆಯೊಂದಿಗೆ ಜೋಡಿಸಬೇಕು. ಹೊಸ ಆಲೋಚನೆಗಳು, ಹೊಸ ಪ್ರಯೋಗಗಳಿಗೆ ಸ್ಫೂರ್ತಿದಾಯಕ ಮತ್ತು ಪ್ರಭಾವಶಾಲಿ ವಾತಾವರಣವನ್ನು ಸೃಷ್ಟಿಸುವುದು ಉನ್ನತ ಶಿಕ್ಷಣ ಸಂಸ್ಥೆಗಳ ಜತೆಗೆ ಪ್ರತಿಭಾವಂತ ಯುವ ಪೀಳಿಗೆಯ ಜವಾಬ್ದಾರಿಯಾಗಿದೆ.**

**- ಥಾವರ್‌ಚಂದ್ ಗೆಹ್ಲೋಥ್ ,ರಾಜ್ಯಪಾಲರು**

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

VIJAYAVANI » BENGALURU
ಮಂಗಳವಾರ 11 ಜುಲೈ 2023
11 JULY 2023

# ಸಂಶೋಧನೆ, ನಾವೀನ್ಯತೆಗಳು ಜೀವಸೆಲೆಯಾಗಲಿ

## ಜಯದೇವ ನಿರ್ದೇಶಕ ಡಾ. ಮಂಜುನಾಥ್ ಆಶಯ । ಬೆಂಗಳೂರು ನಗರ ವಿವಿ ಎರಡನೇ ಘಟಿಕೋತ್ಸವ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸಂಶೋಧನೆ, ನಾವೀನ್ಯತೆ ಜೀವಸೆಲೆಯಾಗದಿದ್ದರೆ ಕಲಿಕೆ ನಿಂತ ನೀರಾಗಲಿದೆ ಎಂದು ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ ನಿರ್ದೇಶಕ ಡಾ. ಸಿ.ಎನ್. ಮಂಜುನಾಥ್ ಹೇಳಿದ್ದಾರೆ.

ಸೆಂಟ್ರಲ್ ಕಾಲೇಜು ಆವರಣದಲ್ಲಿರುವ ಜ್ಞಾನಜ್ಯೋತಿ ಸಭಾಂಗಣದಲ್ಲಿ ಸೋಮವಾರ ಆಯೋಜಿಸಿದ್ದ ಬೆಂಗಳೂರು ನಗರ ವಿವಿ 2ನೇ ಘಟಿಕೋತ್ಸವದಲ್ಲಿ ಪ್ರಧಾನ ಭಾಷಣ ಮಾಡಿದರು. ಭಾರತದ ಬಹುತೇಕ ವಿವಿಗಳಲ್ಲಿ ನಿಧಿಯ ಕೊರತೆಯಿಂದಾಗಿ ಸಂಶೋಧನೆ ಹಿಂದುಳಿದಿದೆ. ಸಂಶೋಧನಾ ಚಟುವಟಿಕೆಗಳಿಗೆ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯ ಧನಸಹಾಯ ಆಯೋಗ (ಯುಜಿಸಿ) ಸಾಕಷ್ಟು ಹಣ ವಿನಿಯೋಗಿಸಬೇಕಿದೆ ಎಂದು ಸಲಹೆ ನೀಡಿದರು.

ಒಳ್ಳೆಯ ಮನುಷ್ಯನಾಗಲು ಕೇವಲ ಪ್ರತಿಭೆ ಮತ್ತು ಕೌಶಲಗಳಿದ್ದರೆ ಸಾಲದು. ಗುಣಮಟ್ಟದ ವಿದ್ಯಾರ್ಥಿಗಳನ್ನು ಹುಟ್ಟುಹಾಕಲು ಶಿಕ್ಷಕರು ಮತ್ತು ವಿವಿಗಳು ಹೆಚ್ಚಿನ ಜವಾಬ್ದಾರಿ ಹೊರಬೇಕಿದೆ. ಪದವಿ, ರ್‍ಯಾಂಕ್ ಪಡೆಯುವುದು ಮಾತ್ರವಲ್ಲ, ವಿದ್ಯಾರ್ಥಿಗಳು ಜ್ಞಾನದ ಜತೆಗೆ ಉತ್ತಮ ಸಂಸ್ಕಾರ, ವಿವೇಕ, ಮಾನವೀಯತೆ, ಸಾಮಾನ್ಯ ಜ್ಞಾನ ಮತ್ತು ಉತ್ತಮ ನಡತೆಯನ್ನು ಬೆಳೆಸಿಕೊಳ್ಳುವುದು ಅಷ್ಟೇ ಮುಖ್ಯ ಎಂದರು.

**ಶೇ.30 ಮಂದಿಗೆ ಹೃದಯ ಕಾಯಿಲೆ:** ಪ್ರಸ್ತುತ ಜೀವನಶೈಲಿಯು ಒತ್ತಡದಿಂದ ಕೂಡಿದೆ. ಶಿಶುವಿಹಾರ ಶಾಲೆಗಳಿಂದಲೇ ಮಕ್ಕಳಿಗೆ ಒತ್ತಡ ಹೇರಲಾಗುತ್ತಿದೆ. ಇದರಿಂದ ವಿದ್ಯಾರ್ಥಿಗಳು ಸರಿಯಾಗಿ ಊಟ ಮಾಡುತ್ತಿಲ್ಲ, ಹಾಲು ಕುಡಿಯುವುದಿಲ್ಲ. ಅತ್ತ ಅಮ್ಮಂದಿರೂ 50ನೇ ವಯಸ್ಸಿಗೆ ಒತ್ತಡಕ್ಕೆ ಸಿಲುಕುತ್ತಿದ್ದಾರೆ. ಪರಿಣಾಮ 40 ವರ್ಷದೊಳಗಿನ ಶೇ.30 ಜನರು ಹೃದಯ ಸಂಬಂಧಿ ಕಾಯಿಲೆಗಳಿಗೆ ತುತ್ತಾಗುತ್ತಿದ್ದಾರೆ. ಹೃದಯದ ಸ್ವಾಸ್ಥ್ಯ ಕಾಪಾಡಿಕೊಳ್ಳಲು ರಕ್ತದೊತ್ತಡ, ಸಕ್ಕರೆ, ಬೊಜ್ಜು, ಅಧಿಕ ತೂಕ ಮತ್ತು ಅತಿಯಾಸೆಗಳನ್ನು ನಿಯಂತ್ರಿಸುವುದು ಬಹಳ ಮುಖ್ಯ ಎಂದು ಕಿವಿಮಾತು ಹೇಳಿದರು.

ವಿವಿ ಕುಲಪತಿ ಪ್ರೊ. ಲಿಂಗರಾಜು ಗಾಂಧಿ, ಕುಲಸಚಿವ ಸಿ.ಎನ್. ಶ್ರೀಧರ್, ಮೌಲ್ಯಮಾಪನ ಕುಲಸಚಿವ ಪ್ರೊ. ವಿ. ಲೋಕೇಶ್ ಮತ್ತಿತರ ಗಣ್ಯರು ಉಪಸ್ಥಿತರಿದ್ದರು.



ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ಘಟಿಕೋತ್ಸವದಲ್ಲಿ ಸಾಧಕರಾದ ನಿಸಾರ್ ಅಹಮದ್, ಡಾ. ವೂಡೇ ಪಿ. ಕೃಷ್ಣ, ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು. ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್, ಜಯದೇವ ಆಸ್ಪತ್ರೆ ನಿರ್ದೇಶಕ ಡಾ. ಸಿ.ಎನ್. ಮಂಜುನಾಥ್ ಇತರರಿದ್ದರು.

### ಮೂವರಿಗೆ ಗೌಡಾ ಪ್ರದಾನ

ಪ್ರೆಸಿಡೆನ್ಸಿ ಶಿಕ್ಷಣ ಸಂಸ್ಥೆಗಳ ಸಹ ಸಂಸ್ಥಾಪಕ ನಿಸಾರ್ ಅಹಮದ್ (ಶಿಕ್ಷಣ), ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ (ಸಮಾಜ ಸೇವೆ) ಮತ್ತು ರಾಷ್ಟ್ರಕವಿ ಕುವೆಂಪು ಪುತ್ರಿ ತಾರಿಣಿ ಚಿದಾನಂದ (ಸಾಹಿತ್ಯ) ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು.



ಚಿನ್ನದ ಪದಕಕ್ಕೆ ಪಾತ್ರರಾದ ವಿದ್ಯಾರ್ಥಿಗಳು.

> ವಿದ್ಯಾರ್ಥಿಗಳ ಕೆಲಸ, ನಡತೆ ಮತ್ತು ಆಲೋಚನೆಗಳನ್ನು ಸಮಾಜದ ಸಿದ್ಧಾಂತ, ಸಂಸ್ಕೃತಿ ಮತ್ತು ನಾಗರಿಕತೆಯೊಂದಿಗೆ ಜೋಡಿಸಬೇಕು. ಹೊಸ ಆಲೋಚನೆಗಳು, ಪ್ರಯೋಗಗಳಿಗೆ ಸ್ಫೂರ್ತಿದಾಯಕ ಪ್ರಭಾವಶಾಲಿ ವಾತಾವರಣವನ್ನು ಸೃಷ್ಟಿಸುವುದು ಶಿಕ್ಷಣ ಸಂಸ್ಥೆಗಳ ಜಬಾಬ್ದಾರಿಯಾಗಿದೆ.
> । ಥಾವರ್‌ಚಂದ್ ಗೆಹಲೋತ್ ರಾಜ್ಯಪಾಲ

### 35 ಸಾವಿರ ವಿದ್ಯಾರ್ಥಿಗಳಿಗೆ ಪದವಿ

**38** ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕ ಒಳಗೊಂಡಂತೆ ವಿಶ್ವವಿದ್ಯಾಲಯದ ಸ್ನಾತಕ ವಿಭಾಗದ 29,914 ಮತ್ತು ಸ್ನಾತಕೋತ್ತರ ವಿಭಾಗದ 5,997 ಸೇರಿ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಯಿತು.

### ಗ್ಯಾರಂಟಿ ಹಣ ಕೌಶಲ ವೃದ್ಧಿಗೆ ಬಳಸಿ

ರಾಜ್ಯದ ಕಾಂಗ್ರೆಸ್ ಸರ್ಕಾರವು 'ಯುವ ನಿಧಿ' ಎಂಬ ಗ್ಯಾರಂಟಿ ಯೋಜನೆ ಅಡಿ ಪದವೀಧರ ವಿದ್ಯಾರ್ಥಿಗಳಿಗೆ 3 ಸಾವಿರ ರೂ. ಮತ್ತು ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಒಂದೂವರೆ ಸಾವಿರ ರೂಪಾಯಿ ನೀಡಲಿದೆ. ಅದನ್ನು ಹೆಚ್ಚಿನ ಕೌಶಲ ಮತ್ತು ಜ್ಞಾನ ಪಡೆಯಲು ಬಳಸಿಕೊಳ್ಳುವಂತೆ ಡಾ. ಸಿ.ಎನ್. ಮಂಜುನಾಥ್ ಸಲಹೆ ನೀಡಿದರು.

## ಅವನಿ ಶರ್ಮಾಗೆ ಚಿನ್ನದ ಪದಕ

ಮಂಗಳೂರು: ಬೆಂಗಳೂರು ನಗರ ವಿವಿಯ ಚಿತ್ರಕಲಾ ಪರಿಷತ್ ವಿದ್ಯಾರ್ಥಿನಿ ಅವನಿ ಶರ್ಮಾ, ಕಲಾ ವಿಭಾಗದ ಸ್ನಾತಕೋತ್ತರ ಪದವಿಯಲ್ಲಿ ಪ್ರಥಮ ರ್‍ಯಾಂಕಿನೊಂದಿಗೆ ಚಿನ್ನದ ಪದಕ ಗಳಿಸಿದ್ದಾರೆ. ಇವರು ಮಂಗಳೂರಿನ ಮಹಾಲಸಾ ಚಿತ್ರಕಲಾ ಶಾಲೆಯಲ್ಲಿ ಪದವಿ ಪಡೆದಿದ್ದು, ಮ್ಯಾನೇಜ್‌ಮೆಂಟ್ ಕನ್ಸಲ್ಟೆಂಟ್ ವೇಣು ಶರ್ಮಾ-ರಶ್ಮಿ ಶರ್ಮಾ ದಂಪತಿ ಪುತ್ರಿಯಾಗಿದ್ದಾರೆ.



ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್ ಅವರಿಂದ ಅವನಿ ಶರ್ಮಾ ಸ್ವರ್ಣ ಪದಕ ಸ್ವೀಕರಿಸಿದರು.

ಉದಯಕಾಲ

Jul 11, 2023

# ಶಿಕ್ಷಣದಲ್ಲಿ ಸಾಂಸ್ಕೃತಿಕ, ಮಾನವೀಯ ಮೌಲ್ಯಗಳನ್ನು ತುಂಬುವುದು ಅತ್ಯವಶ್ಯಕ: ರಾಜ್ಯಪಾಲರು



ಉದಯಕಾಲ ನ್ಯೂಸ್

ಬೆಂಗಳೂರು: ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ತಾಂತ್ರಿಕ ಅಭಿವೃದ್ಧಿಗಾಗಿ ಶಿಕ್ಷಣದಲ್ಲಿ ಸಾಂಸ್ಕೃತಿಕ ಮತ್ತು ಮಾನವೀಯ ಮೌಲ್ಯಗಳನ್ನು ಸೇರಿಸುವುದನ್ನು ಖಚಿತಪಡಿಸಿಕೊಳ್ಳುವುದು ಶಿಕ್ಷಣ ತಜ್ಞರು, ಅನುದಾನ ಸಂಸ್ಥೆಗಳು, ನೀತಿ ನಿರೂಪಕರು, ಮಾನವತಾವಾದಿಗಳು ಮತ್ತು ಸಮಾಜದ ಜವಾಬ್ದಾರಿಯಾಗಿದೆ ಎಂದು ಕರ್ನಾಟಕದ ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಅವರು ಅಭಿಪ್ರಾಯಪಟ್ಟರು.

ನಗರದ ಸೆಂಟ್ರಲ್ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಬೆಂಗಳೂರು ನಗರ ವಿಶ್ವವಿದ್ಯಾಲಯದ [illegible]ನೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸಿ ಅವರು ಮಾತನಾಡಿದರು. ವಿಶ್ವವಿದ್ಯಾನಿಲಯಗಳು ಸಾಮಾಜಿಕ ಸಂಪ್ರದಾಯದ ಸಂಶೋಧನೆಯನ್ನು ಉತ್ತೇಜಿಸುತ್ತವೆ. ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಮಾನವಕುಲಕ್ಕೆ ಹವಾಮಾನ ಬದಲಾವಣೆಯಿಂದ ಉಂಟಾಗುವ ಆರೋಗ್ಯ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತವೆ, ಹಾಗೆಯೇ ಸುಲಭವಾಗಿ ಪ್ರವೇಶಿಸಬಹುದಾದಂತಹ ಜೀವನಶೈಲಿಯ ಮಾದರಿಗಳ ಬಗ್ಗೆ ಯೋಚಿಸುವ ಅವಶ್ಯಕತೆಯಿದೆ. ವಿಶೇಷವಾಗಿ ಬಡವರ, ಅತ್ಯಂತ ದುರ್ಬಲರ ಹಾಗೂ ನಮ್ಮ ಪರಿಸರದ ಕಾಳಜಿಗೆ ಆದ್ಯತೆ ನೀಡಬೇಕು ಎಂದು ತಿಳಿಸಿದರು.

ಪ್ರಸ್ತುತ, ಸ್ವಾವಲಂಬಿ ಮತ್ತು ಬಲಿಷ್ಠ ಭಾರತದ ಬಗ್ಗೆ ಮಾತನಾಡಲಾಗುತ್ತಿದೆ. ಇಂತಹ ಸಮಯದಲ್ಲಿ, ಡಿಜಿಟಲ್ ಚಟುವಟಿಕೆಗಳನ್ನು ಹೆಚ್ಚು ಹರಡಲು ಬಳಕೆದಾರರಿಗೆ ತಂತ್ರಜ್ಞಾನವನ್ನು ಸರಳ ಮತ್ತು ವೈಶಿಷ್ಟ್ಯಗಳಿಂದ ಸಮೃದ್ಧಗೊಳಿಸುವುದು ಅವಶ್ಯಕವಾಗಿದೆ. ಸ್ಮಾರ್ಟ್, ಆದ್ಯತೆ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳು ಆದರ್ಶ ಸಮಾಜದ ರಚನೆಯ ಆಧಾರ ಸ್ತಂಭಗಳು. ವಿದ್ಯಾರ್ಥಿಗಳ ಕೆಲಸ, ನಡವಳಿಕೆ ಮತ್ತು ಆಲೋಚನೆಯನ್ನು ಸಮಾಜದ ಸಿದ್ಧಾಂತ, ಸಂಸ್ಕೃತಿ ಮತ್ತು ನಾಗರಿಕತೆಯೊಂದಿಗೆ ಜೋಡಿಸಬೇಕು ಎಂದರು.

ನಮ್ಮ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಸಂಪ್ರದಾಯವು ಬಹಳ ಪುರಾತನವಾಗಿದೆ ಮತ್ತು ಪ್ರಾಚೀನ ಕಾಲದಿಂದಲೂ, ಸರ್ವೇ ಸುಖಿನೋ ಭವಂತು, ಸರ್ವೇ ಸಂತು ನಿರಾಮಯ ಎಂಬ ಮನೋಭಾವದಿಂದ ಪ್ರೇರಿತವಾದ ವಸುಧೈವ ಕುಟುಂಬಕಂ ತತ್ವಶಾಸ್ತ್ರ ಮತ್ತು ಧ್ಯಾನವನ್ನು ಕೇಂದ್ರೀಕರಿಸಿ, ಸಾರ್ವತ್ರಿಕ ಸಹೋದರತ್ವ ಮತ್ತು ವಿಶ್ವ ಶಾಂತಿ ಮತ್ತು ಸಮಾನತೆ ಮತ್ತು ಸಾಮರಸ್ಯವನ್ನು ಕಲಿಸುತ್ತದೆ ಎಂದು ತಿಳಿಸಿದರು.

ಶಿಕ್ಷಣ, ಸಾಹಿತ್ಯ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಅತ್ಯುತ್ತಮ ಕೆಲಸ ಮಾಡಿ, ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪಡೆದ ಸಾಧಕರಾದ ನಿಸಾರ್ ಅಹಮದ್, ಡಾ.ಪ್ರೀತಿ ಜಿ ಕೃಷ್ಣ, ತಾರಿಣಿ ಚಿದಾನಂದ ಅವರಿಗೆ ಅಭಿನಂದಿಸಿದ ರಾಜ್ಯಪಾಲರು, ಅವರ ಸಮಾಜ ಕಾರ್ಯ ನಿರಂತರವಾಗಿರಲಿ ಎಂದು ಆಶಿಸಿದರು ಹಾಗೂ ಪದವಿ ಪಡೆದ ಎಲ್ಲಾ ವಿದ್ಯಾರ್ಥಿಗಳಿಗೆ ಶುಭಕೋರಿದರು.

ಕಾರ್ಯಕ್ರಮದಲ್ಲಿ ಬೆಂಗಳೂರಿನ ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕರಾದ ಸಿ.ಎನ್.ಮಂಜುನಾಥ್, ಕುಲಪತಿ ಲಿಂಗರಾಜು ಗಾಂಧಿ ಮುಂತಾದ ಗಣ್ಯರು ಉಪಸ್ಥಿತರಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ

Jul 11, 2023

## ಬೆಂಗಳೂರು ನಗರ ವಿಶ್ವವಿದ್ಯಾನಿಲಯದ 2ನೇ ಘಟಿಕೋತ್ಸವ

# ಶಿಕ್ಷಣದಲ್ಲಿ ಮಾನವೀಯ ಮೌಲ್ಯಗಳನ್ನು ತುಂಬುವುದು ತಜ್ಞರ ಜವಾಬ್ದಾರಿ



### ರಾಜ್ಯಪಾಲ ಗೆಹ್ಲೋಟ್

ಬೆಂಗಳೂರು, ಜು.10: ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ತಾಂತ್ರಿಕ ಅಭಿವೃದ್ಧಿಗಾಗಿ ಶಿಕ್ಷಣದಲ್ಲಿ ಮಾನವೀಯ ಮೌಲ್ಯ ಗಳನ್ನು ಸೇರಿಸುವುದನ್ನು ಖಚಿತಪಡಿಸಿಕೊಳ್ಳುವುದು ಶಿಕ್ಷಣ ತಜ್ಞರು ಸೇರಿ ಸಮಾಜದ ಜವಾಬ್ದಾರಿಯಾಗಿದೆ ಎಂದು ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಅಭಿಪ್ರಾಯಪಟ್ಟಿದ್ದಾರೆ.

ಸೋಮವಾರ ನಗರದ ಸೆಂಟ್ರಲ್ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಬೆಂಗಳೂರು ನಗರ ವಿಶ್ವವಿದ್ಯಾನಿಲಯದ 2ನೇ ಘಟಿಕೋತ್ಸವದಲ್ಲಿ ಮಾತನಾಡಿದ ಅವರು, ವಿಶ್ವವಿದ್ಯಾನಿಲಯಗಳು ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಮಾನವಕುಲಕ್ಕೆ ಹವಾಮಾನ ಬದಲಾವಣೆಯಿಂದ ಉಂಟಾಗುವ ಆರೋಗ್ಯ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬೇಕು. ವಿವಿಗಳು ವಿಶೇಷವಾಗಿ ಬಡವರು, ಅತ್ಯಂತ ದುರ್ಬಲರ ಹಾಗೂ ನಮ್ಮ ಪರಿಸರದ ಕಾಳಜಿಗೆ ಆದ್ಯತೆ ನೀಡಬೇಕು ಎಂದು ತಿಳಿಸಿದರು.

ವಿದ್ಯಾರ್ಥಿಗಳ ಕೆಲಸ, ನಡವಳಿಕೆ ಮತ್ತು ಆಲೋಚನೆಯನ್ನು ಸಮಾಜದ ಸಿದ್ಧಾಂತ, ಸಂಸ್ಕೃತಿ ಮತ್ತು ನಾಗರಿಕತೆಯೊಂದಿಗೆ ಜೋಡಿಸಬೇಕು. ಹೊಸ ಆಲೋಚನೆಗಳು, ಹೊಸ ಪ್ರಯೋಗಗಳಿಗೆ ಸ್ಫೂರ್ತಿದಾಯಕ ಮತ್ತು ಪ್ರಭಾವಶಾಲಿ ವಾತಾವರಣವನ್ನು ಸೃಷ್ಟಿಸುವುದು ಉನ್ನತ ಶಿಕ್ಷಣ ಸಂಸ್ಥೆಗಳ ಜೊತೆಗೆ ಪ್ರತಿಭಾವಂತ ಯುವ ಪೀಳಿಗೆಯ ಜವಾಬ್ದಾರಿಯಾಗಿದೆ. ವಿದ್ಯಾರ್ಥಿಗಳು ಸಮಾಜದ ಮತ್ತು ದೇಶದ ಭವಿಷ್ಯದ ಕೇಂದ್ರ ಬಿಂದು ಎಂದು ಅವರು ಹೇಳಿದರು.

ಕಾರ್ಯಕ್ರಮದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಧನೆ ಮಾಡಿದ ನಿಸಾರ್ ಅಹ್ಮದ್, ಸಾಮಾಜಿಕ ಕ್ಷೇತ್ರದಲ್ಲಿ ಡಾ.ವೂಡೆ ಪಿ. ಕೃಷ್ಣ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಲಾಯಿತು. ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಸಿ.ಎನ್. ಮಂಜುನಾಥ್, ಕುಲಪತಿ ಲಿಂಗರಾಜು ಗಾಂಧಿ ಮುಂತಾದ ಗಣ್ಯರು ಉಪಸ್ಥಿತರಿದ್ದರು.

## ಪ್ರೆಸಿಡೆನ್ಸಿ ವಿವಿ ಕುಲಪತಿ ನಿಸಾರ್ ಅಹ್ಮದ್‌ರಿಗೆ ಗೌರವ ಡಾಕ್ಟರೇಟ್ ಪ್ರದಾನ



ಪ್ರೆಸಿಡೆನ್ಸಿ ಗ್ರೂಪ್ ಆಫ್ ಇನ್‌ಸ್ಟಿಟ್ಯೂಷನ್ಸ್‌ಗಳ ಅಧ್ಯಕ್ಷ, ಪ್ರೆಸಿಡೆನ್ಸಿ ವಿವಿ ಕುಲಪತಿ, ಮಂಗಳೂರು ಮೂಲದ ನಿಸಾರ್ ಅಹ್ಮದ್ ಅವರಿಗೆ ಸೋಮವಾರ ಬೆಂಗಳೂರು ನಗರ ವಿವಿಯು ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಲಾಯಿತು.

ಪ್ರೆಸಿಡೆನ್ಸಿ ಗ್ರೂಪ್ ಆಫ್ ಇನ್‌ಸ್ಟಿಟ್ಯೂಷನ್ಸ್ ಕರ್ನಾಟಕದಲ್ಲಿ ಶಿಕ್ಷಣದ ಸಮಗ್ರ ಬೆಳವಣಿಗೆಗೆ ಅಪಾರ ಕೊಡುಗೆ ನೀಡಿದೆ. ಪ್ರೆಸಿಡೆನ್ಸಿ ಗ್ರೂಪ್ ಎರಡು ದಶಕಗಳಿಂದ ಎಲ್ಲರಿಗೂ ಗುಣಮಟ್ಟದ ಶಿಕ್ಷಣದ ವಿಸ್ತೃತ ಗುರಿಯೊಂದಿಗೆ ಉನ್ನತ ಶಿಕ್ಷಣವನ್ನು ನೀಡುವಲ್ಲಿ ಮುಂಚೂಣಿಯಲ್ಲಿದೆ. ಶೈಕ್ಷಣಿಕ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ನಾವೀನ್ಯತೆಯು ಯಾವುದೇ ಪ್ರತಿಷ್ಠಿತ ವಿಶ್ವವಿದ್ಯಾನಿಲಯದ ವಿಶಿಷ್ಟ ಲಕ್ಷಣವಾಗಿದೆ ಎಂದು ನಿಸಾರ್ ಅಹ್ಮದ್ ದೃಢವಾಗಿ ನಂಬಿದ್ದಾರೆ.



## ಅವನಿ ಶರ್ಮಾಗೆ ಬೆಂಗಳೂರು ವಿವಿಯಿಂದ ಚಿನ್ನದ ಪದಕ

ಬೆಂಗಳೂರು ನಗರ ವಿವಿಯ ಚಿತ್ರಕಲಾ ಪರಿಷತ್ ವಿದ್ಯಾರ್ಥಿನಿ ಅವನಿ ಶರ್ಮಾ ಕಲಾ ವಿಭಾಗದ ಸ್ನಾತಕೋತ್ತರ ಪದವಿಯಲ್ಲಿ ಪ್ರಥಮ ರ್‍ಯಾಂಕ್‌ನೊಂದಿಗೆ ಚಿನ್ನದ ಪದಕ ಗಳಿಸಿದ್ದು, ಅವರಿಗೆ ರಾಜ್ಯಪಾಲರು ಪದಕವನ್ನು ಪ್ರದಾನ ಮಾಡಿದರು. ವಿದ್ಯಾರ್ಥಿನಿಯು ಮಂಗಳೂರಿನ ಮಹಾಲಸಾ ಚಿತ್ರಕಲಾ ಶಾಲೆಯಲ್ಲಿ ಪದವಿ ಪಡೆದಿದ್ದಾರೆ. ಮ್ಯಾನೇಜ್ಮೆಂಟ್ ಕನ್ಸಲ್ಟೆಂಟ್ ವೇಣು ಶರ್ಮಾ ಮತ್ತು ರಶ್ಮಿ ಶರ್ಮಾ ದಂಪತಿ ಪುತ್ರಿಯಾಗಿದ್ದಾರೆ.

ಸಂಜೆವಾಣಿ

ಬೆಂಗಳೂರು | Sanjevani, Bangalore
ಸೋಮವಾರ 10 ಜುಲೈ 2023 | Monday 10 July 2023



ನಗರದ ಸೆಂಟ್ರಲ್ ಕಾಲೇಜಿನಲ್ಲಿ ನಡೆದ ಬೆಂ. ನಗರ ವಿವಿಯ 2ನೇ ಘಟಿಕೋತ್ಸವ ಸಮಾರಂಭದಲ್ಲಿ ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್‌ರವರು ವೂಡೇ ಪಿ. ಕೃಷ್ಣ, ನಿಸಾರ್ ಅಹ್ಮದ್, ತಾರಿಣಿ ಚಿದಾನಂದರವರಿಗೆ ಡಾಕ್ಟರೇಟ್ ಪದವಿ ಪ್ರದಾನ ಮಾಡಿ ಗೌರವಿಸಿದರು. ಜಯದೇವ ಹೃದ್ರೋಗ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್. ಮಂಜುನಾಥ್, ಮತ್ತಿತರರು ಇದ್ದಾರೆ.

ಈ ಸಂಜೆ

Jul 10, 2023



ನಗರದ ಜ್ಞಾನಜ್ಯೋತಿ ಸಭಾಂಗಣದಲ್ಲಿಂದು ನಡೆದ ಬೆಂಗಳೂರು ನಗರ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಶಿಕ್ಷಣ ತಜ್ಞ ನಿಸಾರ್ ಅಹಮ್ಮದ್, ಗಾಂಧಿ ಸ್ಮಾರಕ ನಿಧಿಯ ನಾಡೋಜ ಡಾ. ವೂಡೇಪಿ ಕೃಷ್ಣ, ಸಾಹಿತಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು. ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್, ಪದ್ಮಶ್ರೀ ಡಾ.ಸಿ.ಎನ್.ಮಂಜುನಾಥ್, ಕುಲಪತಿ ಲಿಂಗರಾಜ ಗಾಂಧಿ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.

ಸಂಜೆವಾಣಿ

ಸೋಮವಾರ 10 ಜುಲೈ 2023



ನಗರದ ಸೆಂಟ್ರಲ್ ಕಾಲೇಜಿನಲ್ಲಿ ನಡೆದ ಬೆಂ. ನಗರ ವಿವಿಯ 2ನೇ ಘಟಿಕೋತ್ಸವ ಸಮಾರಂಭದಲ್ಲಿ ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್‌ರವರು ವೊಡೇ ಪಿ. ಕೃಷ್ಣ, ನಿಸಾರ್ ಅಹ್ಮದ್, ತಾರಿಣಿ ಚಿದಾನಂದರವರಿಗೆ ಡಾಕ್ಟರೆಟ್ ಪದವಿ ಪ್ರದಾನ ಮಾಡಿ ಗೌರವಿಸಿದರು. ಜಯದೇವ ಹೃದ್ರೋಗ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್. ಮಂಜುನಾಥ್, ಮತ್ತಿತರರು ಇದ್ದಾರೆ.

ಕರ್ನಾಟಕ ನಮ್ಮ ಭಾನುವಾರ,9 ಜುಲೈ 2023

## ನಾಳೆ ಬೆಂಗಳೂರು ನಗರ ವಿವಿ ಘಟಿಕೋತ್ಸವ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರಮಾಣಪತ್ರ ವಿತರಣೆ

# ಪದಕಗಳಿಗೆ ಕೊರಳೊಡ್ಡಲಿರುವ 38 ವಿದ್ಯಾರ್ಥಿಗಳು

**ವಿಕ ಸುದ್ದಿಲೋಕ** ಬೆಂಗಳೂರು

ಬೆಂಗಳೂರು ನಗರ ವಿಶ್ವವಿದ್ಯಾಲಯವು ಜು. 10ರಂದು ಜ್ಞಾನಜ್ಯೋತಿ ಸಭಾಂಗಣದಲ್ಲಿ ಹಮ್ಮಿಕೊಂಡಿರುವ ದ್ವಿತೀಯ ವಾರ್ಷಿಕ ಘಟಿಕೋತ್ಸವದಲ್ಲಿ 38 ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕಗಳನ್ನು ಪ್ರದಾನ ಮಾಡಲಿದೆ.

### ಜ್ಞಾನಜ್ಯೋತಿ ಸಭಾಂಗಣದಲ್ಲಿ ಆಯೋಜನೆ

ಘಟಿಕೋತ್ಸವದ ಕುರಿತು ಸುದ್ದಿಗೋಷ್ಠಿಯಲ್ಲಿ ಶನಿವಾರ ಮಾಹಿತಿ ನೀಡಿದ ವಿವಿ ಕುಲಪತಿ ಪ್ರೊ. ಲಿಂಗರಾಜ ಗಾಂಧಿ ''ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಲಿದ್ದಾರೆ. ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್.ಮಂಜುನಾಥ್ ಘಟಿಕೋತ್ಸವ ಭಾಷಣ ಮಾಡಲಿದ್ದಾರೆ. ಉನ್ನತ ಶಿಕ್ಷಣ ಸಚಿವ ಡಾ. ಎಂ.ಸಿ.ಸುಧಾಕರ್ ಉಪಸ್ಥಿತರಿರುತ್ತಾರೆ,'' ಎಂದು ಹೇಳಿದರು.



''ಘಟಿಕೋತ್ಸವದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಧನೆ ಮಾಡಿರುವ ನಿಸಾರ್ ಅಹಮ್ಮದ್, ಸಮಾಜ ಸೇವೆ ಕ್ಷೇತ್ರದಲ್ಲಿ ಡಾ. ವೂಡೇ ಪಿ. ಕೃಷ್ಣ, ಸಾಹಿತ್ಯ ಕ್ಷೇತ್ರದಲ್ಲಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಲಾಗುವುದು. ರಾಜ್ಯಪಾಲರಿಗೆ 5 ಹೆಸರುಗಳನ್ನು ಕಳುಹಿಸಿಕೊಡಲಾಗಿತ್ತು. ಅಂತಿಮವಾಗಿ ಮೂವರನ್ನು ಆಯ್ಕೆ ಮಾಡಿದ್ದಾರೆ,'' ಎಂದು ತಿಳಿಸಿದರು.

''ವಿಶ್ವವಿದ್ಯಾಲಯ ಸ್ಥಾಪಿಸಿರುವ ಚಿನ್ನದ ಪದಕಗಳೊಂದಿಗೆ 13 ಮಂದಿ ದಾನಿಗಳು ನೀಡಿರುವ ಚಿನ್ನದ ಪದಕಗಳು ಮತ್ತು ನಗದು ಬಹುಮಾನಗಳನ್ನು ವಿದ್ಯಾರ್ಥಿಗಳಿಗೆ ನೀಡಲಾಗುವುದು. 35,911 ವಿದ್ಯಾರ್ಥಿಗಳು ಪದವಿ ಪ್ರಮಾಣಪತ್ರ ಪಡೆದುಕೊಳ್ಳಲಿದ್ದಾರೆ. ಇದರಲ್ಲಿ 21,239 ವಿದ್ಯಾರ್ಥಿನಿಯರು, 14672 ವಿದ್ಯಾರ್ಥಿಗಳಾಗಿದ್ದಾರೆ,'' ಎಂದು ವಿವರಿಸಿದರು.

**ಚಿನ್ನದ ಪದಕ ವಿಜೇತರು:** ಸೆಂಟ್ರಲ್ ಕಾಲೇಜಿನ ಎಂಎಸ್ಸಿ ರಸಾಯನಶಾಸ್ತ್ರ ವಿಭಾಗದ ಪದ್ಮಾವತಿ ವಿ.ಕೆ.ನಾಯರ್- 3 ಚಿನ್ನದ ಪದಕ, ಕೃಪಾನಿಧಿ ಕಾಲೇಜಿನ ಬಿ.ಕಾಂ ವಿದ್ಯಾರ್ಥಿ ಎಂ.ಅಜಿತ್ ಕುಮಾರ್- 3 ಚಿನ್ನದ ಪದಕ, ಶೇಷಾದ್ರಿಪುರಂ ವಾಣಿಜ್ಯ ಮತ್ತು ಮ್ಯಾನೇಜ್‌ಮೆಂಟ್ ಕಾಲೇಜಿನ ಬಿಬಿಎ ವಿದ್ಯಾರ್ಥಿನಿ ಎಸ್.ದೀಪ್ತಿ- 3 ಚಿನ್ನದ ಪದಕ ಪಡೆದಿದ್ದಾರೆ.



ಚಿತ್ರಕಲೆ ನನ್ನ ಹವ್ಯಾಸವಾಗಿದೆ. ಹಾಗಾಗಿ ಇಷ್ಟಪಟ್ಟು ಈ ವಿಷಯವನ್ನು ಪಡೆದುಕೊಂಡಿದ್ದೆ. ಬೆಂಗಳೂರು ನಗರ ವಿವಿಯಲ್ಲಿ ಅಪ್ಲೈಡ್ ಆರ್ಟ್ಸ್ ವಿಷಯದಲ್ಲಿ ಸ್ನಾತಕೋತ್ತರ ಪದವಿಯಲ್ಲಿ ಪ್ರಥಮ ರ್‍ಯಾಂಕ್ ಹಾಗೂ ಚಿನ್ನದ ಪದಕ ಲಭಿಸಿರುವುದು ತುಂಬ ಖುಷಿ ತಂದಿದೆ. ಇದೇ ವಿಷಯದಲ್ಲಿ ಬೆಂಗಳೂರು ನಗರ ವಿಶ್ವವಿದ್ಯಾಲಯದಲ್ಲೇ ಸಂಶೋಧನೆ (ಪಿಎಚ್‌ಡಿ) ಮಾಡುವ ಗುರಿ ಹೊಂದಿದ್ದೇನೆ.

**-ಅವನಿ ಶರ್ಮಾ** ಸ್ನಾತಕೋತ್ತರ ಪದವಿ



'ಬಿಬಿಎ (ಬ್ಯಾಚುಲರ್ ಆಫ್ ಬ್ಯುಸಿನೆಸ್ ಅಡ್ಮಿನಿಸ್ಟ್ರೇಷನ್) ವಿಷಯದಲ್ಲಿ 2022ರಲ್ಲಿ ಪದವಿ ಪಡೆದಿದ್ದೇನೆ. ಈ ವಿಷಯದಲ್ಲೇ ಚಿನ್ನದ ಪದಕ ಬಂದಿರುವುದು ಖುಷಿ ತಂದಿದೆ. ಸದ್ಯ ಖಾಸಗಿ ಕಂಪನಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದೇನೆ. ಎಂಬಿಎ ಪ್ರವೇಶ ಪರೀಕ್ಷೆ ಬರೆದಿದ್ದು, ಇದೇ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆಯಲು ಇಚ್ಛಿಸಿದ್ದೇನೆ.

**-ಎಸ್.ದೀಪ್ತಿ** ಶೇಷಾದ್ರಿಪುರಂ ವಾಣಿಜ್ಯ ಮತ್ತು ನಿರ್ವಹಣೆ ಕಾಲೇಜು



ಬಿ.ಕಾಂ ವಾಣಿಜ್ಯ ವಿಭಾಗದಲ್ಲಿ ಚಿನ್ನದ ಪದಕ ಬಂದಿರುವುದು ನನಗಿಂತ ನನ್ನ ಪೋಷಕರು ಮತ್ತು ಪ್ರಾಧ್ಯಾಪಕರಿಗೆ ಸಂತಸವನ್ನುಂಟು ಮಾಡಿದೆ. ಪ್ರಸ್ತುತ ಎಂಬಿಎ ಪದವಿಯಲ್ಲೂ ಮತ್ತೊಂದು ಚಿನ್ನದ ಪದಕ ಪಡೆಯಲು ಉತ್ತೇಜನ ನೀಡಿದೆ.

**-ಎಂ.ಅಜಿತ್‌ಕುಮಾರ್** ಬಿ.ಕಾಂ, ಕೃಪಾನಿಧಿ ಕಾಲೇಜು

# ನಾಳೆ ಬೆಂಗಳೂರು ನಗರ ವಿಶ್ವವಿದ್ಯಾಲಯ ಘಟಿಕೋತ್ಸವ

## ಮೂವರಿಗೆ 'ಗೌಡಾ' ಪ್ರದಾನ | ಜಯದೇವ ಆಸ್ಪತ್ರೆ ನಿರ್ದೇಶಕ ಡಾ. ಮಂಜುನಾಥ್‌ರಿಂದ ಮುಖ್ಯ ಭಾಷಣ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ವಾರ್ಷಿಕ ಘಟಿಕೋತ್ಸವ ಸೋಮವಾರ (ಜು.10) ಬೆಳಗ್ಗೆ 11 ಗಂಟೆಗೆ ಸೆಂಟ್ರಲ್ ಕಾಲೇಜು ಆವರಣದಲ್ಲಿರುವ ಜ್ಞಾನಜ್ಯೋತಿ ಸಭಾಂಗಣದಲ್ಲಿ ನಡೆಯಲಿದೆ.

ಈ ಕುರಿತು ಶನಿವಾರ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ವಿವಿ ಕುಲಪತಿ ಪ್ರೊ. ಲಿಂಗರಾಜು ಗಾಂಧಿ, ವಿಶ್ವವಿದ್ಯಾಲಯದ ಕುಲಾಧಿಪತಿಗಳೂ ಆಗಿರುವ ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್ ಅಧ್ಯಕ್ಷತೆ ವಹಿಸಲಿದ್ದಾರೆ. ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್.ಮಂಜುನಾಥ್ ಘಟಿಕೋತ್ಸವ ಭಾಷಣ ಮಾಡಲಿದ್ದಾರೆ. ಉನ್ನತ ಶಿಕ್ಷಣ ಸಚಿವ ಡಾ. ಎಂ.ಸಿ.ಸುಧಾಕರ್ ಉಪಸ್ಥಿತರಿರುತ್ತಾರೆ ಎಂದರು.

**ಮೂವರಿಗೆ ಗೌಡಾ:** ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿರುವ ಮೂವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುತ್ತಿದೆ. ಶಿಕ್ಷಣ ಕ್ಷೇತ್ರದಲ್ಲಿ ಪ್ರೆಸಿಡೆನ್ಸಿ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ನಿಸಾರ್ ಅಹಮದ್, ಸಮಾಜಸೇವೆಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ರಾಷ್ಟ್ರಕವಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುತ್ತಿದೆ. ರಾಜ್ಯಪಾಲರಿಗೆ 5 ಹೆಸರುಗಳನ್ನು ಕಳುಹಿಸಿಕೊಡಲಾಗಿತ್ತು. ಅಂತಿಮವಾಗಿ 3 ಹೆಸರನ್ನು ಆಯ್ಕೆ ಮಾಡಿದ್ದಾರೆ ಎಂದು ವಿವರಿಸಿದರು.

### 35 ಸಾವಿರ ಮಂದಿಗೆ ಪದವಿ

**38** ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕ ಒಳಗೊಂಡಂತೆ ವಿವಿಯ 29,914 ಸ್ನಾತಕ ಮತ್ತು 5,997 ಸ್ನಾತಕೋತ್ತರ ವಿಭಾಗ ಸೇರಿ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಗುತ್ತದೆ. 61 ರ‍್ಯಾಂಕ್ ವಿದ್ಯಾರ್ಥಿಗಳಿದ್ದಾರೆ. 21,239 ಮಹಿಳಾ ಮತ್ತು 14,672 ಪುರುಷರು ಪದವಿ ಸ್ವೀಕರಿಸಲಿದ್ದಾರೆ ಎಂದು ಕುಲಪತಿ ಮಾಹಿತಿ ನೀಡಿದರು.

### ಶುಲ್ಕ ಪಾವತಿಸಲು ಸಾಧ್ಯವಾಗದ ವಿದ್ಯಾರ್ಥಿನಿಗೆ ಎರಡು ಚಿನ್ನದ ಪದಕ

ಬೆಂಗಳೂರು: ಶುಲ್ಕ ಪಾವತಿಸಲು ಸಾಧ್ಯವಾಗದೆ ಕಷ್ಟಪಟ್ಟು ಪಾರ್ಟ್ ಟೈಂ ಕೆಲಸ ಮಾಡಿಕೊಂಡು ಓದಿದ ವಿದ್ಯಾರ್ಥಿನಿಯೊಬ್ಬರು



ಬೆಂಗಳೂರು ನಗರ ವಿವಿ ಘಟಿಕೋತ್ಸವದಲ್ಲಿ 2 ಚಿನ್ನದ ಪದಕವನ್ನು ಮುಡಿಗೇರಿಸಿಕೊಂಡಿದ್ದಾರೆ. ಬನಶಂಕರಿ 2ನೇ ಹಂತದಲ್ಲಿರುವ ಶ್ರೀಕೃಷ್ಣ ಕಾಲೇಜಿನಲ್ಲಿ ಎಂಬಿಎ ಪದವೀಧರೆಯಾಗಿರುವ ಪವಿತ್ರ ಎ. ಈ ಸಾಧನೆ ಮಾಡಿರುವವರು.

ತಂದೆ-ತಾಯಿ ಇಬ್ಬರೂ ಟೈಲರಿಂಗ್ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಬಡತನದಲ್ಲಿರುವ ಪವಿತ್ರಗೆ ಎಂಬಿಎ ಕೊನೆಯ ಸೆಮಿಸ್ಟರ್‌ನಲ್ಲಿ ಶುಲ್ಕ ಪಾವತಿಸಲು ಸಾಧ್ಯವಾಗದ ಕಾರಣ ಖಾಸಗಿ ಸಂಸ್ಥೆಯೊಂದರಲ್ಲಿ ಪಾರ್ಟ್ ಟೈಂ ಕೆಲಸಕ್ಕೆ ಸೇರಿಕೊಂಡು ಪದವಿ ಪೂರ್ಣಗೊಳಿಸಿದ್ದಾರೆ. ಈ ಕುರಿತು ಖುಷಿ ಹಂಚಿಕೊಂಡ ಅವರು, ಚಿನ್ನದ ಪದಕ ನಿರೀಕ್ಷೆ ಮಾಡಿರಲಿಲ್ಲ. ಪಾಲಕರು ಮತ್ತು ಪ್ರಾಧ್ಯಾಪಕರ ಪ್ರೋತ್ಸಾಹದಿಂದ ಪರೀಕ್ಷೆ ಚೆನ್ನಾಗಿ ಮಾಡಿದ್ದೆ. ಐಎಎಸ್ ಅಧಿಕಾರಿಯಾಗಬೇಕೆಂಬ ಗುರಿ ಇದೆ ಎಂದರು.



### ಪದ್ಮಾವತಿ ನಾಯರ್‌ಗೆ 3 ಚಿನ್ನ

ರಸಾಯನಶಾಸ್ತ್ರವನ್ನು ತುಂಬಾ ಇಷ್ಟಪಟ್ಟು ಓದಿದ್ದರಿಂದ ಚಿನ್ನದ ಪದಕ ಬರಬಹುದೆಂಬ ನಿರೀಕ್ಷೆ ಮಾಡಿದ್ದೆ. ಮೂರು ಚಿನ್ನ ಬಂದಿರುವುದಕ್ಕೆ ಖುಷಿಯಾಗುತ್ತಿದೆ. ಸದ್ಯ ಸಿಂಥೆಟಿಕ್ ಆರ್ಗನ್ ವಿಷಯದಲ್ಲಿ ಪಿಎಚ್.ಡಿ ಮಾಡಲು ಸಿದ್ಧತೆ ನಡೆಸುತ್ತಿದ್ದೇನೆ. ಸಂಶೋಧನೆ ಮತ್ತು ಅಭಿವೃದ್ಧಿಯಲ್ಲಿ ಮುಂದುವರಿಯುವ ಇಚ್ಛೆ ಹೊಂದಿದ್ದೇನೆ. ಪಾಲಕರ ಪ್ರೋತ್ಸಾಹದಿಂದಲೇ ಪದಕ ಪಡೆಯಲು ಸಾಧ್ಯವಾಗಿದೆ ಎಂದು ಸೆಂಟ್ರಲ್ ಕಾಲೇಜಿನಲ್ಲಿ ರಸಾಯನಶಾಸ್ತ್ರದಲ್ಲಿ ಎಂ.ಎಸ್ಸಿ ಪದವಿ ಪಡೆದಿರುವ ಪದ್ಮಾವತಿ ವಿ.ಕೆ. ನಾಯರ್ ತಿಳಿಸಿದರು.



ಮೂರು ಚಿನ್ನದ ಪದಕ ಬಂದಿರುವುದಕ್ಕೆ ಸಂತಸವಾಗುತ್ತಿದೆ. ಪ್ರಾಧ್ಯಾಪಕರ ಸಲಹೆ ಮತ್ತು ಪ್ರಾಂಶುಪಾಲರ ಮಾರ್ಗದರ್ಶನದಲ್ಲಿ ನಡೆದಿದ್ದರಿಂದ ಚಿನ್ನದ ಪದಕ ಗಳಿಸಲು ಸಾಧ್ಯವಾಗಿದೆ. ಸದ್ಯ ಆರ್‌ಸಿ ಕಾಲೇಜಿನಲ್ಲಿ ಎಂಬಿಎ ವ್ಯಾಸಂಗ ಮಾಡುತ್ತಿದ್ದು, ಸಿಎ ಮಾಡಬೇಕೆಂಬ ಗುರಿ ಇದೆ.

| ಅಜಿತ್‌ಕುಮಾರ್ ಎಂ. ಕೃಪಾನಿಧಿ ಕಾಲೇಜು, 3 ಚಿನ್ನದ ಪದಕ

ಸಂಯುಕ್ತ ಕರ್ನಾಟಕ
ಭಾನುವಾರ 09 ಜುಲೈ 2023

# ಬೆಂ.ವಿವಿ ಘಟಿಕೋತ್ಸವ

ಬೆಂಗಳೂರು: ಬೆಂ.ನಗರ ವಿವಿಯ ದ್ವಿತೀಯ ವಾರ್ಷಿಕ ಘಟಿಕೋತ್ಸವ ಜು.10ರಂದು ಜ್ಞಾನಜ್ಯೋತಿ ಸಭಾಂಗಣ ಸೆಂಟ್ರಲ್ ಕಾಲೇಜು ಆವರಣದಲ್ಲಿ ನಡೆಯಲಿದೆ ಎಂದು ಬೆಂ.ವಿವಿಯ ಕುಲಪತಿ ಪ್ರೊ.ಲಿಂಗರಾಜ ಗಾಂಧಿ ತಿಳಿಸಿದ್ದಾರೆ.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ದ್ವಿತೀಯ ವಾರ್ಷಿಕ ಘಟಿಕೋತ್ಸವದ ಅಧ್ಯಕ್ಷತೆಯನ್ನು ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್ ವಹಿಸಲಿದ್ದು ಮುಖ್ಯಅತಿಥಿಗಳಾಗಿ ಉನ್ನತ ಶಿಕ್ಷಣ ಸಚಿವ ಡಾ.ಎಂ.ಸಿ.ಸುಧಾಕರ್, ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆ ನಿರ್ದೇಶಕ ಡಾ.ಸಿ.ಎನ್. ಮಂಜುನಾಥ್ ಭಾಗವಹಿಸಲಿದ್ದಾರೆಂದರು.

ಇದೇ ವೇಳೆ ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿದ ಮೂವರು ಗಣ್ಯರಾದ ನಿಸಾರ್ ಅಹ್ಮದ್ (ಶಿಕ್ಷಣ), ತಾರಿಣಿ ಚಿದಾನಂದ (ಸಾಹಿತ್ಯ), ಡಾ.ವೂಡೇ.ಪಿ.ಕೃಷ್ಣ (ಸಮಾಜಸೇವೆ) ಅವರಿಗೆ ಡಾಕ್ಟರೇಟ್ ಪದವಿ ಪ್ರದಾನ ಮಾಡಲಾಗುತ್ತಿದೆ. ಕಲಾ, ವಿಜ್ಞಾನ, ವಾಣಿಜ್ಯ ವಿಷಯದ 35,911 ವಿದ್ಯಾರ್ಥಿಗಳಿಗೆ ಪದವಿ ಹಾಗೂ 5997 ವಿದ್ಯಾರ್ಥಿಗಳಿಗೆ ಸ್ನಾತಕೋತ್ತರ ಪದವಿ ನೀಡಲಾಗುತ್ತಿದೆ. ಘಟಿಕೋತ್ಸವದಲ್ಲಿ ಒಟ್ಟು 61 ರ್‍ಯಾಂಕ್ ಪ್ರಮಾಣಪತ್ರ ಪಡೆದ ವಿದ್ಯಾರ್ಥಿಗಳ ಪೈಕಿ 51 ವಿದ್ಯಾರ್ಥಿಗಳಿಗೆ ಚಿನ್ನದ ಪದಕ ಪ್ರದಾನ ಮಾಡಲಾಗುತ್ತಿದೆ ಎಂದು ತಿಳಿಸಿದರು.

ಪ್ರಜಾವಾಣಿ
ಭಾನುವಾರ • ಜುಲೈ 9, 2023

# ಬೆಂಗಳೂರು ನಗರ ವಿ.ವಿ ಘಟಿಕೋತ್ಸವ ನಾಳೆ

ಪ್ರಜಾವಾಣಿ ವಾರ್ತೆ

ಬೆಂಗಳೂರು: ನಗರದ ಸೆಂಟ್ರಲ್ ಕಾಲೇಜು ಸಭಾಂಗಣದಲ್ಲಿ ಜುಲೈ 10ರಂದು ಬೆಳಿಗ್ಗೆ 11ಕ್ಕೆ ಬೆಂಗಳೂರು ನಗರ ವಿಶ್ವವಿದ್ಯಾಲಯದ ಎರಡನೇ ಘಟಿಕೋತ್ಸವ ಆಯೋಜಿಸಲಾಗಿದೆ. 5,997 ಸ್ನಾತಕೋತ್ತರ ವಿದ್ಯಾರ್ಥಿಗಳು ಸೇರಿದಂತೆ 35,911 ವಿದ್ಯಾರ್ಥಿಗಳು ಪದವಿಗೆ ಅರ್ಹರಾಗಿದ್ದಾರೆ.

ರಾಜ್ಯಪಾಲ ಥಾವರಚಂದ್ ಗೆಹಲೋತ್, ಉನ್ನತ ಶಿಕ್ಷಣ ಸಚಿವ ಡಾ.ಎಂ.ಸಿ.ಸುಧಾಕರ್ ಉಪಸ್ಥಿತ-ರಿರುವರು. ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ.ಸಿ.ಎನ್.ಮಂಜುನಾಥ್ ಘಟಿಕೋತ್ಸವ ಭಾಷಣ ಮಾಡುವರು. 61 ವಿದ್ಯಾರ್ಥಿಗಳು ರ‍್ಯಾಂಕ್ ಪಡೆದಿದ್ದು, 51 ವಿದ್ಯಾರ್ಥಿಗಳಿಗೆ ಚಿನ್ನದ ಪದಕ ವಿತರಿಸಲಾಗುವುದು. ಪದವಿ ಪಡೆಯುತ್ತಿರುವವರಲ್ಲಿ ಶೇ 60ರಷ್ಟು ಮಹಿಳೆಯರು, ಶೇ 40ರಷ್ಟು ಪುರುಷರು ಇದ್ದಾರೆ ಎಂದು ವಿಶ್ವವಿದ್ಯಾಲಯದ ಕುಲಪತಿ ಪ್ರೊ.ಲಿಂಗರಾಜ ಗಾಂಧಿ ಶನಿವಾರ ಪತ್ರಿಕಾಗೋಷ್ಠಿಯಲ್ಲಿ ಮಾಹಿತಿ ನೀಡಿದರು.

ಹೊಸದಾಗಿ ಸ್ಥಾಪಿತವಾದ ವಿಶ್ವ ವಿದ್ಯಾಲಯವಾದ ಕಾರಣ ವಿಶ್ವವಿದ್ಯಾಲ-ಯವೇ 38 ಚಿನ್ನದ ಪದಕ ನೀಡುತ್ತಿದೆ. ದಾನಿಗಳು 13 ಚಿನ್ನದ ಪದಕ ಸ್ಥಾಪಿಸಿದ್ದಾರೆ. ಎಂಎಸ್ಸಿ ರಸಾಯನ ಶಾಸ್ತ್ರದಲ್ಲಿ ಪದ್ಮಾವತಿ ಕೆ.ವಿ. ನಾಯರ್, ಬಿ.ಕಾಂನಲ್ಲಿ ಕೃಪಾನಿಧಿ ವಾಣಿಜ್ಯ ಕಾಲೇಜಿನ ಅಜಿತ್ ಕುಮಾರ್ ಎಂ, ಬಿಬಿಎನಲ್ಲಿ ಶೇಷಾದ್ರಿಪುರಂ ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜಿನ ಎಸ್. ದೀಪ್ತಿ ತಲಾ ಮೂರು ಚಿನ್ನದ ಪದಕ ಪಡೆದಿದ್ದಾರೆ ಎಂದು ಹೇಳಿದರು.

ಪತ್ರಿಕಾಗೋಷ್ಠಿಯಲ್ಲಿ ವಿಶ್ವವಿ-ದ್ಯಾಲಯದ ಕುಲಸಚಿವ ಸಿ.ಎನ್. ಶ್ರೀಧರ್, ಮೌಲ್ಯಮಾಪನ ಕುಲಸಚಿವ ವಿ.ಲೋಕೇಶ್ ಇದ್ದರು.

## ಕುವೆಂಪು ಪುತ್ರಿಗೆ ಗೌರವ ಡಾಕ್ಟರೇಟ್

ಸಾಹಿತ್ಯ ಕ್ಷೇತ್ರದ ಸೇವೆಗಾಗಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುತ್ತಿದೆ. ಶಿಕ್ಷಣ ಕ್ಷೇತ್ರದ ಸೇವೆಗಾಗಿ ಪ್ರೆಸಿಡೆನ್ಸಿ ವಿಶ್ವವಿದ್ಯಾಲಯದ ಕುಲಪತಿ ನಿಸಾರ್ ಅಹಮದ್, ಸಮಾಜ ಸೇವೆಗಾಗಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಅವರು ಗೌರವ ಡಾಕ್ಟರೇಟ್‌ಗೆ ಭಾಜನರಾಗಿದ್ದಾರೆ.

ಉದಯವಾಣಿ

ಭಾನುವಾರ, ಜುಲೈ 9, 2023

# ನಾಳೆ ಬೆಂಗಳೂರು ನಗರ ವಿಶ್ವವಿದ್ಯಾಲಯ ಘಟಿಕೋತ್ಸವ

**ಬೆಂಗಳೂರು:** ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ವಾರ್ಷಿಕ ಘಟಿಕೋತ್ಸವವು ಜು.10ರಂದು ಬೆಳಗ್ಗೆ 11 ಗಂಟೆಗೆ ಸೆಂಟ್ರಲ್ ಕಾಲೇಜು ಆವರಣದಲ್ಲಿರುವ ಜ್ಞಾನ ಜ್ಯೋತಿ ಸಭಾಂಗಣದಲ್ಲಿ ನಡೆಯಲಿದೆ. ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್ ಪದವಿ ಪ್ರದಾನ ಮಾಡಲಿದ್ದಾರೆ.

ಈ ಕುರಿತು ಶನಿವಾರ ಸುದ್ದಿಗೋಷ್ಠಿಯಲ್ಲಿ ಮಾಹಿತಿ ನೀಡಿದ ವಿವಿಯ ಕುಲಪತಿ ಪ್ರೊ. ಲಿಂಗರಾಜು ಗಾಂಧಿ ಅವರು, ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ. ಸಿ.ಎನ್. ಮಂಜುನಾಥ್ ಘಟಿಕೋತ್ಸವ ಭಾಷಣ ಮಾಡಲಿದ್ದಾರೆ.

**ಮೂವರಿಗೆ ಗೌರವ ಡಾಕ್ಟರೇಟ್:** ವಿವಿಧ ಕ್ಷೇತ್ರದಲ್ಲಿ ಸಾಧನೆ ಮಾಡಿರುವ ಮೂವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುತ್ತಿದೆ. ಶಿಕ್ಷಣ ಕ್ಷೇತ್ರದಲ್ಲಿ ಪ್ರೆಸಿಡೆನ್ಸಿ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷ ನಿಸಾರ್ ಅಹಮ್ಮದ್, ಸಮಾಜ ಸೇವೆಯಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ರಾಷ್ಟ್ರಕವಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ ಅವರಿಗೆ



ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುತ್ತಿದೆ. ರಾಜ್ಯಪಾಲರಿಗೆ 5 ಹೆಸರುಗಳನ್ನು ಕಳುಹಿಸಿಕೊಡಲಾಗಿತ್ತು. ಅಂತಿಮವಾಗಿ 3 ಹೆಸರನ್ನು ಆಯ್ಕೆ ಮಾಡಿದ್ದಾರೆ ಎಂದರು.

ನಮ್ಮದು ಹೊಸ ವಿವಿಯಾಗಿದ್ದರೂ 1.40 ಲಕ್ಷಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ನಾವು ಚಿನ್ನದ ಪದಕಗಳ ಸಂಖ್ಯೆ ಹೆಚ್ಚಿಸಬೇಕು ಎಂಬ ಆಶಯ ಹೊಂದಿದ್ದೇವೆ. ಈ ನಿಟ್ಟಿನಲ್ಲಿ ದಾನಿಗಳ ಸಹಾಯದ ನಿರೀಕ್ಷೆಯಲ್ಲಿದ್ದೇವೆ. ಕನಿಷ್ಠ 6 ಲಕ್ಷ ರೂಗಳನ್ನು ನೀಡಿ ಚಿನ್ನದ ಪದಕದ ಪ್ರಾಯೋಜಕತ್ವ ಪಡೆಯಲು ದಾನಿಗಳು ಮುಂದೆ ಬರಬೇಕು ಎಂದು ಪ್ರೊ. ಲಿಂಗರಾಜು ಮನವಿ ಮಾಡಿದ್ದಾರೆ.

## ಚಿನ್ನದ ಪದಕ ವಿಜೇತರು

ಸೆಂಟ್ರಲ್ ಕಾಲೇಜಿನ ಎಂ.ಎಸ್ಸಿ ರಸಾಯನಶಾಸ್ತ್ರ ವಿಭಾಗದ ಪದ್ಮಾವತಿ ವಿ.ಕೆ. ನಾಯರ್– 3 ಚಿನ್ನದ ಪದಕ, ಕೃಪಾನಿಧಿ ಕಾಲೇಜಿನ ಬಿ.ಕಾಂ.ವಿದ್ಯಾರ್ಥಿ ಅಜಿತ್‌ಕುಮಾರ್ ಎಂ.– 3 ಚಿನ್ನದ ಪದಕ, ಶೇಷಾದ್ರಿಪುರಂ ವಾಣಿಜ್ಯ ಮತ್ತು ಮ್ಯಾನೇಜ್‌ಮೆಂಟ್ ಕಾಲೇಜಿನ ಬಿಬಿಎ ವಿದ್ಯಾರ್ಥಿ ಎಸ್. ದೀಪ್ತಿ– 3 ಚಿನ್ನದ ಪದಕ ಪಡೆದಿದ್ದಾರೆ.

**35 ಸಾವಿರ ವಿದ್ಯಾರ್ಥಿಗಳಿಗೆ ಪದವಿ:** 38 ವಿದ್ಯಾರ್ಥಿಗಳಿಗೆ. 51 ಚಿನ್ನದ ಪದಕ ಒಳಗೊಂಡಂತೆ ವಿಶ್ವವಿದ್ಯಾಲಯದ 29,914 ಸ್ನಾತಕ ಮತ್ತು 5,997 ಸ್ನಾತಕೋತ್ತರ ವಿಭಾಗ ಸೇರಿ 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಗುತ್ತದೆ. ಇದರಲ್ಲಿ 61 ರ್‍ಯಾಂಕ್ ವಿದ್ಯಾರ್ಥಿಗಳಿದ್ದಾರೆ. 21,239 ಮಹಿಳಾ ಮತ್ತು 14,672 ಪುರುಷರು ಪದವಿ ಸ್ವೀಕರಿಸಲಿದ್ದಾರೆ ಎಂದು ತಿಳಿಸಿದರು.

ಹೊಸದಿಗಂತ
ಮಂಗಳವಾರ, 11 ಜುಲೈ 2023, ಬೆಂಗಳೂರು

## ರಾಜ್ಯಪಾಲ ಥಾವರ್ ಚಂದ್ ಗೆಹಲೋತ್ ಅಭಿಪ್ರಾಯ

# ಶಿಕ್ಷಣದಲ್ಲಿ ಮಾನವೀಯ ಮೌಲ್ಯವಿರಲಿ

**ಬೆಂಗಳೂರು:** ದೇಶದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ತಾಂತ್ರಿಕ ಅಭಿವೃದ್ಧಿಗಾಗಿ ಶಿಕ್ಷಣದಲ್ಲಿ ಸಾಂಸ್ಕೃತಿಕ ಮತ್ತು ಮಾನವೀಯ ಮೌಲ್ಯ ಸೇರಿಸುವುದನ್ನು ಖಚಿತಪಡಿಸಿಕೊಳ್ಳುವುದು ಶಿಕ್ಷಣ ತಜ್ಞರ ಜವಾಬ್ದಾರಿಯಾಗಿದೆ ಎಂದು ರಾಜ್ಯಪಾಲ ಥಾವರ್ ಚಂದ್ ಗೆಹಲೋತ್ ಅಭಿಪ್ರಾಯಪಟ್ಟಿದ್ದಾರೆ.

ನಗರದ ಸೆಂಟ್ರಲ್ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ಬೆಂಗಳೂರು ನಗರ ವಿಶ್ವವಿದ್ಯಾಲಯದ 2ನೇ ಘಟಿಕೋತ್ಸವದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅವರು, ವಿಶ್ವವಿದ್ಯಾನಿಲಯಗಳು ಸಾಮಾಜಿಕ ಸಂಪ್ರದಾಯದ ಸಂಶೋಧನೆಯನ್ನು ಉತ್ತೇಜಿಸುತ್ತವೆ. ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುತ್ತವೆ. ಇದರೊಂದಿಗೆ ಬಡವರ, ಅತ್ಯಂತ ದುರ್ಬಲರ ಹಾಗೂ ನಮ್ಮ ಪರಿಸರದ ಕಾಳಜಿಗೆ ಆದ್ಯತೆ ನೀಡಬೇಕು ಎಂದು ತಿಳಿಸಿದರು.

ಡಿಜಿಟಲ್ ಚಟುವಟಿಕೆಗಳನ್ನು ಹೆಚ್ಚು ಹರಡಲು ಬಳಕೆದಾರರಿಗೆ ತಂತ್ರಜ್ಞಾನವನ್ನು ಸರಳ ಮತ್ತು ವೈಶಿಷ್ಟ್ಯಗಳಿಂದ ಸಮೃದ್ಧಗೊಳಿಸುವುದು ಅವಶ್ಯಕವಾಗಿದೆ. ಸ್ಮಾರ್ಟ್, ಅದ್ಭುತ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳು ಆದರ್ಶ ಸಮಾಜದ ರಚನೆಯ ಆಧಾರ ಸ್ತಂಭಗಳು ಎಂದು ಪ್ರಶಂಸಿಸಿದರು.

ನಮ್ಮ ಪ್ರಾಚೀನ ಶಿಕ್ಷಣ ಪದ್ಧತಿಯು ವ್ಯಕ್ತಿತ್ವ ನಿರ್ಮಾಣ, ಆಧ್ಯಾತ್ಮಿಕ ಜ್ಞಾನದ ಜೊತೆಗೆ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯ ಮೇಲೆ ಕೇಂದ್ರೀಕೃತವಾಗಿತ್ತು. ಇದರಿಂದಾಗಿ ನಾವು ವಿಶ್ವಗುರು ಎಂದು ಪರಿಗಣಿಸಲ್ಪಟ್ಟಿದ್ದೆವು. ಇಂದು ನಮ್ಮ ಆರ್ಥಿಕತೆಯು ವಿಶ್ವದ 5ನೇ ಅತಿದೊಡ್ಡ ಆರ್ಥಿಕತೆಯಾಗಿದೆ. ಭವ್ಯವಾದ ಮತ್ತು ಅಭಿವೃದ್ಧಿ ಹೊಂದಿದ ಭಾರತವನ್ನು ನಿರ್ಮಿಸಲು ನಮಗೆ ಮುಂದಿನ 25 ವರ್ಷಗಳಿವೆ. ಈ ಅವಧಿಯನ್ನು ಅವಕಾಶವನ್ನಾಗಿ ಪರಿವರ್ತಿಸುವಲ್ಲಿ ನಾವು ಪಾಲುದಾರರಾಗಿರಬೇಕು ಎಂದು ಕರೆ ನೀಡಿದರು.



ಜಯದೇವ ಹೃದ್ರೋಗ ಆಸ್ಪತ್ರೆ ನಿರ್ದೇಶಕ ಡಾ.ಸಿ.ಎನ್. ಮಂಜುನಾಥ್ ಮಾತನಾಡಿ, ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ನಿಧಿಯ ಕೊರತೆಯಿಂದಾಗಿ ಸಂಶೋಧನೆಯಲ್ಲಿ ಹಿಂದಿವೆ, ಸಂಶೋಧನಾ ಚಟುವಟಿಕೆಗಳಿಗೆ ಹಣ ವಿನಿಯೋಗಿಸಲು ರಾಜ್ಯ ಮತ್ತು ಯುಜಿಸಿ ಎರಡೂ ಕಡೆಯಿಂದ ಕಡ್ಡಾಯವಾಗ ಬೇಕು. ಸಂಶೋಧನೆಯಿಲ್ಲದಿದ್ದರೆ ಕಲಿಕೆಯ ಪ್ರಕ್ರಿಯೆಯು ನಿಂತ ನೀರಾಗುತ್ತದೆ. ನಮ್ಮಲ್ಲಿ ಶೇ.10ರಷ್ಟು ಪ್ರತಿಭೆಯಿದ್ದರೆ ಶೇ.90ರಷ್ಟು ಪರಿಶ್ರಮವಿರಬೇಕು, ಅದಕ್ಕಾಗಿ ನಾವು ಪ್ರಮಾಣಿಕವಾಗಿ ಕೆಲಸ ಮಾಡಬೇಕು ಎಂದು ಸಲಹೆ ನೀಡಿದರು.

ಈ ಸಂದರ್ಭದಲ್ಲಿ ಶೇಷಾದ್ರಿಪುರ ಎಜುಕೇಶನ್ ಟ್ರಸ್ಟ್ ಗೌರವ ಕಾರ್ಯದರ್ಶಿ ವೂಡೆ ಪಿ.ಕೃಷ್ಣ, ಪ್ರೆಸಿಡೆನ್ಸಿ ಯುನಿವರ್ಸಿಟಿ ಕುಲಪತಿ ನಿಸಾರ್ ಅಹಮದ್ ಹಾಗೂ ಲೇಖಕಿ ತಾರಿಣಿ ಚಿದಾನಂದರವರಿಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಲಾಯಿತು. ಜತೆಗೆ ಮೂವರು ವಿದ್ಯಾರ್ಥಿಗಳು ತಲಾ 3 ಚಿನ್ನದ ಪದಕ, 6 ವಿದ್ಯಾರ್ಥಿಗಳು ತಲಾ 2 ಚಿನ್ನದ ಪದಕ ಹಾಗೂ 28 ವಿದ್ಯಾರ್ಥಿಗಳಿಗೆ ತಲಾ 1 ಚಿನ್ನದ ಪದಕ ಹಾಗೂ 24 ವಿದ್ಯಾರ್ಥಿಗಳು ಪ್ರಥಮ ರ್‍ಯಾಂಕ್ ಪಡೆದುಕೊಂಡರು.

ಈ ವೇಳೆ ವಿವಿ ಕುಲಪತಿ ಲಿಂಗರಾಜು ಗಾಂಧಿ ಉಪಸ್ಥಿತರಿದ್ದರು.

ಈ ಸಂಜೆ

ಸೋಮವಾರ, 10 ಜುಲೈ, 2023



ನಗರದ ಜ್ಞಾನಜ್ಯೋತಿ ಸಭಾಂಗಣದಲ್ಲಿಂದು ನಡೆದ ಬೆಂಗಳೂರು ನಗರ ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಶಿಕ್ಷಣ ತಜ್ಞ ನಿಸಾರ್ ಅಹಮ್ಮದ್, ಗಾಂಧಿ ಸ್ಮಾರಕ ನಿಧಿಯ ನಾಡೋಜ ಡಾ. ವೂಡೇಪಿ ಕೃಷ್ಣ, ಸಾಹಿತಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಯಿತು. ರಾಜ್ಯಪಾಲ ಥಾವರ್‌ಚಂದ್ ಗೆಲ್ಲೋಟ್, ಪದ್ಮಶ್ರೀ ಡಾ.ಸಿ.ಎನ್.ಮಂಜುನಾಥ್, ಕುಲಪತಿ ಲಿಂಗರಾಜ ಗಾಂಧಿ ಸೇರಿದಂತೆ ಹಲವು ಗಣ್ಯರು ಪಾಲ್ಗೊಂಡಿದ್ದರು.

ಉದಯವಾಣಿ ಶುಕ್ರವಾರ, ಜುಲೈ 21, 2023

# ಆತಂಕಕ್ಕೆ ಒಳಗಾಗದೆ ಅಂತಃಕರಣದಿಂದ ಓದಿ

## ವಿದ್ಯಾರ್ಥಿಗಳಿಗೆ ಡಾ| ವೀರೇಶಾನಂದ ಸರಸ್ವತಿ ಸ್ವಾಮೀಜಿ ಸಲಹೆ

ಕೆಂಗೇರಿ: ಆತಂಕಕ್ಕೆ ಒಳಗಾಗದೆ ಅಂತಃಕರಣದಿಂದ ವಿದ್ಯಾಭ್ಯಾಸ ಮಾಡಿದರೆ ಉನ್ನತವಾದ ಯಶಸ್ಸು ಸಿಗುತ್ತದೆ ಎಂದು ತುಮಕೂರಿನ ರಾಮಕೃಷ್ಣ-ವಿವೇಕಾನಂದ ಆಶ್ರಮದ ಪೀಠಾಧ್ಯಕ್ಷ ಡಾ.ವೀರೇಶಾನಂದ ಸರಸ್ವತಿ ಸ್ವಾಮೀಜಿ ಹೇಳಿದರು.

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ 'ಪ್ರಥಮ ಪಿಯುಸಿ ವಿದ್ಯಾರ್ಥಿಗಳ ಪುನಶ್ಚೇತನ' ಮತ್ತು 'ಎಸ್ಇಟಿ ಪ್ರತಿಭಾ ಪುರಸ್ಕಾರ' ಸಮಾರಂಭದಲ್ಲಿ ಮಾತನಾಡಿದ ಅವರು, ಛಲದಿಂದ ಮುನ್ನಡೆಯಬೇಕು ಹಾಗೂ ಇತರರಿಗೆ ಬೆಳಕಾಗಬೇಕು ಎಂದು ಕಿವಿಮಾತು ಹೇಳಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಶಿಶುವಿಹಾರದಿಂದ ಪಿಎಚ್‌ಡಿ ಯ ತನಕ ವ್ಯಾಸಂಗ ನೀಡುತ್ತಿದೇವೆ. ಕಾಲೇಜಿನ ಉತ್ತಮ ಶಿಕ್ಷಕರು ಹಾಗೂ ಆಡಳಿತ ಮಂಡಳಿಯ ಪ್ರಾಮಾಣಿಕ ಬದ್ಧತೆಯ ಫಲವಾಗಿ ಇತ್ತೀಚೆಗೆ ನ್ಯಾಕ್ ಸಂಸ್ಥೆ ನೀಡುವ ಎ ++ ಗ್ರೇಡ್ ನೀಡಿ ನಮ್ಮ ಶಿಕ್ಷಣದ ಗುಣಮಟ್ಟವನ್ನು ಗುರುತಿಸಿದೆ. ಈ ಸಾಲಿನಲ್ಲಿ ರಾಜ್ಯದ 64 ರ್‍ಯಾಂಕ್‌ಗಳನ್ನು ಪಡೆದುಕೊಂಡಿದೆ. ಇದು ಎಸ್.ಇ.ಟಿ. ಸಂಸ್ಥೆಯ ಹೆಮ್ಮೆಯ ವಿಷಯವಾಗಿದೆ ಎಂದು ಹೇಳಿದರು.

ಕಾಲೇಜಿನ ಪ್ರಾಂಶುಪಾಲ ಡಾ.ಮಂಜುನಾಥ್ ಮಾತನಾಡಿ, 130ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಲಾಗುತ್ತಿದೆ ಎಂದರು. ಈ ವೇಳೆ ಕಿಮ್ಸ್ ಮೆಡಿಕಲ್ ಕಾಲೇಜಿನ ಅಧ್ಯಕ್ಷ ಡಾ.ಟಿ.ಎಚ್.ಆಂಜಿನಪ್ಪ ಶೇಷಾದ್ರಿಪುರಂ ಕಾಲೇಜಿನ ಆಡಳಿತ ಮಂಡಳಿ ಅಧ್ಯಕ್ಷ ಸಿ. ಪ್ರಶಾಂತ್ ಕುಮಾರ್, ಉಪಾಧ್ಯಕ್ಷ ಟಿ.ಎಸ್.ಹಜ್ಜಾರಪ್ಪ ಸಹ ಕಾರ್ಯದರ್ಶಿ ಎಂ.ಎಸ್.ನಟರಾಜು, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಜಯರಾಮ್ ಮತ್ತಿತರರಿದ್ದರು.



ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವನ್ನು ಡಾ| ವೀರೇಶಾನಂದ ಸರಸ್ವತಿ ಸ್ವಾಮೀಜಿ, ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮತ್ತಿತರರು ಉದ್ಘಾಟಿಸಿದರು.

### ಸಂಸ್ಥೆಯಲ್ಲಿ 24 ಸಾವಿರ ವಿದ್ಯಾರ್ಥಿಗಳು ವ್ಯಾಸಂಗ

ನಗರದಲ್ಲಿ ಆನಂದಮ್ಮ ಹಾಗೂ ಸೀತಮ್ಮ ಎಂಬ ಇಬ್ಬರು ಮಹಿಳೆಯರು ಆರಂಭಿಸಿದ ಈ ಸಂಸ್ಥೆಗೆ 93 ವರ್ಷಗಳ ಇತಿಹಾಸ ಇದೆ. 20 ವಿದ್ಯಾರ್ಥಿಗಳಿಂದ ಆರಂಭಿಸಿದ ಸಂಸ್ಥೆ ಇಂದು 24,500 ವಿದ್ಯಾರ್ಥಿಗಳನ್ನು ಹೊಂದುವ ಮೂಲಕ ಬೃಹದಾಕಾರವಾಗಿ ಬೆಳೆದಿದೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮೆಚ್ಚುಗೆ ವ್ಯಕ್ತಪಡಿಸಿದರು.

ಪ್ರಜಾವಾಣಿ
ಭಾನುವಾರ ● ಜುಲೈ 23, 2023




ಶೇಷಾದ್ರಿಪುರ ಕಾನೂನು ಮಹಾವಿದ್ಯಾಲಯ ಆಯೋಜಿಸಿದ್ದ 5ನೇ ರಾಷ್ಟ್ರೀಯ ಮಟ್ಟದ ಅಣಕು ನ್ಯಾಯಾಲಯ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಪಿಇಎಸ್ ವಿ.ವಿ ವಿದ್ಯಾರ್ಥಿಗಳಿಗೆ ಹೈಕೋರ್ಟ್ ನ್ಯಾಯಮೂರ್ತಿ ಅನಂತ್ ರಾಮನಾಥ್ ಹೆಗ್ಡೆ ₹30 ಸಾವಿರ ನಗದು, ಟ್ರೋಫಿ ವಿತರಿಸಿದರು. ಜಸ್ಟೀಸ್ ಸಿ.ಎಂ. ಪೂಣಚ್ಚ, ಶೇಷಾದ್ರಿಪುರ ಶಿಕ್ಷಣ ಸಂಸ್ಥೆಗಳ ಟ್ರಸ್ಟ್‌ನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಟ್ರಸ್ಟಿ ಮೃತ್ಯುಂಜಯ ಆರ್.ಬಿ. ಇದ್ದರು

ಕನ್ನಡಪ್ರಭ ಭಾನುವಾರ 9.7.2023

# ಬೆಂ. ನಗರ ವಿವಿ ಘಟಿಕೋತ್ಸವ ನಾಳೆ

## ನಿಸಾರ್, ವೂಡೇ ಕೃಷ್ಣ, ತಾರಿಣಿಗೆ ಗೌರವ ಡಾಕ್ಟರೆಟ್ 35 ಸಾವಿರ ವಿದ್ಯಾರ್ಥಿಗಳಿಗೆ ಪದವಿ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಬೆಂಗಳೂರು ನಗರ ವಿಶ್ವವಿದ್ಯಾನಿಲಯದ ದ್ವಿತೀಯ ಘಟಿಕೋತ್ಸವವು ಜು.10ರಂದು ನಡೆಯಲಿದ್ದು, ಶಿಕ್ಷಣ ತಜ್ಞ ನಿಸಾರ್ ಅಹಮದ್, ಸಮಾಜ ಸೇವಕ ವೂಡೇ ಪಿ. ಕೃಷ್ಣ ಹಾಗೂ ಸಾಹಿತಿ ತಾರಿಣಿ ಚಿದಾನಂದ ಅವರಿಗೆ ಗೌರವ ಡಾಕ್ಟರೆಟ್ ಪ್ರದಾನ ಮಾಡಲಾಗುವುದು ಎಂದು ವಿವಿ ಕುಲಪತಿ ಪ್ರೊ.ಲಿಂಗರಾಜ ಗಾಂಧಿ ತಿಳಿಸಿದರು.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, ಸೋಮವಾರ ಬೆಳಿಗ್ಗೆ 11ಕ್ಕೆ ಅರಮನೆ ರಸ್ತೆಯ ಸೆಂಟ್ರಲ್ ಕಾಲೇಜಿನ ಜ್ಞಾನಜ್ಯೋತಿ ಸಭಾಂಗಣದಲ್ಲಿ ಘಟಿಕೋತ್ಸವ ನಡೆಯಲಿದೆ. ಪ್ರೆಸಿಡೆನ್ಸಿ ವಿವಿ ಕುಲಾಧಿಪತಿ ನಿಸಾರ್ ಅಹಮದ್(ಶಿಕ್ಷಣ), ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ(ಸಮಾಜ ಸೇವೆ), ರಾಷ್ಟ್ರಕವಿ ಕುವೆಂಪು ಅವರ ಪುತ್ರಿ ತಾರಿಣಿ ಚಿದಾನಂದ (ಸಾಹಿತ್ಯ ಕ್ಷೇತ್ರ) ಅವರಿಗೆ ಗೌರವ ಡಾಕ್ಟರೇಟ್ ಪ್ರದಾನ ಮಾಡಲಾಗುವುದು ಎಂದು ವಿವರಿಸಿದ್ದರು.

ವಿವಿ ಕುಲಾಧಿಪತಿಗಳೂ ಆಗಿರುವ ರಾಜ್ಯಪಾಲ ಥಾವರ್‌ಚಂದ್ ಗೆಹಲೋತ್ ಸಮಾರಂಭದ ಅಧ್ಯಕ್ಷತೆ ವಹಿಸಲಿದ್ದಾರೆ.


ನಿಸಾರ್ ಅಹ್ಮದ್


ವೂಡೇಕೃಷ್ಣ


ತಾರಿಣಿ



ಬೆಂಗಳೂರು ನಗರ ವಿಶ್ವವಿದ್ಯಾನಿಲಯದ ದ್ವಿತೀಯ ಘಟಿಕೋತ್ಸವದ ಕುರಿತು ವಿವಿ ಕುಲಪತಿ ಪ್ರೊ.ಲಿಂಗರಾಜ ಗಾಂಧಿ ಪತ್ರಿಕಾಗೋಷ್ಠಿಯಲ್ಲಿ ಮಾಹಿತಿ ನೀಡಿದರು. ಕುಲಸಚಿವರಾದ ಡಾ.ವಿ.ಲೋಕೇಶ್, ಡಾ.ಕೆ.ಆರ್.ಜಲಜಾ ಮತ್ತಿತರರು ಹಾಜರಿದ್ದರು.

ಜಯದೇವ ಹೃದ್ರೋಗ ವಿಜ್ಞಾನ ಮತ್ತು ಸಂಶೋಧನಾ ಸಂಸ್ಥೆಯ ನಿರ್ದೇಶಕ ಡಾ। ಸಿ.ಎನ್.ಮಂಜು ನಾಥ್ ಮುಖ್ಯ ಅತಿಥಿಗಳಾಗಿ ಆಗಮಿಸಿ ಘಟಿಕೋತ್ಸವ ಭಾಷಣ ಮಾಡಲಿದ್ದಾರೆ. ಉನ್ನತ ಶಿಕ್ಷಣ ಸಚಿವ ಡಾ। ಎಂ.ಸಿ.ಸುಧಾಕರ್ ಉಪಸ್ಥಿತರಿರುವರು ಎಂದು ಹೇಳಿದರು.

**35,911 ವಿದ್ಯಾರ್ಥಿಗಳಿಗೆ ಪದವಿ:** 38 ವಿದ್ಯಾರ್ಥಿಗಳಿಗೆ 51 ಚಿನ್ನದ ಪದಕ ಒಳಗೊಂಡಂತೆ ವಿವಿಯ 29,914 ಸ್ನಾತಕ, 5997 ಸ್ನಾತಕೋತ್ತರ ಸೇರಿದಂತೆ ಒಟ್ಟು 35,911 ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಗುವುದು. ಇದರಲ್ಲಿ 21,239 ವಿದ್ಯಾರ್ಥಿನಿಯರು, 14,672 ವಿದ್ಯಾರ್ಥಿಗಳಿದ್ದಾರೆ. 61 ವಿದ್ಯಾರ್ಥಿಗಳು ರ್‍ಯಾಂಕ್ ಪಡೆದಿದ್ದಾರೆ ಎಂದು ಮಾಹಿತಿ ನೀಡಿದರು. ಕುಲಸಚಿವರಾದ ಡಾ। ವಿ.ಲೋಕೇಶ್, ಡಾ। ಕೆ.ಆರ್.ಜಲಜಾ, ಹಣಕಾಸು ಅಧಿಕಾರಿ ಜಿ.ಪಿ.ರಘು, ರಾಷ್ಟ್ರೀಯ ಸೇವಾ ಯೋಜನೆ ಸಂಯೋಜಕ ಡಾ। ಗೋವಿಂದಗೌಡ ಉಪಸ್ಥಿತರಿದ್ದರು.

### ಚಿನ್ನದ ಪದಕ ವಿಜೇತರು

ಸೆಂಟ್ರಲ್ ಕಾಲೇಜಿನ ಎಂಎಸ್ಸಿ ರಸಾಯನಶಾಸ್ತ್ರ ವಿಭಾಗದ ಪದ್ಮಾವತಿ ವಿ.ಕೆ.ನಾಯರ್, ಕೃಪಾನಿಧಿ ಕಾಲೇಜಿನ ಬಿಕಾಂ ವಿಭಾಗದ ಎಂ.ಅಜಿತ್‌ಕುಮಾರ್, ಶೇಷಾದ್ರಿಪುರಂ ಕಾಲೇಜಿನ ಬಿಬಿಎ ವಿದ್ಯಾರ್ಥಿನಿ ಎಸ್.ದೀಪ್ತಿ ತಲಾ 3 ಚಿನ್ನದ ಪದಕಕ್ಕೆ ಭಾಜನರಾಗಿದ್ದಾರೆ.